***RUSHIGALU :*** In Kannada, Compiled and Edited by **Vidwan B.N. Vijayeendracharya,** First Edition : 2014 (April) Published by **Shri Harivayu Prakashana,** No.2840/1, 'Padmalaya', 1st Main Road, Jayanagar, Mysore - 570 014. **Ph : 9448813696.**

<u>**E-mail :**</u> vijayeendra.bena@gmail.com



ಪ್ರಥಮ ಮುದ್ರಣ - 2014

ಪುಟಗಳು - XII + 286 = 298

ಬೆಲೆ - **₹ 160/-**

ಮುದ್ರಿತ ಪ್ರತಿಗಳು - 1000

ಸಂಪಾದಕರು - ವಿದ್ವಾನ್ ಬೆ.ನಾ. ವಿಜಯೀಂದ್ರಾಚಾರ್ಯ<br>ಮೈಸೂರು.

ಪ್ರಕಾಶಕರು - **ಶ್ರೀಹರಿವಾಯು ಪ್ರಕಾಶನ,**<br>ನಂ.೨೮೪೦/೧, ಪದ್ಮಾಲಯ, ೧ನೇ ಮುಖ್ಯರಸ್ತೆ,<br>ಜಯನಗರ, ಮೈಸೂರು.<br>**ಫೋನ್ : 9448813696**

ಅಕ್ಷರಜೋಡಣೆ - **ಶರತ್ ಚಂದ್ರ**

ಮುದ್ರಕರು - **ಪವನ್ ಗ್ರಾಫಿಕ್ಸ್ ಮತ್ತು ಪ್ರಿಂಟರ್ಸ್**<br>**ಮೈಸೂರು. ✆ : 7899779255**

# ಭೂಮಿಕಾ

ಮೂರ್ತಿಂ ಬ್ರಹ್ಮಣ್ಯದೇವಸ್ಯ ಬ್ರಹ್ಮಣ್ಯಂ ತೇಜ ಉತ್ತಮಮ್ ।
ಸೂರ್ಯಕೋಟಿಪ್ರತೀಕಾಶಮೃಷಿಬೃಂದಂ ವಿಚಿಂತಯೇ ॥

ಜಟಿಲಾನ್ ಭಸ್ಮದಿಗ್ಧಾಂಗಾನ್ ಸಾಕ್ಷಸೂತ್ರಕಮಂಡಲೂನ್ ।
ವಲ್ಕಲಾಜಿನಕೌಪೀನಾನ್ ಧ್ಯಾಯೇತ್ಸಪ್ತಋಷೀನ್ ಸದಾ ॥

ಋಷಿ ಎಂಬ ಧಾತುವು ಗತ್ಯರ್ಥಕನಾಗಿದ್ದರೂ ಜ್ಞಾನಾರ್ಥಕವಾಗಿದೆ. ಋಷಿಯೆಂಬ ಧಾತುವು ಶಾಸ್ತ್ರಜ್ಞಾನ, ಸತ್ಯ, ತಪಸ್ಸು ಎಂಬ ಈ ಅರ್ಥಗಳನ್ನು ಕೊಡುತ್ತದೆ. ಹೀಗೆ ಜ್ಞಾನ, ಸತ್ಯ, ತಪಸ್ಸು ಇವು ಯಾರಲ್ಲಿವೆಯೋ ಅವರನ್ನು ಬ್ರಹ್ಮದೇವನು ಋಷಿಯೆಂದು ಕರೆಯುವನು. ಅವರೇ ಋಷಿಗಳಾಗಿರುವರು.

ಇಂತಹ ಋಷಿಗಳು ತಮ್ಮ ಸ್ವಂತವಾದ ಬುದ್ಧಿಶಕ್ತಿಯಿಂದ ನಿವೃತ್ತಿ ಸಮಕಾಲದಲ್ಲಿಯೇ ಅವ್ಯಕ್ತನಾದ ಪರಮಪುರುಷನನ್ನು ತಿಳಿಯುವರು. ಹೀಗೆ ಈ ಋಷಿಗಳು ಪರಮಪುರುಷನನ್ನು ತಮ್ಮ ಜ್ಞಾನದೃಷ್ಟಿಯಿಂದ ತಿಳಿಯುವ ಕಾರಣದಿಂದ ಪರಮಮಹರ್ಷಿಗಳೆಂದು ಲೋಕಗಳಲ್ಲಿ ವಿಖ್ಯಾತರಾದರು. ಪರಮಪುರುಷನನ್ನು ಸಂಪೂರ್ಣವಾದ ಜ್ಞಾನದಿಂದ ನೋಡುವರೇ ಪರಮಮಹರ್ಷಿಗಳಾಗಿರುವರು.

ಹೀಗೆ ಅನಾದಿಕಾಲದಿಂದಲೂ ಋಷಿಶಬ್ದವು ಗತ್ಯರ್ಥಕವಾದ ಋಷ್ ಧಾತುವಿನಿಂದ ಜನ್ಯವಾಗಿದೆ. ಇಂತಹ ಋಷಿಶಬ್ದ ವಾಚ್ಯರಾದ ಜ್ಞಾನಿಗಳು ತಾವೇ ಪರಾಧೀನರಾಗದೇ ಉದ್ಭೂತರಾದಕಾರಣ ಆತ್ಮರ್ಷಿಗಳೆಂದು ವಿಖ್ಯಾತರಾಗಿರುವರು. ಹೀಗೆ ಸ್ವತಂತ್ರರೂ ಸ್ವೇಚ್ಛಾಸಂಭೂತರೂ ಆದ ಈ ಪರಮಮಹರ್ಷಿಗಳು ಬ್ರಹ್ಮದೇವನ ಮಾನಸಪುತ್ರರಾಗಿರುವರು.

ಯಾರು ಸಮಸ್ತಗುಣಪೂರ್ಣನೂ ಮಹಾತ್ಮನೂ ಆದ ಭಗವಂತನನ್ನು ತಿಳಿಯುತ್ತಾರೋ ಸ್ವತಂತ್ರರೂ, ಮಂಗಳಾಂಗರೂ, ಬ್ರಹ್ಮದೇವರ ಮಾನಸಪುತ್ರರೂ ಆದ ಮಹಾತ್ಮರು ಅಹಂಭಾವವನ್ನು ಅಜ್ಞಾನವನ್ನೂ ಬಿಟ್ಟು ಮಹರ್ಷಿಗಳಾಗಿರುವರು. ಇಂತಹ ಮಹರ್ಷಿಗಳು ಭೂತಾದಿಗಳ ತತ್ವಜ್ಞಾನಿಗಳಾದ ಕಾರಣ ಮಹಾತ್ಮರಾಗಿರುವರು.

ಮಹಾತೇಜಸ್ವಿಗಳಾದ ಮಹರ್ಷಿಗಳು ಪಂಚತನ್ಮಾತ್ರೆಗಳನ್ನೂ, ಸತ್ಯವನ್ನೂ ತಿಳಿಯುವವರಾಗಿರುವರು. ಅವರು ಉತ್ತಮರೂ ಸತ್ಯದರ್ಶಿಗಳೂ ಆಗಿರುವ ಕಾರಣ ಸತ್ಯರ್ಷಿಗಳೆಂದೂ ಲೋಕಸಮ್ಮತರಾಗಿರುವರು. ಇಂತಹ ಋಷಿಕುಮಾರರು ಋಷಿಪುತ್ರಕರೆಂದು ಪ್ರಖ್ಯಾತರಾಗಿರುವರು. ಅವರು ಶ್ರುತಿ ಸ್ಮೃತಿಗಳನ್ನೂ, ಅವುಗಳ ತತ್ವಗಳನ್ನೂ ವಿಶೇಷಕಾರವಾಗಿ ತಿಳಿದಿರುವುದರಿಂದ ಅವರಿಗೆ ಶ್ರುತರ್ಷಿಗಳೆಂದು ಹೆಸರು ಬಂದಿದೆ. ಇಂತಹ ಶ್ರುತರ್ಷಿಗಳು ಶ್ರುತಿಪಾರಂಗತರಾಗಿರುವರು.

ಅವ್ಯಕ್ತತತ್ವಾಭಿಮಾನಿಯೂ, ಮಹಾಲಕ್ಷ್ಮಿಯೂ, ಬ್ರಹ್ಮದೇವನೂ, ಮಹಾತತ್ವಾಭಿಮಾನಿಗಳಾಗಿರುವರು. ರುದ್ರದೇವನು ಅಹಂಕಾರ ತತ್ವಾಭಿಮಾನಿ-ಯಾಗಿರುವರು. ಇದರಂತೆ ಭೂತಾಭಿಮಾನಿಗಳೂ, ಇಂದ್ರಿಯಾಭಿಮಾನಿಗಳೂ ಆದ ದೇವತೆಗಳಿರುವರು. ಇಂತಹ ಅಭಿಮಾನಿ ದೇವತೆಗಳ ಜ್ಞಾನವನ್ನು ಬಲ್ಲವರೇ ಋಷಿಗಳು. ಈ ರೀತಿಯಾಗಿ ಋಷಿಜಾತಿಗಳಿರುವುವು. ಆ ಋಷಿಗಳ ಜಾತಿಗಳು ಐದೇ ಲೋಕದಲ್ಲಿ ಪ್ರಸಿದ್ಧವಾಗಿವೆ.

ಭೃಗು, ಮರೀಚಿ, ಅತ್ರಿ, ಅಂಗಿರಸ, ಪುಲಹ, ಕ್ರತು, ಮನು, ದಕ್ಷ, ವಸಿಷ್ಠ, ಪುಲಸ್ತ್ಯ ಎಂಬುದಾಗಿ ಈ ಹತ್ತು ಜನ ಋಷಿಗಳು ಲೋಕವಿಖ್ಯಾತರಾಗಿರುವರು. ಈ ಹತ್ತು ಜನರೂ ಬ್ರಹ್ಮದೇವನ ಮಾನಸಪುತ್ರರೂ, ಸ್ವೇಚ್ಛಾಚಾರಿಗಳೂ, ಸ್ವತಂತ್ರರೂ ಆಗಿರುವರು.

ಮುನಿಗಳಿಂದ ಮಹತ್ತಾದ ಅನೇಕ ವಿಷಯಗಳು ಲೋಕಗಳಲ್ಲಿ ಪ್ರಖ್ಯಾತವಾಗಿರುವುದರಿಂದ ಅವರು ಮಹರ್ಷಿಗಳೆಂದು ಪ್ರಸಿದ್ಧರಾಗಿರುವರು. ಇವರು ಸ್ವತಂತ್ರರೂ, ಬ್ರಹ್ಮನ ಮಾನಸಕುಮಾರರೂ ಆಗಿರುವರು. ಅವರು ಶುಕ್ರ, ಬೃಹಸ್ಪತಿ, ಕಶ್ಯಪ, ಉಪನಶ. ಉತಥ್ಯ, ವಾಮದೇವ, ಅಪೋಜ್ಯ, ಐಶಿಜ, ಕರ್ದಮ, ವಿಶ್ರವಸ್ಸು, ಶಕ್ತಿ, ವಾಲಿಖಿಲ್ಯ, ಧರ ಇವರು ಮಹರ್ಷಿಗಳೆಂದು ಪ್ರಖ್ಯಾತರಾಗಿರುವರು. ಇವರು ಜ್ಞಾನದಿಂದ ಋಷಿಗಳಾಗಿರುವರು. ಋಷಿಪುತ್ರರು ಋಷಿಕರಾಗಿರುವರು. ಅವರು ಯಾರೆಂದರೆ ವತ್ಸರ, ನಗ್ರಹೂ, ಭಾರದ್ವಾಜ, ಬೃಹದುತ್ಥ, ಶರದ್ವಂತ, ವಾಜಶ್ರವಸ, ಸುಮಿತ್ತ, ಸುವಾಕ್ಕು, ವೇಷಪರಾಯಣ, ದಧೀಚಿ, ಶಂಖಮಂತ, ವೈಶ್ರವಣ ಇವರು ಋಷಿಕುಮಾರರೂ, ಋಷಿನಾಮಕರೂ ಆಗಿರುವರು. ಇವರು ತಮ್ಮ ಸತ್ಯತೆಯಿಂದ ಋಷಿತ್ವವನ್ನು ಹೊಂದಿರುವರು.

ಸ್ವತಂತ್ರರಾದ ಋಷಿಗಳು, ಋಷೀಕರು ಮತ್ತು ಇತರರಾದ ಜ್ಞಾನಿಗಳು ಆದ ಯಾರು ಲೋಕಸಮ್ಮತರಾಗಿರುವರೋ ಇವರೆಲ್ಲರೂ ಮಂತ್ರದ್ರಷ್ಟ್ರುಗಳಾಗಿರುವರು. ಅವರು ಭೃಗು, ಕಾವ್ಯ, ಪ್ರಚೇತಸ, ದಧೀಚಿ, ಜ್ಞಾನಿಯಾದ ಔರ್ವ, ಜಮದಗ್ನಿ, ವಿದ, ಸಾರಸ್ವತ, ಆರ್ಟಿಷೇಣ, ಅರೂಪ, ವೀತಹವ್ಯ, ಸುಮೇಧಸ, ವೈನ್ಯ, ಪೃಥು, ದಿವೋದಾಸ, ಪ್ರಶ್ವಾರ, ಗೃತ್ಸಮದ, ನಭ ಇವರು ಮಂತ್ರದ್ರಷ್ಟ್ರುಗಳಾಗಿರುವರು. ಇವರು ಇಪ್ಪತ್ತೊಂದುಜನರಿರುವರು. ಇವರಿಂದಲೇ ಮಂತ್ರಗಳು ವ್ಯಕ್ತಗಳಾಗಿವೆ.

ಆಂಗಿರಸ, ವೇಧಸ, ಭಾರದ್ವಾಜ, ಬಾಷ್ಕಲಿ, ಅಮೃತ, ಗಾರ್ಗ್ಯ, ಶೇನೀ, ಸಂಹೃತಿ, ಪುರು, ಕುತ್ಸ, ಮಾಂಧಾತ, ಅಂಬರೀಷ, ಆಹಾರ್ಯ, ಅಜಮೀಢ, ಋಷಭ, ಬಲಿ, ಪೃಷದಶ್ವ, ವಿರೂಪ, ಕಣ್ವ, ಮುದ್ಗಲ, ಯುವನಾಶ್ವ, ಪೌರುಕುತ್ಸ, ತ್ರಸದಸ್ಯು, ದಸ್ಯುವಂತ, ಉತಥ್ಯ, ಭರದ್ವಾಜ, ವಾಜಶ್ರವಸ್ಸು, ಆಯೂದ್ಯ, ಸುವಿತ್ತಿ, ವಾಮದೇವ, ಔಗಜ, ಬೃಹದುಕ್ಥ, ದೀರ್ಘತಮಸ್ಸು, ಕಕ್ಷೀವಂತರೆಂಬ ಮೂವತ್ತಮೂರುಜನರು ಪ್ರಖ್ಯಾತರಾದ ಆಂಗಿರಸರ ವಂಶದವರಾಗಿರುವರು. ಈ ಮೂವತ್ತು ಮೂರು ಮಹರ್ಷಿಗಳು ಮಂತ್ರದ್ರಷ್ಟ್ರುಗಳಾಗಿರುವರು.

ಕಾಶ್ಯಪ, ವತ್ಸಾರ, ಬಭ್ರಮ, ರೈಭ್ಯ-ಅಸಿತ, ದೇವಲರೆಂಬ ಈ ಆರುಜನರೂ ಬ್ರಹ್ಮವಾದಿಗಳಾಗಿರುವರು. ಅತ್ರಿ, ಅರ್ಚಿಸನ, ಶ್ಯಾಮಾವಂತ, ನಿಷ್ಠುರ, ವಲ್ಗೂತಕ, ಜ್ಞಾನಿಯಾದ ಮುನಿ, ಪೂರ್ವಾತಿಥಿ, ಈ ಮಹರ್ಷಿಗಳು ಅತ್ರಿಗೋತ್ರೋತ್ಪನ್ನರೂ, ಮಂತ್ರದ್ರಷ್ಟ್ರುಗಳೂ, ಮಹಾಜ್ಞಾನಿಗಳೂ ಇರುವರು.

ವಸಿಷ್ಠ, ಶಕ್ತಿ, ಪರಾಶರ, ನಾಲ್ಕನೆಯವನು ಇಂದ್ರಪ್ರಮತಿ ಐದನೆಯವನು ಭರದ್ವಸು, ಆರನೆಯವನು ಮೈತ್ರಾವರುಣ ಏಳನೆಯವನು ಕುಂಡಿನ, ಎಂಟನೆಯವನು ಸುದ್ಯುಮ್ನ, ಒಂಭತ್ತನೆಯವನು ಬೃಹಸ್ಪತಿ ಹತ್ತನೆಯವನು ಭರದ್ವಾಜ ಇವರು ಮಂತ್ರಬ್ರಾಹ್ಮಣಕಾರಕರಾಗಿರುವರು. ಈ ಹತ್ತುಜನ ಮಹರ್ಷಿಗಳೂ ಸತ್ಯಧರ್ಮಸ್ಥಾಪಕರಾಗಿಯೂ, ಅಧರ್ಮವನ್ನು ಧ್ವಂಸ ಮಾಡುವವರಾಗಿಯೂ, ಬ್ರಹ್ಮಜ್ಞಾನೋಪದೇಶಕರಾಗಿಯೂ, ಸರ್ವಶಾಖಾ-ಪ್ರವರ್ತಕರಾಗಿಯೂ, ಲೋಕ ಕಲ್ಯಾಣಕರ್ತರಾಗಿಯೂ ಇರುವರು.

ಹೇತುಶಬ್ದವು ಹಿಂಸಾರ್ಥಕವಾದ 'ಹಿ' ಧಾತುವಿನಿಂದ ನಿಷ್ಪನ್ನವಾಗಿದೆ. ಏವಂಚ ಮಹರ್ಷಿಗಳು ಪರೋಕ್ಷವಾದ ಅಧರ್ಮವನ್ನು ಹಿಂಸಕರಾದ ಕಾರಣ ಹೇತು

ಶಬ್ದವಾಚ್ಯರಾಗಿರುವರು. ಗತಿಕರ್ಮಕವಾದ ಹಿಧಾತುವಿನಿಂದ ಜನ್ಯವಾಗಿದೆ. ಮಾರ್ಗದರ್ಶಕರೂ, ಸತ್ಕರ್ಮಾನುಷ್ಠಾನಿಗಳೂ ಆದವರೇ ಪರಮಮಹರ್ಷಿ-ಗಳಾಗಿರುವರು.

ಯಾರು ವಾಕ್ಯಾರ್ಥಸ್ವರೂಪವನ್ನು ವಿವರಣೆ ಮಾಡುತ್ತಾರೆಯೋ, ದುಷ್ಕರ್ಮಾದಿಗಳನ್ನು ನಿಂದಿಸುತ್ತಾರೆಯೋ ಅವರೇ ಆಚಾರ್ಯಪುರುಷರಾಗಿರುವರು. ಯಾವ ದೋಷದಿಂದ ಮಾತು ದೂಷಿತವಾಗುತ್ತದೆಯೋ ಅಂತಹ ದೋಷ-ಪರಿಹಾರಕರೂ ಆದವರೇ ಮಹಾತ್ಮರಾಗಿರುವರು.

ಹೀಗೆ ಋಷಿಗಳ ಬಗ್ಗೆ ವಿಸ್ತಾರವಾದ ವಿವರಣೆಯು ವಿಷ್ಣುಪುರಾಣದಲ್ಲಿ ಮೂಡಿಬಂದಿದೆ. ''ಸತ್ಯಂ ಜ್ಞಾನಮನಂತಂ ಬ್ರಹ್ಮ। ಯೋ ವೇದನಿಹಿತಂ ಗುಹಾಯಾಂ ಪರಮೇ ವ್ಯೋಮನ್ ಸೋಶ್ನುತೇ ಸರ್ವಾನ್ ಕಾಮಾನ್ ಬ್ರಹ್ಮಣಾ ವಿಪಶ್ಚಿತಾ'' ಎಂಬ ವೇದಮಂತ್ರದಲ್ಲಿ ಹೇಳಿದಂತೆ ಹೃದಯದಲ್ಲಿ ನಿತ್ಯವೂ ಶ್ರೀಹರಿಯನ್ನು ನೆಲೆನಿಲ್ಲಿಸಿ ಧ್ಯಾನಿಸುವ ಋಷಿಗಳ ಮಹತ್ವವನ್ನು ಏನೆಂದು ವರ್ಣಿಸೋಣ!

ಇಂತಹ ಋಷಿಗಳ ಜೀವನದ ರೋಚಕ ಕಥೆಗಳನ್ನು ಓದಿರಿ! ಮಕ್ಕಳಿಗೂ ಹೇಳಿರಿ! ಅನರ್ಘ್ಯವಾದ ಬದುಕನ್ನು ಅವರ ಆದರ್ಶಜೀವನದ ಚಿಂತನೆಗಳ ಜೊತೆಗೆ ಹೋಲಿಸಿಕೊಂಡು ಸಾರ್ಥಕತೆಯ ಉಸಿರಾವಾಡಿ. ಹಾಳು ಹರಟೆ, ಭೋಗವಿಲಾಸದ ಸ್ವಾರ್ಥ ಬದುಕುಗಳನ್ನು ಧಿಕ್ಕರಿಸಿ ಶ್ರೀಹರಿ ಕರುಣಿಸಿದ ವೈಷ್ಣವಜನ್ಮವನ್ನು ಸಾರ್ಥಕಪಡಿಸಿಕೊಳ್ಳಿ.

-ಬೆ.ನಾ. ವಿಜಯೀಂದ್ರಾಚಾರ್ಯ
ಸಂಪಾದಕರು,
ಮೈಸೂರು.



# ಪ್ರಕಾಶಕರ ನುಡಿ

ಮಂತ್ರವಿಧರಾದ ಋಷಿಗಳ ಜೀವನಕ್ರಮವು ಸಮಗ್ರ ಭಾರತೀಯರ ಏಳಿಗೆಗೆ ಆದರ್ಶವನ್ನು ನೀಡುವಂತಹದ್ದು. ಸಮಗ್ರ ಜೀವನವನ್ನೇ ಶ್ರೀಗಂಧದ ಕೊರಡಿನಂತೆ ಭಗವಂತನಿಗೆ ಸಮರ್ಪಣೆ ಮಾಡಿದ ಮಂತ್ರದ್ರಷ್ಟಾರರು ಋಷಿಗಳು ಎನಿಸಿದ್ದಾರೆ. ಇಂತಹ ಋಷಿಗಳ ಪರಂಪರೆಯಿಂದಲೇ ಉದಿಸಿಬಂದ ಬ್ರಾಹ್ಮಣಕುಲ ಇಂದಿಗೂ ಕಲಿಯುಗದ ವಿರುದ್ಧ ಸ್ವಲ್ಪಮಟ್ಟಿಗಾದರೂ ಸೆಟೆದು ನಿಲ್ಲುವಲ್ಲಿ ಸಮರ್ಥವಾಗಿದೆ. ಇದಕ್ಕೆ ಮೂಲಕಾರಣ ನಮ್ಮ ಪ್ರಾಚೀನ ಋಷಿಗಳ ಆನುವಂಶಿಕವಾಗಿ ಹರಿದು ಬಂದ ರಕ್ತ ನಮ್ಮಲ್ಲಿರುವುದು. ಪ್ರಾಚೀನ ಋಷಿಗಳ ಸ್ಮರಣೆ ಇಲ್ಲದೆ ಮಾಡುವ ಸತ್ಕರ್ಮಗಳೆಲ್ಲವೂ ನಿಷ್ಫಲವಾಗುತ್ತವೆ. ಈ ದೃಷ್ಟಿಯಿಂದ ಪುರಾಣ, ವೇದ, ಮಹಾಭಾರತಗಳ, ಆಧಾರದಲ್ಲಿ ದೊರೆತಷ್ಟು ಮಂತ್ರದ್ರಷ್ಟಾರರಾದ ಋಷಿಗಳ ಕಥೆಗಳನ್ನು ಸಂಗ್ರಹಿಸಲು ಪ್ರಯತ್ನ ಮಾಡಿದ್ದೇವೆ.

ಋಷಿಗಳ ಕಥೆಗಳು ಮತ್ತು ಅವರ ಉಪದೇಶಗಳಲ್ಲಿ ಸಾಕಷ್ಟು ಗೊಂದಲಬರುವ ರೀತಿಯಲ್ಲಿ ಕಥೆಗಳನ್ನು ಲೇಖನ ಮಾಡಿದವರು ಇದ್ದಾರೆ. ಆದಷ್ಟು ವ್ಯಾಸರ ಮೂಲಕ್ಕೆ ಉಚಿತವಾಗುವ ರೀತಿಯಲ್ಲಿ ಕಥೆಗಳನ್ನು ಸಂಗ್ರಹಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಈ ಸಂಗ್ರಹದಲ್ಲಿ ನಿರತನಾದಾಗ ನನಗೆ ಅತ್ಯಂತ ಸಹಕಾರವನ್ನು ನೀಡಿದ ಕೃತಿಗಳು 'ಋಷಿಪರಂಪರೆ' ಮತ್ತು 'ಮಹಾಭಾರತದ ಮಹಿಳೆಯರು'. ಈ ಪುಸ್ತಕಗಳ ಸಂಪಾದಕರಾದ ಮತ್ತು ಲೇಖಕರಾದ ವಿದ್ವಾನ್ ಪಂಡರಿನಾಥಾಚಾರ್ಯ ಗಲಗಲಿ ಇವರನ್ನು, ವಿದ್ವಾನ್ ಬುರ್ಲಿ ಬಿಂದುಮಾಧವ ಇವರನ್ನು ಅತ್ಯಂತ ಕೃತಜ್ಞತಾಪೂರ್ವಕವಾಗಿ ಸ್ಮರಿಸಿಕೊಳ್ಳುತ್ತೇನೆ. ಕೆಲವೊಂದು ಕಥೆಗಳನ್ನು ಅವರ ಶೈಲಿಯಲ್ಲಿಯೇ ನೀಡಲಾಗಿದೆ. ಇದರಂತೆ 'ಉದಯವಾಣಿ' ಪತ್ರಿಕೆಯ ಸಾಪ್ತಾಹಿಕ ಪುರವಣಿ ಪುಟದಲ್ಲಿ ಶ್ರೀಯುತ ವಿದ್ವಾನ್ ಹಿರಣ್ಯ ವೇಂಕಟೇಶ್ ಇವರು ಅನೇಕ ಕಥೆಗಳನ್ನು ಸಂಗ್ರಹಿಸಿದ್ದಾರೆ. ಅಲ್ಲಿಯ ಕೆಲವು ಕಥೆಗಳನ್ನು ಇಲ್ಲಿ ಸಂಗ್ರಹಿಸಿ ಸ್ವೀಕರಿಸಿದ್ದೇವೆ. ಇದರಂತೆ ಮಧ್ವಮತದ ಸಂಚಿಕೆಯಾದ

ಆಚಾರ-ವಿಚಾರ ಪತ್ರಿಕೆಯಲ್ಲಿ ಶ್ರೀಯುತ ವಿದ್ವಾನ್ ಅಮೃತೇಶ್ ಇವರ ಶ್ರೀಮತಿ 'ಶ್ರೀ' ಎನ್ನುವ ಹೆಸರಿನಲ್ಲಿ ಅನೇಕ ಕಥೆಗಳನ್ನು ಸಂಗ್ರಹಿಸಿದ್ದಾರೆ. ಕೆಲವೊಂದು ಕಥೆಗಳನ್ನು ಅಲ್ಲಿಂದಲೂ ಸಂಗ್ರಹಿಸಲಾಗಿದೆ ಈ ಎಲ್ಲ ಲೇಖಕರಿಗೂ ತುಂಬುಹೃದಯದ ಕೃತಜ್ಞತೆಗಳನ್ನು ಪುನಃ ಪುನಃ ಸಮರ್ಪಿಸುತ್ತೇವೆ.

ಇದರಂತೆ ಅನೇಕ ಕಥೆಗಳ ಸಂಗ್ರಹವನ್ನು ಬೇರೆ ಪುರಾಣಗಳ ಆಧಾರದಲ್ಲಿ ಬರೆದಿದ್ದೇನೆ.

ಇಂತಹ ಒಂದು ಶ್ರೇಷ್ಠವಾದ ಕೃತಿಯನ್ನು ನಮ್ಮ ಮಕ್ಕಳಿಗೆ ಬಾಲ್ಯದಿಂದಲೇ ತಿಳಿಸುವ ರೀತಿಯಲ್ಲಿ ತಯಾರಿಸಬೇಕೆಂದು ಹವಣಿಸುತ್ತಿದ್ದಾಗ ಇದಕ್ಕೆ ಬೇಕಾದ ಧನಸಹಾಯವನ್ನು ಉದಾರ ಮನಸ್ಸಿನಿಂದ ದಿ. ಶ್ರೀಯುತ ರಾಮಚಂದ್ರ ಚಿಟಗುಪ್ಪ ಹುಬ್ಬಳ್ಳಿ, ದಿ. ಶ್ರೀಮತಿ ಶಾಂತಾಬಾಯಿ ಇವರ ಸುಪುತ್ರರಾದ ಶ್ರೀಯುತ ಅಶೋಕ್ ರಾ.ಚಿ. ಶ್ರೀಮತಿ ಕೃಷ್ಣವೇಣಿ, ಕುಮಾರಿ ಆಶಿಕಾ (ಮೈಸೂರು) ಕುಟುಂಬದವರು ಮಾಡಿರುತ್ತಾರೆ. ಇವರ ಅಗ್ರಜರಾದ ಶ್ರೀಯುತ ರಾ.ಚಿ. ರಾಘವೇಂದ್ರ ಇವರ ಸಂಪೂರ್ಣ ಸಹಕಾರ ಆಶೀರ್ವಾದದ ಬಲದಿಂದ ಇಂತಹ ಸೇವೆಯನ್ನು ಮಾಡಿರುವುದಾಗಿ ಶ್ರೀಯುತ ಅಶೋಕ್‌ರವರು ತಿಳಿಸಿರುತ್ತಾರೆ. ಇವರೆಲ್ಲರಿಗೂ ಭಗವಂತನು ಸನ್ಮಂಗಳವನ್ನುಂಟುಮಾಡಲೆಂದು ಇತೋಪ್ಯತಿಶಯ- ವಾದ ಜೀವನೋತ್ಸಾಹ ಅಭಿವೃದ್ಧಿಗಳನ್ನು ಕರುಣಿಸಲೆಂದು ನಮ್ಮ ಪ್ರಕಾಶನದ ವತಿಯಿಂದ ಪ್ರಾರ್ಥಿಸುತ್ತೇವೆ. ಜೊತೆಗೆ ನಮ್ಮ ಪ್ರಕಾಶನದ ಎಲ್ಲ ಕೃತಿಗಳಿಗೂ ಉದಾರವಾಗಿ ಸಹಕರಿಸುತ್ತಿರುವ ಶ್ರೀಯುತ ಪಿ.ಎನ್. ಮುರಳಿ ಮತ್ತು ಶ್ರೀಮತಿ ರೇವತಿ ಕುಟುಂಬದವರಿಗೂ ಶ್ರೀಹರಿವಾಯು-ಗುರುಗಳ ವಿಶೇಷ ಅನುಗ್ರಹವನ್ನು ಬಯಸುತ್ತಿದ್ದೇವೆ.

- ಪ್ರಕಾಶಕರು,

ಶ್ರೀ ಹರಿವಾಯು ಪ್ರಕಾಶನ

# ವಿಷಯಾನುಕ್ರಮಣಿಕೆ


| | | |
|---|---|---|
| 1. | ಹಯಗ್ರೀವ | 1 |
| 2. | ವ್ಯಾಸಾವತಾರ ಮತ್ತು ಶಾಸ್ತ್ರಪರಂಪರೆ | 3 |
| 3. | ಮಹಿದಾಸ | 11 |
| 4. | ನಾರಾಯಣ | 13 |
| 5. | ಕಪಿಲ | 14 |
| 6. | ಶುಕಾಚಾರ್ಯರು | 17 |
| 7. | ನಾರದ | 19 |
| 8. | ಬ್ರಹ್ಮಜ್ಞಾನಿ ಭೃಗುಮುನಿ | 22 |
| 9. | ಕಶ್ಯಪ | 30 |
| 10. | ಅತ್ರಿ | 32 |
| 11. | ಭಾರದ್ವಾಜ | 34 |
| 12. | ವಿಶ್ವಾಮಿತ್ರ | 40 |
| 13. | ಗೌತಮ | 44 |
| 14. | ಜಮದಗ್ನಿ | 51 |
| 15. | ಬ್ರಹ್ಮರ್ಷಿ ವಸಿಷ್ಠರು | 55 |
| 16. | ಆಂಗಿರಸ | 70 |
| 17. | ಕಕ್ಷೀವಂತ | 71 |
| 18. | ಕೌತ್ಸ | 73 |
| 19. | ದೀರ್ಘತಮಸ್ | 75 |
| 20. | ಕಣ್ವ | 79 |
| 21. | ಮುದ್ಗಲ | 82 |
| 22. | ಚ್ಯವನ | 84 |
| 23. | ಔರ್ವ | 101 |
| 24. | ಬೈದ | 106 |
| 25. | ಗೃತ್ಸಮದ | 107 |
| 26. | ಗೌರವೀತಿ | 112 |
| 27. | ಅಗಸ್ತ್ಯ | 115 |

| | | |
|---|---|---|
| 28. | ಪುಲಸ್ತ್ಯರು | 131 |
| 29. | ಪುಲಹ | 134 |
| 30. | ಮರೀಚಿ | 135 |
| 31. | ಮಾಂಡವ್ಯ | 136 |
| 32. | ರೈಭ್ಯ | 139 |
| 33. | ಚಂಡತಾಪಸ ಪರಾಶರ | 143 |
| 34. | ಯಾಜ್ಞವಲ್ಕ್ಯ | 151 |
| 35. | ಪೈಂಗ್ಯ | 153 |
| 36. | ಕಂಡು | 153 |
| 37. | ಶಾಕಲ್ಯ | 156 |
| 38. | ರೈಕ್ವ | 158 |
| 39. | ಸತ್ಯಕಾಮ | 160 |
| 40. | ಸಾಂದೀಪನಿ | 162 |
| 41. | ಜರತ್ಕಾರು | 164 |
| 42. | ಉದ್ದಾಲಕ ಶ್ವೇತಕೇತು | 170 |
| 43. | ನಚಿಕೇತ | 175 |
| 44. | ಆರುಣಿ | 177 |
| 45. | ಉಪಮನ್ಯು | 179 |
| 46. | ಉದಂಕ | 187 |
| 47. | ಶೃಂಗಿ | 199 |
| 48. | ವಾಲಖಿಲ್ಯ | 201 |
| 49. | ದಧೀಚ | 204 |
| 50. | ಋಚೀಕ | 208 |
| 51. | ಮಹರ್ಷಿ ಶರಭಂಗ | 213 |
| 52. | ಋಷ್ಯಶೃಂಗ | 214 |
| 53. | ಜಹ್ನು | 221 |
| 54. | ಖಾಂಡಿಕ್ಯ | 222 |
| 55. | ಜಾಬಾಲಿ | 224 |
| 56. | ಶುನಃಶ್ಶೇಪ | 226 |
| 57. | ತಾಪಸ ಚಿರಕಾರಿ (ಶತಾನಂದ) | 228 |

58. ಬಕದಾಲ್ಭ್ಯ 230
59. ಆತ್ರೇಯಿ 232
60. ಜಾಬಾಲಿ 234
61. ಇಂದ್ರೋತ 235
62. ಮಾರ್ಕಂಡೇಯ 236
63. ಮಹಾಮುನಿ ಕಕ್ಷೀವಾನ 241
64. ಬಭ್ರು 242
65. ಗಾಲವ 243
66. ಶಂಖ-ಲಿಖಿತರು 244
67. ಆಪಸ್ತಂಬ 246
68. ಶರಭಂಗ 248
69. ಗೋಬಿಲ 251
70. ಸೌಭರಿ 253
71. ಅರಿಷ್ಟನೇಮಿ 255
72. ಮಹಾಮುನಿ ಚೂಲಿ 257
73. ಪ್ರಮತಿ 258
74. ಮಹರ್ಷಿ ಬಾಲಧಿ 261
75. ಪ್ರಭಾಕರ 262
76. ಪೃಷದಶ್ವ 263
77. ಬಟು 264
78. ದಾಶೂರ 265
79. ತ್ರಿತ 266
80. ನವಗ್ರಹಗಳ ಉತ್ಪತ್ತಿ 269
81. ಗೋತ್ರಪ್ರವರಣಾಂ ವಿವರಣಮ್ 280



# ಶ್ರೀವೇದವ್ಯಾಸರು



ವ್ಯಾಸಾಯಾಪ್ರತಿಮೇತಿಹಾಸರಚನೋಲ್ಲಾಸಾಯದುರ್ವಾದಿನಾಮ್ ।
ತ್ರಾಸಾಯಾಸಕರಾಯ ಸತ್ಸುಕೃತವಿಶ್ವಾಸಾಯದೋಷದ್ವಿಷೇ ॥
ಭಾಸಾಯಾಮುನರಮ್ಯತೋಯಸದೃಶಾಯ ಆಸಾಯಮಾಸಾವಿನೇ ।
ದಾಸಾಯಾಭಯದಾಯ ಮಧ್ವಗುರುಹೃದ್ವಾಸಾಯ ತುಭ್ಯಂ ನಮಃ ॥

॥ ಶ್ರೀ ಗುರುಭ್ಯೋ ನಮಃ ॥
॥ ಶ್ರೀರುಗ್ಮಿಣೀಶಾಯ ನಮಃ ॥

# ಹಯಗ್ರೀವ

ಪರಮಾತ್ಮನ ಹಯಗ್ರೀವರೂಪವು ಸಾಕ್ಷಾತ್ ಪ್ರಾದುರ್ಭಾವರೂಪವೆನಿಸಿದೆ. ಉಪನಿಷತ್ತು, ಭಾರತ, ಭಾಗವತ, ಹರಿವಂಶ, ಪ್ರಕಾಶ ಸಂಹಿತೆ, ವಿಷ್ಣುರಹಸ್ಯ ಮುಂತಾದವುಗಳನ್ನು ಗಮನಿಸಿದಾಗ ನಾಲ್ಕು ಬಾರಿ ಹಯಗ್ರೀವ ಅವತಾರವಾಗಿರುವುದಾಗಿ ತಿಳಿಯುತ್ತದೆ.

೧) ಸೃಷ್ಟಿಪೂರ್ವದಲ್ಲಿ ಬ್ರಹ್ಮದೇವನಿಗೆ ಉಪದೇಶಿಸಿದ ಹಯಗ್ರೀವ.

೨) ಸೃಷ್ಟಿಯನಂತರ ಮಧು-ಕೈಟಭರ ಸಂಹಾರಕ್ಕಾಗಿ ಬಂದ ಹಯಗ್ರೀವ.

೩) ದಿತಿಪುತ್ರ ಹಯಗ್ರೀವನ ಸಂಹಾರಕ್ಕಾಗಿ ಬಂದ ರೂಪ.

೪) ಬ್ರಹ್ಮದೇವರ ಸತ್ರಯಾಗದಲ್ಲಿ ಪ್ರಾದುರ್ಭಾವಿಸಿದ ರೂಪ.

ಸಕಲವೇದವಿದ್ಯೆಗಳಿಗೂ ಸರ್ವಜ್ಞನಾದ ಹಯಗ್ರೀವನೇ ಪ್ರಥಮ ದ್ರಷ್ಟಾರನಾದ್ದರಿಂದ ಇವನೇ ಋಷಿ, ಋಷಿಶಬ್ದದಿಂದ ಹಯಗ್ರೀವನೇ ವಾಚ್ಯ. ಈ ಹಯಗ್ರೀವನ ಅನುಗ್ರಹದಿಂದಲೇ ತಪಸ್ಸುಮಾಡಿ ಬ್ರಹ್ಮಾದಿದೇವತೆಗಳು ಮಂತ್ರಾದಿಗಳಿಗೆ ಋಷಿಗಳೆನಿಸಿದ್ದಾರೆ.

ಹಯಗ್ರೀವನ ಶ್ವಾಸರೂಪದಿಂದಲೇ ಸಕಲ ಉಪನಿಷತ್ತುಗಳೂ, ಮಂತ್ರಗಳೂ, ಮೂಲರಾಮಾಯಣ, ಪಂಚರಾತ್ರಸಂಹಿತೆ, ಬ್ರಹ್ಮಸೂತ್ರ, ವೇದ, ವೇದವ್ಯಾಖ್ಯಾನ, ಇತಿಹಾಸ, ಪುರಾಣ, ಶ್ಲೋಕ ಎಲ್ಲವೂ ಹೊರಹೊಮ್ಮಿದೆ. ಇವುಗಳನ್ನು

ಬ್ರಹ್ಮದೇವರು, ಗರುಡಶೇಷರುದ್ರರು, ದಕ್ಷಾದಿಗಳು, ಸನಕಾದಿಗಳು, ಇಂದ್ರಾದಿಗಳು, ಮನುಗಳೂ ಸ್ವೀಕರಿಸಿರುವರು.

ಹಯಗ್ರೀವಬ್ರಹ್ಮವಿದ್ಯೆ ಎಂದು ಹೆಸರಿರುವ ಮಧು ವಿದ್ಯಾಪ್ರತಿಪಾದ್ಯ ಹಾಗೂ ಬ್ರಹ್ಮದೇವರಿಗೆ ಮಧುವಿದ್ಯೋಪದೇಶಕನಾಗಿ ಸಾಮವೇದ; ಛಾಂದೋಗ್ಯೋಪನಿಷತ್ತನ್ನು ರಮಾದೇವಿಯರಿಗೆ ಉಪದೇಶಿಸಿ ಅವರಿಂದಲೇ ಈ ಉಪನಿಷತ್ತಿನ ರೂಪದಲ್ಲಿ ಸ್ತುತಿಸಲ್ಪಟ್ಟವನು. ಗಾಯತ್ರೀಮಂತ್ರದಲ್ಲಿ ವಾಗ್ ನಾಮಕನಾಗಿ ಸ್ತ್ರೀರೂಪದಿಂದ ಇರುವವನು.

ಹಯಗ್ರೀವರೂಪಗಳು ಮೂರು ಬಗೆ. ಒಂದು ಅರ್ಧನರ-ಅರ್ಧಹಯ ರೂಪಗಳ ಸಮ್ಮಿಶ್ರಣದ ಪುರುಷರೂಪ. ಮತ್ತೊಂದು ಗಾಯತ್ರೀ ಪ್ರತಿಪಾದ್ಯ ವಾಕ್ ನಾಮಕ. ಪೂರ್ಣಸ್ತ್ರೀರೂಪದಲ್ಲಿ ವಡವಾವಕ್ತ್ರ ಎಂದೆನಿಸುವ ಹೆಣ್ಣು ಕುದುರೆಯ ರೂಪ. ಈ ಎರಡು ರೂಪಗಳನ್ನು 'ತುರಂಗವದನಂ, ಸ್ತ್ರೀರೂಪೋ ಹಯಶೀರ್ಷಕಃ' ಎಂದು ಶ್ರೀಮದಾಚಾರ್ಯರೇ ಹೇಳಿದ್ದಾರೆ. ಐತರೇಯೋಪನಿಷತ್ತಿನ ತಾಮ್ರಪರ್ಣೀಯ ವ್ಯಾಖ್ಯಾನದಲ್ಲಿ ಭಗವಂತನ ಮತ್ಸ್ಯ ಮತ್ಸ್ಯ, ಮತ್ಸ್ಯಕೂರ್ಮ ಮುಂತಾದ ಅಚಿಂತ್ಯಾದ್ಭುತೈಶ್ವರ್ಯರೂಪಗಳನ್ನು ತಿಳಿಸುವಾಗ ಅರ್ಧನಾರೀ ಪುರುಷರೂಪಗಳನ್ನು ಹೇಳುವ ರೂಪಗಳನ್ನು ತಿಳಿಸುವಾಗ ಅರ್ಧನಾರೀ ಪುರುಷರೂಪಗಳನ್ನು ಹೇಳುವ ಸಂದರ್ಭದಲ್ಲಿ ಅರ್ಧಸ್ತ್ರೀರೂಪಯಾತ್ಮಕಂ ಎಂಬ ವಾಕ್ಯವಿದೆ. ಇದರಿಂದ ಅರ್ಧಸ್ತ್ರೀಹಯ (ವಡವಾ)= ಹೆಣ್ಣುಕುದುರೆಯ ರೂಪ ಹಾಗೂ ಪುರುಷರೂಪಗಳನ್ನೊಳಗೊಂಡ ಮಗದೊಂದು ಹಯಗ್ರೀವರೂಪದ ಉಲ್ಲೇಖ ಗಮನಾರ್ಹವಾಗಿರುವುದು. ಇದರ ಜೊತೆಯಲ್ಲಿ ಶ್ರೀವಾದಿರಾಜರಿಗೆ ಒಲಿದ ಕುದುರೆಯ ರೂಪವೂ ಒಂದಿದೆ.

ಹಯಗ್ರೀವನ ವರ್ಣವೂ ಮೂರುಬಗೆ-ಸೂತ್ರಭಾಷ್ಯದಲ್ಲಿ (೧-೨-೨೩) ಶ್ರೀಮದಾಚಾರ್ಯರು ತಿಳಿಸಿದಂತೆ ಶುದ್ಧವಾದ ವರ್ಣಗಳು ನಾಲ್ಕೇ. ಬಿಳಿ, ಕೆಂಪು, ನೀಲ, ಚಿನ್ನದವರ್ಣಗಳು. ದೇವತಾದಿದೇಹಗಳಲ್ಲಿ ಇವುಗಳ ಮಿಶ್ರಣವಿದ್ದಂತೆ ಭಗವಂತನಲ್ಲಿಲ್ಲ. ಇದರಲ್ಲಿ ಶುದ್ಧಸತ್ತ್ವಾತ್ಮಕನಾದ್ದರಿಂದ ಶುಕ್ಲ (ಬಿಳಿ) ಎಂದು

ಭಾಗವತ ತಾತ್ಪರ್ಯದಲ್ಲಿ, ತಂತ್ರಸಾರದಲ್ಲಿ ಹೇಳಿದರೆ, ಭಾಗವತದಲ್ಲಿ ಬ್ರಹ್ಮದೇವರು ವರ್ಣಿಸಿದಂತೆ ತಪನೀಯವರ್ಣ ಬಂಗಾರದ ಬಣ್ಣ, ವಾದಿರಾಜರು ರಚಿಸಿರುವ ವರಾಹಹಯಗ್ರೀವ ಸ್ತುತಿಯಲ್ಲಿ 'ಹರಿನ್ಮಣಿಮಣಿದ್ಯುತೀ........' ನೀಲವರ್ಣದ ಹಯಗ್ರೀವರೂಪ ಮೂರನೆಯದು.

ಹಯಗ್ರೀವನ ಸ್ಥಾನಗಳೂ ಮೂರುಬಗೆ. ಗಾಯತ್ರೀಪ್ರತಿಪಾದ್ಯವಾದ ಸ್ತ್ರೀರೂಪೀ ಹಯಗ್ರೀವ ಸೂರ್ಯಮಂಡಲದಲ್ಲಿದ್ದಂತೆ, ನರಹಯಗ್ರೀವ ಚಂದ್ರಮಂಡಲದಲ್ಲಿರುವನು. ಪಂಚರಾತ್ರಾಗಮವು 'ಪುಂಡರೀಕೇ ನಿಷಣ್ಣಃ' ಎಂಬುದಾಗಿ ಚಂದ್ರಮಂಡಲ ಮಧ್ಯವರ್ತಿಯಾಗಿ ಕಮಲಾಸನದಲ್ಲಿ ಕುಳಿತ ರೂಪವನ್ನು ವರ್ಣಿಸುತ್ತದೆ. ಇದರಂತೆ ಜೀವರ ಹೃದಯದ ಅಷ್ಟದಳ ಕಮಲದಲ್ಲಿ ವಾಯುವ್ಯದಿಕ್ಕಿನದಳದಲ್ಲಿದ್ದು ಪ್ರವಾಹವಾಯುವಿನಿಂದ ಉಪಾಸ್ಯನಾಗಿ ಜೀವರಿಗೆ ಗಮನಾಗಮನ ವ್ಯಾಪಾರಗಳನ್ನು ಮಾಡಿಸುತ್ತಿರುವನೆಂದೂ ವ್ಯಾಸದಾಸಸಾಹಿತ್ಯಗಳು ವರ್ಣಿಸುತ್ತವೆ.

★ ★ ★ ★

## ವ್ಯಾಸಾವತಾರ ಮತ್ತು ಶಾಸ್ತ್ರಪರಂಪರೆ

ಪರಮಾತ್ಮನಿಂದ ಹುಟ್ಟಿದ ಋಗಾದಿ ಚತುರ್ವೇದ ಸಮೂಹರೂಪವಾದ ವೇದವು ನಾಲ್ಕು ಪಾದಗಳಾಗಿ ಅಪರಿಮಿತವಾದ ಮಂತ್ರಗಳಿಂದ ಕೂಡಿದ್ದಿತು. ಆ ವೇದ ಮಂತ್ರಗಳಿಂದ ಸಮಸ್ತ ಇಷ್ಟಾರ್ಥಗಳನ್ನೂ ಕೊಡುವ ಹತ್ತು ಬಗೆಯ ಯಜ್ಞಗಳು ಹೊರಬಿದ್ದುವು. ಆಮೇಲೆ ಈ ವೈವಸ್ವತ ಮನ್ವಂತರದಲ್ಲಿ ಇಪ್ಪತ್ತೆಂಟನೆಯ ದ್ವಾಪರ ಯುಗದಲ್ಲಿ ವ್ಯಾಸರು ವಿಷ್ಣುವಿನ ಅವತಾರವಾದುದರಿಂದ ಒಂದೇ ಆಗಿದ್ದ ವೇದವನ್ನು ನಾಲ್ಕು ವೇದಗಳಾಗಿ ಭಾಗ ಮಾಡಿದರು. ವೇದವ್ಯಾಸರು ಹೇಗೆ ವಿಭಾಗ ಮಾಡಿದರೋ ಹಾಗೆಯೇ ಹಿಂದಿನ ಚತುರ್ಯುಗಗಳಲ್ಲಿಯೂ ವ್ಯಾಸರು ವೇದಶಾಖಾ ವಿಭಾಗವನ್ನು ಮಾಡಿದರೆಂದು ತಿಳಿಯಬೇಕು. ನಾರಾಯಣನೇ ಕೃಷ್ಣದ್ವೈಪಾಯನ ವ್ಯಾಸನಾಗಿ ಅವತಾರ ಮಾಡಿದನೆಂದು ತಿಳಿ.

ಹಾಗಿಲ್ಲದಿದ್ದರೆ ಮಹಾಭಾರತ ಗ್ರಂಥವನ್ನು ಮಾಡುವ ಶಕ್ತಿಯು ಮತ್ತಾರಿಗೆ ಬರುವುದು.

ವ್ಯಾಸರು ವೇದವನ್ನು ಸಂಪೂರ್ಣವಾಗಿ ಕಲಿಯಲು ಸಮರ್ಥರಾದ ನಾಲ್ಕು ಜನ ಶಿಷ್ಯರನ್ನು ಸಂಪಾದಿಸಿದರು. ಋಗ್ವೇದವನ್ನು ಕಲಿಯುವುದಕ್ಕೆ ಪೈಲನೆಂಬುವನನ್ನೂ ಯಜುರ್ವೇದವನ್ನು ಕಲಿಯುವುದಕ್ಕೆ ವೈಶಂಪಾಯನನನ್ನೂ ಸಾಮವೇದಕ್ಕೆ ಜೈಮಿನಿಯನ್ನೂ ಅಥರ್ವವೇದಕ್ಕೆ ಸುಮಂತುವನ್ನೂ ಶಿಷ್ಯರನ್ನಾಗಿ ಗ್ರಹಿಸಿದರು. ಇತಿಹಾಸ ಪುರಾಣಗಳನ್ನು ಕಲಿವುದಕ್ಕೆ ರೋಮಹರ್ಷಣನೆಂಬ ಮಹಾಬುದ್ಧಿಶಾಲಿಯಾದ ಸೂತನನ್ನು ಶಿಷ್ಯನನ್ನಾಗಿ ಮಾಡಿಕೊಂಡರು.

ಯಜ್ಞಕರ್ಮದಲ್ಲಿ ಯಜುರ್ವೇದ ಸಂಬಂಧವಾದ ಅಧ್ವರ್ಯುವಿನ ಪೂಜಾರೂಪವಾದ ಕರ್ಮವು ವಿಶೇಷವಾಗಿದ್ದುದರಿಂದ ಯಜುರ್ವೇದಕ್ಕೆ ಮುಖ್ಯತ್ವವನ್ನು ಹೇಳಿದೆ. ಹಿಂದೆ ಯಜುರ್ವೇದವೊಂದೇ ಇದ್ದಿತು. ನಾಲ್ಕು ಜನ ಋತ್ವಿಕ್ಕುಗಳು ಮಾಡಬೇಕಾದ ಕರ್ಮವಾದುದರಿಂದ ಚಾತುರ್ಹೋತ್ರವೆಂಬ ಯಜ್ಞದಲ್ಲಿ ಯಜುರ್ವೇದ ಮಂತ್ರಗಳನ್ನು ಹೇಳಿ ಕರ್ಮ ಮಾಡುವ ಋತ್ವಿಜನನ್ನು ಅಧ್ವರ್ಯುವೆಂದೂ ಋಗ್ವೇದ ಮಂತ್ರಗಳನ್ನು ಹೇಳಿ ಕರ್ಮ ಮಾಡುವ ಋತ್ವಿಜನನ್ನು ಹೋತೃವೆಂದೂ ಸಾಮಮಂತ್ರವನ್ನು ಹೇಳಿ ಕರ್ಮ ಮಾಡುವವನನ್ನು ಉದ್ಗಾತೃವೆಂದೂ ಅಥರ್ವವೇದ ಮಂತ್ರಗಳನ್ನು ಹೇಳಿ ಕರ್ಮ ಮಾಡುವವನನ್ನು ಬ್ರಹ್ಮನೆಂದೂ ಹೇಳುವರು.

ವ್ಯಾಸಮುನಿಯು ಒಂದೇ ಆಗಿದ್ದ ವೇದಮಂತ್ರಗಳಲ್ಲಿ ಋಕ್ಕು, ಯಜಸ್ಸು, ಸಾಮ ಎಂಬ ಮಂತ್ರಗಳನ್ನು ಬೇರೆ ಬೇರೆಯಾಗಿ ಗುಂಪು ಸೇರಿಸಿ ಋಗ್ವೇದ, ಯಜುರ್ವೇದ, ಸಾಮವೇದಗಳನ್ನು ಮಾಡಿದರು. ರಾಜರಿಗೆ ಅಥರ್ವವೇದ ಮಂತ್ರಗಳಿಂದ ಸಮಸ್ತ ಕರ್ಮಗಳನ್ನೂ ಮಾಡಿಸಿದರು. ಯಜ್ಞಗಳಲ್ಲಿ ಅಥರ್ವವೇದಮಂತ್ರಗಳನ್ನು ಬಲ್ಲವನೇ ಬ್ರಹ್ಮತ್ವವನ್ನು ಮಾಡಬೇಕು. ಒಂದೇ ಆಗಿದ್ದ ವೇದವೆಂಬ ಮಹಾವೃಕ್ಷವನ್ನು ವ್ಯಾಸರು ನಾಲ್ಕು ಭಾಗವಾಗಿ ಮಾಡಿದ ಮೇಲೆ ವೇದವೃಕ್ಷದ ದೊಡ್ಡ ಕಾಡಾಯಿತು.

ಮೊದಲು ಪೈಲನೆಂಬ ವ್ಯಾಸಶಿಷ್ಯನು ದೊಡ್ಡ ವೃಕ್ಷದಂತಿರುವ ಋಗ್ವೇದವನ್ನು ಎರಡು ಸಂಹಿತೆಗಳಾಗಿ ಮಾಡಿ ಒಂದನ್ನು ಇಂದ್ರಪ್ರಮತಿಯೆಂಬವನಿಗೂ, ಮತ್ತೊಂದನ್ನು ಬಾಷ್ಕಲನೆಂಬವನಿಗೂ ಹೇಳಿಕೊಟ್ಟರು. ಬಾಷ್ಕಲನು ತನ್ನ ಸಂಹಿತೆಯನ್ನು ನಾಲ್ಕು ಭಾಗಮಾಡಿ ಬೋಧ್ಯ, ಅಗ್ನಿಮಾಢಕ. (ಅಗ್ನಿಮಾಠರ) ಯಾಜ್ಞವಲ್ಕ್ಯ ಪರಾಶರ ಎಂಬ ನಾಲ್ವರು ಶಿಷ್ಯರಿಗೆ ಹೇಳಿಕೊಟ್ಟರು. ಬಾಷ್ಕಲ ಶಾಖೆಯ ಸಣ್ಣಶಾಖೆಗಳನ್ನು ಆ ಶಿಷ್ಯರು ಗ್ರಹಿಸಿದರು. ಇಂದ್ರಪ್ರಮತಿಯು ತನ್ನ ಶಾಖೆಯನ್ನು ತನ್ನ ಮಗನಾದ ಮಹಾ ಬುದ್ಧಿಶಾಲಿಯಾದ ಮಾಂಡೊಕೇಯನೆಂಬುವನಿಗೆ ಹೇಳಿಕೊಟ್ಟರು. ಶಾಕಲ್ಯನ ಸಹಪಾಠಿಯಾದ ಶಾಕಪೂರ್ಣನೆಂಬುವರು ಅದೇ ಸಂಹಿತೆಯನ್ನು ಮೂರು ಭಾಗ ಮಾಡಿದರು. ಮತ್ತು ವೇದಶಬ್ದಗಳಿಗೆ ಅರ್ಥವನ್ನು ತಿಳಿಸುವ ನಿರುಕ್ತವೆಂಬ ವೇದಾಂಗವನ್ನು ರಚಿಸಿದರು. ಈ ನಾಲ್ಕನ್ನೂ ತನ್ನ ಶಿಷ್ಯರಾದ ಕ್ರೌಂಚ, ವೈತಾಳಿಕ, ಬಲಾಕ, ನಿರುಕ್ತ ಎಂಬ ಶಿಷ್ಯರಿಗೆ ಹೇಳಿಕೊಟ್ಟ ಇವರಲ್ಲಿ ನಿರುಕ್ತನೆಂಬ ನಾಲ್ಕನೆಯ ಶಿಷ್ಯನು ವೇದಗಳನ್ನೂ ವೇದಾಂಗಗಳನ್ನೂ ಸಂಪೂರ್ಣವಾಗಿ ತಿಳಿದವನು.

ಹೀಗೆ ಋಗ್ವೇದದ ಪ್ರತಿಯೊಂದು ಶಾಖೆಯಿಂದಲೂ ಸಣ್ಣ ಸಣ್ಣ ಶಾಖೆಗಳು ಹೊರಟವು. ಬಾಷ್ಕಲಿಯೆಂಬ ಶಾಕಲ್ಯನ ಸಹಪಾಠಿಯಾದ ಮತ್ತೊಬ್ಬನು ತಾನು ಅಭ್ಯಾಸ ಮಾಡಿದ ಇಂದ್ರಪ್ರಮಿತಿ ಸಂಹಿತೆಯನ್ನು ಮೂರು ಭಾಗ ಮಾಡಿ ತನ್ನ ಶಿಷ್ಯನಾದ ಕಾಲಾಯನಿ, ಗಾರ್ಗ್ಯ, ಅಜಪ ಎಂಬವರಿಗೆ ಹೇಳಿಕೊಟ್ಟನು. ಈ ಋಗ್ವೇದ ಸಂಹಿತೆಯನ್ನು ಹೇಳಿದವರನ್ನೆಲ್ಲ ಬಹ್ವೃಚರೆಂದು ಹೇಳುವರು.

ವ್ಯಾಸಶಿಷ್ಯನಾದ ವೈಶಂಪಾಯನರು ಯಜುರ್ವೇದವೆಂಬ ವೃಕ್ಷಕ್ಕೆ ಇಪ್ಪತ್ತೇಳು ಶಾಖೆಗಳನ್ನು ಮಾಡಿದರು. ಅವುಗಳನ್ನು ಇಪ್ಪತ್ತೇಳು ಜನ ಶಿಷ್ಯರಿಗೆ ಹೇಳಿಕೊಟ್ಟರು. ಅವರು ಅವುಗಳನ್ನು ಕಲಿತರು.

ಅವರಲ್ಲಿ ಬ್ರಹ್ಮರಾತನೆಂಬ ಋಷಿಯ ಮಗನಾದ ಯಾಜ್ಞವಲ್ಕ್ಯನೆಂಬ, ಸದಾಗುರುಗಳ ಇಷ್ಟದಂತೆ ನಡೆಯುವ ಧರ್ಮಮಾರ್ಗಾಸಕ್ತನಾದ ಶಿಷ್ಯನೂ ಇದ್ದನು. ಋಷಿಗಳೆಲ್ಲರೂ ಸೇರಿ ಈ ದಿನ ನಮ್ಮ ಮಹಾಸಮಾಜದಲ್ಲಿ ಯಾವ

ಋಷಿಯು ಮೇರು ಪರ್ವತಕ್ಕೆ ಬರುವುದಿಲ್ಲವೋ ಅವನಿಗೆ ಏಳು ದಿನದೊಳಗಾಗಿ ಬ್ರಹ್ಮಹತ್ಯಾ ಪಾಪವು ಸಂಭವಿಸುವುದು ಎಂದು ಗೊತ್ತು ಮಾಡಿಕೊಂಡರು. ಈ ನಿಯಮವನ್ನು ವೈಶಂಪಾಯನನೊಬ್ಬನೇ ಮೀರಿದರು. ವೈಶಂಪಾಯನನು ಪ್ರಮಾದದಿಂದ ತನ್ನ ತಂಗಿಯ ಮಗನಾದ ಚಿಕ್ಕ ಹುಡುಗನಿಗೆ ಕಾಲನ್ನು ತಗುಲಿಸಿದ ಮಾತ್ರಕ್ಕೆ ಆ ಬಾಲಕನು ಸತ್ತು ಹೋದನು.

ವೈಶಂಪಾಯನನು ಶಿಷ್ಯರನ್ನು ಕುರಿತು ''ಎಲೈ ಶಿಷ್ಯರೇ! ಪ್ರಮಾದದಿಂದ ಬಾಲಕನು ಮೃತನಾದರೆ ಬ್ರಹ್ಮಹತ್ಯಾ ನಾಶಕವಾದ ವ್ರತವನ್ನು ಮಾಡಬೇಕೇ? ಬೇಡವೇ? ಎಂದು ವಿಚಾರ ಮಾಡಬೇಡಿ. ಸಾಕ್ಷಾತ್ ಬ್ರಹ್ಮಹತ್ಯೆಯನ್ನು ಮಾಡಿದರೆ ಹೇಗೆ ವ್ರತಾಚರಣೆಯನ್ನು ಮಾಡಬೇಕೋ ಹಾಗೆಯೇ ಆ ವ್ರತವನ್ನು ನನಗೋಸ್ಕರವಾಗಿ ನೀವೆಲ್ಲರೂ ಆಚರಿಸಬೇಕು'' ಎಂದು ಹೇಳಿದನು. ಆಗ ಯಾಜ್ಞವಲ್ಕ್ಯನು ''ಗುರುಗಳೇ ಇವರೆಲ್ಲರೂ ಶಕ್ತಿಹೀನರು. ಇವರನ್ನೇಕೆ ಕಷ್ಟಪಡಿಸಬೇಕು. ಈ ವ್ರತವನ್ನು ತಮಗಾಗಿ ನಾನೊಬ್ಬನೇ ಆಚರಿಸುವೆನು'' ಎಂದನು.

ಈ ಮಾತನ್ನು ಕೇಳಿ ಕೋಪವನ್ನು ಹೊಂದಿದ ಗುರುವು ಯಾಜ್ಞವಲ್ಕ್ಯನನ್ನು ಕುರಿತು ಬ್ರಾಹ್ಮಣಾವಮಾನವನ್ನು ಮಾಡಿದ ಯಾಜ್ಞವಲ್ಕ್ಯನೇ ಈ ಬ್ರಾಹ್ಮಣ ಶ್ರೇಷ್ಠರನ್ನು ತೇಜಸ್ವಿಗಳಲ್ಲವೆಂದು ಹೇಳಿದುದರಿಂದ ನಾನು ಹೇಳಿಕೊಟ್ಟ ವೇದಗಳನ್ನೆಲ್ಲ ಬಿಟ್ಟು ಬಿಡು. ನನ್ನಾಜ್ಞೆಯನ್ನು ನಡೆಸದ ಶಿಷ್ಯನಿಂದ ನನಗೇನೂ ಪ್ರಯೋಜನವಿಲ್ಲ'' ಎಂದನು.

ಬಳಿಕ ಯಾಜ್ಞವಲ್ಕ್ಯನೂ ಕೋಪದಿಂದ ಗುರುವಿನಲ್ಲಿ ಭಕ್ತಿಯಿಂದ ನಾನು ಈ ಮಾತನ್ನಾಡಿದೆನು. ನನಗೂ ತಮ್ಮ ಗುರುತ್ವವು ಬೇಡ. ನೀವು ಹೇಳಿಕೊಟ್ಟ ವೇದಗಳನ್ನು ತೆಗೆದುಕೊಳ್ಳಿರೆಂದು ಬಾಯಿಗೆ ಬೆಟ್ಟುಗಳನ್ನು ಹಾಕಿ ವಮನ ಮಾಡಿ ರಕ್ತದಲ್ಲಿ ನೆನೆದ ಯಜುಸ್ಸುಗಳನ್ನು ಕೊಟ್ಟು ಹೊರಟು ಹೋದನು.

ಯಾಜ್ಞವಲ್ಕ್ಯನು ವಮನಮಾಡಿದ ಯಜಸ್ಸುಗಳನ್ನು ಮಿಕ್ಕ ಋಷಿಗಳು ತಿತ್ತಿರಿಯೆಂಬ ಪಕ್ಷಿರೂಪದಿಂದ ಗ್ರಹಣ ಮಾಡಿದರು. ಆದುದರಿಂದ ಅವರು

ತೈತ್ತಿರೀಯರೆನಿಸಿಕೊಂಡರು. ಗುರುವಿನ ಮಾತಿನಿಂದ ಬ್ರಹ್ಮಹತ್ಯಾನಿವಾರಕವಾದ ವ್ರತವನ್ನಾಚರಿಸಿದವರೆಲ್ಲರೂ ಯಜುಶ್ಶಾಖಾಧ್ಯಾಯಿಗಳಾಗಿ ಅಧ್ವರ್ಯುಗಳಾದರು (ಚರಣಾಧ್ವರ್ಯುಗಳೆಂದು ಪಾಠಾಂತರ)

ಅತ್ತ ಯಾಜ್ಞವಲ್ಕ್ಯನು ಪ್ರಾಣಾಯಾಮದಲ್ಲಾಸಕ್ತನಾಗಿ ಯಜುರ್ವೇದವನ್ನು ಕಲಿಯಬೇಕೆಂದು ಸೂರ್ಯನಿಗೆ ನಮಸ್ಕಾರ ಮಾಡಿ ಸ್ತೋತ್ರ ಮಾಡಿದನು.

ಮುಕ್ತಿಗೆ ಮಾರ್ಗರೂಪನೂ, ಮಹಾತೇಜಸ್ವಿಯೂ, ಋಗ್ಯಜುಸ್ಸಾಮಗಳೆಂಬ ವೇದತ್ರಯರೂಪವಾದ ಪ್ರಕಾಶವುಳ್ಳವನೂ, ಗಾಯತ್ರೀಮಂತ್ರಾಭಿಮಾನ ದೇವತೆಯೂ ಆದ ಸೂರ್ಯನಿಗೆ ನಮಸ್ಕಾರವು.

ಅಗ್ನೀಷೋಮಾತ್ಮಕನಾಗಿ ಜಗತ್ತಿಗೆ ಕಾರಣಸ್ವರೂಪನಾಗಿ ತನ್ನ ಸುಷಮ್ನಾ ಎಂಬ ಕಿರಣದಿಂದ ಚಂದ್ರನಿಗೆ ಪ್ರಕಾಶವನ್ನುಂಟುಮಾಡುವ ಸಮಸ್ತ ಲೋಕಕ್ಕೂ ಬೆಳಕನ್ನುಂಟು ಮಾಡುವ ಭಾಸ್ಕರನಿಗೆ ನಮಸ್ಕಾರವು.

ಕಲಾ, ಕಾಷ್ಠಾ, ನಿಮೇಷ ಮುಂತಾದ ಕಾಲರೂಪನಾಗಿ ಪ್ರಪಂಚರೂಪನೂ ಧ್ಯಾನಗೋಚರನೂ, ಪರಮಾತ್ಮಸ್ವರೂಪನೂ ಆದ ಸೂರ್ಯನಿಗೆ ನಮಸ್ಕಾರವು. ತನ್ನ ಕಿರಣದಿಂದ ಚಂದ್ರಮಂಡಲವನ್ನು ತುಂಬಿ ದೇವತೆಗಳನ್ನು ರಕ್ಷಿಸುವ ಸ್ವಧಾ ರೂಪವಾದ ಅಮೃತ ರಸದಿಂದ ಪಿತೃಗಳನ್ನು ತೃಪ್ತಿಪಡಿಸುವ ಸೂರ್ಯನಿಗೆ ನಮಸ್ಕಾರವು. ಹಿಮ ಶಕೆ ಮಳೆ ಇವುಗಳನ್ನುಂಟುಮಾಡುವವನೂ, ನಾಶಮಾಡುವವನೂ ಆದ ತ್ರಿಕಾಲ ಸ್ವರೂಪನೂ, ಸೃಷ್ಟಿಕರ್ತನೂ ಆದ ಸೂರ್ಯನಿಗೆ ನಮಸ್ಕಾರವು. ಜಗತ್ತಿನ ಕತ್ತಲೆಯನ್ನು ನಾಶಮಾಡಿ ಲೋಕಕ್ಕೊಡೆಯನಾಗಿ ಸತ್ವಮೂರ್ತಿಯಾದ ವಿವಸ್ವಂತನಿಗೆ ನಮಸ್ಕಾರವು.

ಸೂರ್ಯದೇವನು. ಉದಯಿಸದಿದ್ದರೆ ಜನರು ಸತ್ಕರ್ಮ ಯೋಗ್ಯರಾಗುವುದಿಲ್ಲ. ಶುದ್ಧರೂ ಆಗುವುದಿಲ್ಲ. ಸೂರ್ಯಕಿರಣಗಳು ಜನರನ್ನು ಸ್ಪರ್ಶಮಾಡಿದರೆ ಅವರು ಕರ್ಮ ಮಾಡುವುದಕ್ಕೆ ಯೋಗ್ಯರಾಗುವರು. ಶುದ್ಧಿಗೆ ಕಾರಣನಾದ ಶುದ್ಧಾತ್ಮಸ್ವರೂಪನಾದ ಸೂರ್ಯನಿಗೆ ನಮಸ್ಕಾರವು. ಸವಿತೃ, ಸೂರ್ಯ, ಭಾಸ್ಕರ, ವಿವಸ್ವಂತ, ಆದಿತ್ಯ ಎಂಬ ಹೆಸರುಗಳುಳ್ಳ ದೇವತೆಗಳಿಗೆಲ್ಲ

ಮೊದಲನೆಯವನಾದ ಸೂರ್ಯನಿಗೆ ನಮಸ್ಕಾರವು. ಸೂರ್ಯನ ರಥವು ಚಿನ್ನದಿಂದ ಮಾಡಿದುದು. ಅಂದರೆ ತೇಜೋರೂಪವಾದುದು, ಕಿರಣಗಳು ಜ್ಞಾನಸ್ವರೂಪವಾದವುಗಳು. ಕುದುರೆಗಳು ಛಂದಸ್ಸಿನ ಸ್ವರೂಪವಾದುವುಗಳು. ಇವು ಜಗತ್ತನ್ನು ನೋಡಬೇಕೆಂಬ ಕಣ್ಣುಗಳುಳ್ಳ ಸೂರ್ಯನನ್ನು ಧರಿಸಿರುವುವು. ಅಂತಹ ಸೂರ್ಯನನ್ನು ನಾನು ನಮಸ್ಕರಿಸುವೆನು.

ಹೀಗೆಂದು ಯಾಜ್ಞವಲ್ಕ್ಯನು ಸ್ತೋತ್ರ ಮಾಡಿದ ಮೇಲೆ ಸೂರ್ಯನು ಕುದುರೆಯ ರೂಪದಿಂದ ಅವನಿಗೆ ಕಾಣಿಸಿಕೊಂಡು ಇಷ್ಟಾರ್ಥವನ್ನು ಕೇಳು ಎಂದನು. ಯಾಜ್ಞವಲ್ಕ್ಯನು ಸೂರ್ಯನಿಗೆ ನಮಸ್ಕರಿಸಿ ಸೂರ್ಯದೇವನೇ ನಮ್ಮ ಗುರುವಿಗೆ ತಿಳಿಯದಿರುವ ಯಜುರ್ವೇದವನ್ನು ನನಗೆ ಹೇಳಿಕೊಡಬೇಕು'' ಎಂದನು.

ಹೀಗೆಂದು ಯಾಜ್ಞವಲ್ಕ್ಯನು ಕೇಳಿದ ಮೇಲೆ ಸೂರ್ಯದೇವನು ವೈಶಂಪಾಯನನಿಗೆ ಬರದಿರುವ ಅಯಾತಯಾಮವೆಂಬ ಹೆಸರುಳ್ಳ ಯಜುರ್ವೇದವನ್ನು ಅವನಿಗೆ ಹೇಳಿಕೊಟ್ಟನು. ಅವನಿಂದ ಇತರ ಬ್ರಾಹ್ಮಣರು ಆ ವೇದವನ್ನು ಕಲಿತರು. ಸೂರ್ಯನು ಕುದುರೆಯ ರೂಪದಿಂದ ಹೇಳಿಕೊಟ್ಟುದರಿಂದ ಆ ಶಾಖೆಗೆ ವಾಜಸನೇಯ ಶಾಖೆಯೆಂದು ಹೆಸರಾಯಿತು. ಯಾಜ್ಞವಲ್ಕ್ಯನು ಹೇಳಿಕೊಟ್ಟನು. ವಾಜಸನೇಯ ಶಾಖೆಯಲ್ಲಿ ಕಣ್ವಾದಿ ಹದಿನೈದು ಶಾಖೆಗಳಿರುವವು.

ವ್ಯಾಸರ ಶಿಷ್ಯನಾದ ಜೈಮಿನಿ ಋಷಿಯು ಸಾಮವೇದವೆಂಬ ವೃಕ್ಷದ ಶಾಖೆಯನ್ನು ಹೇಗೆ ವಿಭಾಗ ಮಾಡಿದನೆಂಬುದನ್ನು ಹೇಳುವೆನು ಕೇಳು. ಜೈಮಿನಿ ಋಷಿಗೆ ಸುಮಂತುವೆಂಬ ಮಗನಿದ್ದನು. ಆ ಸುಮಂತುವಿಗೆ ಸುತ್ವನೆಂಬ ಮಗನಾದನು. ಅವರಿಬ್ಬರೂ ಜೈಮಿನಿಯು ಮಾಡಿದ ಒಂದೊಂದು ಶಾಖೆಯನ್ನು ತಮ್ಮತಮ್ಮ ಕಾಲದಲ್ಲಿ ಅಭ್ಯಾಸಮಾಡಿದರು.

ಸುತ್ವನ ಮಗನಾದ ಸುಕರ್ಮನೆಂಬವನು ಸಾಮಸಂಹಿತೆಯನ್ನು ಸಾವಿರ ಭಾಗವಾಗಿ ಮಾಡಿದನು. ಅದನ್ನು ಅವರ ಶಿಷ್ಯರಾದ ಹಿರಣ್ಯನಾಭ ಅಥವಾ ಕೌಸಲ್ಯ ಪೌಷ್ಪಿಂಜಿ ಎಂಬಿಬ್ಬರು ಅಭ್ಯಾಸ ಮಾಡಿದರು. ಹಿರಣ್ಯನಾಭನೆಂಬುವನಿಗೆ ಉತ್ತರ

ದೇಶದ ಸಾಮಶಾಖೆಯ ಐನೂರು ಜನ ಶಿಷ್ಯರಿದ್ದರು. ಅವರು ಹಿರಣ್ಯನಾಭನಿಂದ ಸಾಮಸಂಹಿತೆಯನ್ನು ಕಲಿತು ಕಾಲಾಂತರದಲ್ಲಿ ಬೇರೆ ದೇಶದಲ್ಲಿ ವಾಸಮಾಡುತ್ತಿದ್ದುದರಿಂದ ಅವರನ್ನು ಪಂಡಿತರು ಪ್ರಾಚ್ಯಸಾಮಗರೆಂದು ಕರೆದರು.

ಲೋಕಾಕ್ಷಿ, ಕೌಮುದಿ, ಕಕ್ಷೀವಂತ, ಲಾಂಗಲಿ ಎಂಬವರು ಪೌಷ್ಯಿಂಜಯ ಶಿಷ್ಯರು ಇವರ ಶಿಷ್ಯಪ್ರಶಿಷ್ಯರಿಂದ ಸಾಮಸಂಹಿತೆಯು ವಿಸ್ತಾರವಾಯಿತು. ಹಿರಣ್ಯನಾಭನ ಶಿಷ್ಯನಾದ ಕೃತನಾಮನೆಂಬುವನು ತನ್ನ ಶಿಷ್ಯರಿಗೆ ಇಪ್ಪತ್ತನಾಲ್ಕು ಸಾಮಸಂಹಿತೆಯನ್ನು ಹೇಳಿಕೊಟ್ಟನು. ಅವರೂ ಸಾಮವೇದವನ್ನು ಅನೇಕ ಶಾಖೆಗಳಾಗಿ ಮಾಡಿದರು.

ಸುಮಂತನೆಂಬ ವ್ಯಾಸಶಿಷ್ಯನು ತನ್ನ ಶಿಷ್ಯನಾದ ಕಬಂಧನೆಂಬವನಿಗೆ ಅಥರ್ವಣ ವೇದವನ್ನು ಹೇಳಿಕೊಟ್ಟನು. ಕಬಂಧನು ಅದನ್ನು ಎರಡು ಭಾಗಮಾಡಿ ದೇವದರ್ಶ, ಪಥ್ಯ ಎಂಬ ಇಬ್ಬರು ಶಿಷ್ಯರಿಗೆ ಹೇಳಿಕೊಟ್ಟನು. ದೇವದರ್ಶನಿಗೆ ಮೇಧ, ಬ್ರಹ್ಮಬಲಿ, ಶೌಲ್ಕಾಯನಿ, ಪಿಪ್ಪಲಾದ ಎಂಬ ನಾಲ್ವರು ಶಿಷ್ಯರಿದ್ದರು. ದೇವದರ್ಶನು ತಾನು ಕಲಿತ ಸಂಹಿತೆಯನ್ನು ನಾಲ್ಕು ಭಾಗಮಾಡಿ ಶಿಷ್ಯರಿಗೆ ಹೇಳಿಕೊಟ್ಟನು. ಪಥ್ಯನಿಗೆ ಜಾಬಾಲಿ, ಕುಮುದಾದಿ, ಶೌನಕ, ಎಂಬ ಮೂವರು ಶಿಷ್ಯರು. ಪಥ್ಯನು ತನ್ನ ಸಂಹಿತೆಯನ್ನು ಮೂರು ಭಾಗ ಮಾಡಿ ಶಿಷ್ಯರಿಗೆ ಹೇಳಿಕೊಟ್ಟನು. ಅವರೂ ತಮ್ಮ ಸಂಹಿತೆಯನ್ನು ಬೇರೆ ಬೇರೆಯಾಗಿ ಮಾಡಿದರು. ಶೌನಕರು ತನ್ನ ಸಂಹಿತೆಯನ್ನು ಎರಡು ಭಾಗ ಮಾಡಿ ಒಂದನ್ನು ಬಭ್ರುವಿಗೂ, ಮತ್ತೊಂದನ್ನು ಸೈಂಧವನೆಂಬವನಿಗೂ ಹೇಳಿದರು.

ಸೈಂಧವನಿಂದ ಮುಂಜಿಕೇಶನೆಂಬವನು ಸಂಹಿತೆಯನ್ನು ಅಭ್ಯಾಸಮಾಡಿ ಅದನ್ನು ನಕ್ಷತ್ರ ಕಲ್ಪ, ವೇದಕಲ್ಪ, ಸಂಹಿತಾಕಲ್ಪ, ಆಂಗೀರಸಕಲ್ಪ, ಶಾಂತಿಕಲ್ಪ ಎಂದು ಐದುಭಾಗ ಮಾಡಿದನು. ನಕ್ಷತ್ರಕಲ್ಪವೆಂಬುದು ಜ್ಯೋತಿಶ್ಶಾಸ್ತ್ರಕ್ಕೆ ಸೇರಿದ ನಕ್ಷತ್ರ ಪೂಜಾವಿಧಿಯನ್ನು ಹೇಳುವುದು. ವೇದಕಲ್ಪವು, ಯಜ್ಞಬ್ರಹ್ಮತ್ವ ಮುಂತಾದ ವಿಧಿಗಳನ್ನು ಹೇಳುವುದು. ಸಂಹಿತಾ ಕಲ್ಪವು ಮಂತ್ರಭಾಗವಾಗಿರುವುದು. ಆಂಗೀರಸಕಲ್ಪವು ಅಭಿಚಾರ ವಿಧಿಯನ್ನು ಹೇಳುವುದು. ಶಾಂತಿಕಲ್ಪವು ಹದಿನೆಂಟು ಬಗೆಯ ಮಹಾಶಾಂತಿಕ್ರಮವನ್ನು ಹೇಳುವುದು. ಈ ಸೈಂಧವಮುಂಜಿಕೇಶ ಸಂಹಿತೆಯು ಅಥರ್ವಣ ವೇದಾಭ್ಯಾಸಿಗಳಿಗೆ ಅತ್ಯಂತ ಶ್ರೇಷ್ಠವಾದುದಾಗಿರುವುದು.

ಪುರಾಣಾರ್ಥಗಳನ್ನು ತಿಳಿದ ವ್ಯಾಸನು ಆಖ್ಯಾನ, ಉಪಾಖ್ಯಾನ, ಗಾಥಾ, ಕಲ್ಪಶುದ್ಧಿ ಇವುಗಳಿಂದ ಕೂಡಿ ಪುರಾಣ ಸಂಹಿತೆಯನ್ನು ರಚಿಸಿದನು. ತಾನೇ ನೋಡಿದುದನ್ನು ಹೇಳುವುದು ಆಖ್ಯಾನವೆನಿಸುವುದು. ತಾನು ಕೇಳಿದುದನ್ನು ಹೇಳುವುದು, ಉಪಾಖ್ಯಾನವೆನಿಸುವುದು. ದೊಡ್ಡವರು ಲೋಕದ ಜನರೂ ಆಡುವ ಮಾತುಗಳು ಗಾದೆಗಳು. ಕಲ್ಪಶುದ್ಧಿಯೆಂಬುದು ವರಾಹಕಲ್ಪಾದಿಗಳ ವೃತ್ತಾಂತ ಅಥವಾ ಪಿತೃಕಲ್ಪ, ಮಂತ್ರಕಲ್ಪ ಮುಂತಾದ ವಿಧಿಗಳು. ರೋಮಹರ್ಷಣನ ಮಗನಾದ ಸೂತನೆಂಬುವನು ವ್ಯಾಸರ ಪ್ರಸಿದ್ಧ ಶಿಷ್ಯನಾಗಿದ್ದನು. ಅವನಿಗೆ ವ್ಯಾಸರು ಪುರಾಣ ಸಂಹಿತೆಯನ್ನು ಹೇಳಿಕೊಟ್ಟರು.

ಸುಮತಿ, ಅಗ್ನಿವರ್ಚ, ಮಿತ್ರಾಯು, ಶಾಂಸಪಾಯನ, ಅಕೃತವ್ರಣ, ಸಾವರ್ಣಿ ಎಂಬ ಆರು ಜನರು ಸೂತನ ಶಿಷ್ಯರಾಗಿದ್ದರು. ಈ ಆರುಜನರೂ ಸೂತನು ಮಾಡಿದ ಆರು ಪುರಾಣ ಸಂಹಿತೆಯನ್ನು ಅಭ್ಯಾಸ ಮಾಡಿದರು. ಅಕೃತವ್ರಣನೆಂಬ ಕಾಶ್ಯಪನೂ, ಸಾವರ್ಣಿ ಶಾಂತಪಾಯನರೂ ಮಾಡಿದ ಮೂರು ಸಂಹಿತೆಗಳೂ ಮಿಕ್ಕ ಮೂರು ಜನರ ಮೂಲ ಸಂಹಿತೆಯೂ ಸೇರಿ ಒಟ್ಟು ನಾಲ್ಕು ಸಂಹಿತೆಯಿಂದ ಸಾರವನ್ನು ತೆಗೆದುಕೊಂಡು ನಾನು ಈ ವಿಷ್ಣುಪುರಾಣವನ್ನು ರಚಿಸಿದೆನು. ಪುರಾಣಗಳನ್ನು ತಿಳಿದವರು ಹದಿನೆಂಟು ಪುರಾಣಗಳಿರುವವುವೆಂದು ಹೇಳುವರು. ಸಮಸ್ತ ಪುರಾಣಗಳಿಗೂ ಮೊದಲನೆಯ ಪುರಾಣವು ಬ್ರಾಹ್ಮಪುರಾಣವು. ಕ್ರಮವಾಗಿ ೨. ಪಾದ್ಮ, ೩. ವೈಷ್ಣವ, ೪. ಶೈವ, ೫. ಭಾಗವತ, ೬. ನಾರದೀಯ, ೭. ಮಾರ್ಕಂಡೇಯ, ೮. ಆಗ್ನೇಯ, ೯. ಭವಿಷ್ಯ, ೧೦. ಬ್ರಹ್ಮವೈವರ್ತ, ೧೧. ಲೈಂಗ, ೧೨. ವಾರಾಹ, ೧೩. ಸ್ಕಾಂದ, ೧೪. ವಾಮನ, ೧೫. ಕೌರ್ಮ, ೧೬. ಮಾತ್ಸ್ಯ, ೧೭. ಗಾರುಡ, ೧೮. ಬ್ರಹ್ಮಾಂಡ ಎಂಬಿವೇ ಹದಿನೆಂಟು ಪುರಾಣಗಳು.

ಈ ಸಮಸ್ತ ಪುರಾಣಗಳಲ್ಲಿಯೂ ಸೃಷ್ಟಿ, ಪ್ರಳಯ, ವಂಶ, ಮನ್ವಂತರ, ವಂಶಾನುಚರಿತ, ಇವುಗಳನ್ನು ಹೇಳಿರುವುದು. ನಾನು ನಿನಗೆ ಹೇಳುವ ಪುರಾಣವು ಮೂರನೆಯದಾದ ವಿಷ್ಣುಪುರಾಣವು. ಸೃಷ್ಟಿ ಪ್ರಳಯಾದಿಗಳಿಗೆಲ್ಲ ವಿಷ್ಣುವೇ ಕಾರಣನೆಂದು ಹೇಳುವುದರಿಂದ ಇದಕ್ಕೆ ವೈಷ್ಣವಪುರಾಣವೆಂದು ಹೆಸರು ಬಂದಿರುವುದು.

ಋಗ್ವೇದಾದಿ ನಾಲ್ಕು ವೇದಗಳು ಶಿಕ್ಷಾದಿ ಆರು ವೇದಾಂಗಗಳು ಮೀಮಾಂಸ, ನ್ಯಾಯಶಾಸ್ತ್ರ, ಪುರಾಣ, ಧರ್ಮಶಾಸ್ತ್ರ ಇವುಗಳ ಜೊತೆ ಗಾಂಧರ್ವವೇದ, ಅರ್ಥಶಾಸ್ತ್ರ ಈ ನಾಲ್ಕೂ ಸೇರಿದರೆ ಹದಿನೆಂಟು ವಿದ್ಯೆಗಳಾಗುವುವು.

ಬ್ರಹ್ಮರ್ಷಿಗಳು, ದೇವರ್ಷಿಗಳು, ರಾಜರ್ಷಿಗಳು ಎಂದು ಮೂರು ಗುಂಪಿನ ಋಷಿಗಳಿರುವರು. ಈ ಋಷಿಗಳಿಂದ ವೇದಶಾಖೆಗಳೂ, ಶಾಖಾಭೇದಗಳೂ, ಶಾಖಾಕರ್ತೃಗಳೂ ಶಾಖಾಭೇದಗಳಾಗಲು ಕಾರಣಗಳು. ಎಲ್ಲ ಮನ್ವಂತರಗಳಲ್ಲಿಯೂ ವೇದ ಶಾಖಾಭೇದಗಳು ಸಮಾನವಾಗಿರುವುವು.

ಕಲ್ಪದ ಆದಿಯಲ್ಲಿ ಪ್ರಜಾಪತಿಯಾದ ಬ್ರಹ್ಮನ ನೋಡಿದ ವೇದವು ನಿತ್ಯವಾದುದು. ಈ ವೇದಶಾಖೆಗಳೆಲ್ಲ ಆ ವೇದದ ಭೇದಗಳಾಗಿರುವುವು.

★ ★ ★ ★

## ಮಹಿದಾಸ

ಭಗವಾನ್ ನಾರಾಯಣನು ಬ್ರಹ್ಮನ ಮಗನಾದ ವಿಶಾಲ ರಾಜನಿಂದ ಇತರಾದೇವಿಯ ತಪಸ್ಸಿನ ಫಲವಾಗಿ ಪ್ರಾದುರ್ಭವಿಸಿದನು. ಅವನ ಒಮ್ಮೆ ದೇವತೆಗಳ ಯಾಗ ಶಾಲೆಯನ್ನು ಪ್ರವೇಶಿಸಿದಾಗ ಅವನ ತೇಜಸ್ಸನ್ನು ನೋಡಲಾಗದೆ ದೇವತೆಗಳ ಮತ್ತು ಋಷಿಗಳ ಸಮೂಹ ನಿಶ್ಚೇತನಗೊಂಡಿತು. ಸದಾ ಭಗವಂತನನ್ನು ಕಂಡು ಅವನ ತೇಜಸ್ಸಿನ ಪರಿಚಯವಿದ್ದುದರಿಂದ ಬ್ರಹ್ಮನು ಅಧೀರನಾಗದೆ ಸ್ತೋತ್ರಮಾಡಿದನು. ಬ್ರಹ್ಮನಿಂದ ಸ್ತುತಿಸಲ್ಪಟ್ಟ ಆ ಭಗವಂತನು ಬ್ರಹ್ಮನೊಂದಿಗೆ ರುದ್ರ ಇಂದ್ರಾದಿ ಎಲ್ಲಾ ದೇವತೆಗಳಿಗೂ ತತ್ವವನ್ನು ಉಪದೇಶಿಸಿದನು. ಆಗ ಅವರು ಅವನ ದಾಸತ್ವವನ್ನು ವಹಿಸಿಕೊಂಡರು. ಆದ್ದರಿಂದಲೆ, ಮಹಾತ್ಮರಾದ ಸುರರೂ ಇವನ ದಾಸರಾದುದರಿಂದಲೇ, ಮಹಿದಾಸನೆಂದು ಪ್ರಸಿದ್ಧನಾದನೇ ಹೊರತು ಮಹಾತ್ಮರಿಗೆ ಇವನು ದಾಸನಾದನೆಂದಲ್ಲ. ದೇವತೆಗಳು ಕೇಳುತ್ತಿದ್ದಂತೆಯೇ ಮುಖ್ಯವಾಗಿ ಅವರೇ ಕೇಳಬಹುದಾದ ಐತರೇಯೋಪನಿಷತ್ತನ್ನು ಭಗವಂತನು ಲಕ್ಷ್ಮೀದೇವಿಗೆ ಉಪದೇಶಿಸಿದನು. ಬಳಿಕ ಬ್ರಹ್ಮನ ಮುಖದಿಂದ ಉಪನಿಷತ್ತನ್ನೇ

ಋಕ್ ಶಾಖೆಯವರು ಅಧ್ಯಯನ ಮಾಡಿದರು. ಅದರಲ್ಲಿ ವಿಷ್ಣುವಿನ ರೂಪಗಳ ಪರಮರಹಸ್ಯ ಉಕ್ತವಾಗಿದೆ. ಮಹಾಸಂಪದ್ರೂಪನಾದ ಹರಿ ಇದರಲ್ಲಿ ಸರ್ವಜ್ಞ, ನಾಶರಹಿತ, ಗುಣಪೂರ್ಣನೆಂದು ವಿಶೇಷವಾಗಿ ವರ್ಣಿತವಾಗಿರುವುದರಿಂದ ಇದು ಮಹಾಭೂತಿಶ್ರುತಿ ಎನಿಸಿದೆ ಎಂದು ಋಕ್ ಸಂಹಿತೆಯಲ್ಲಿ ಹೇಳಿವೆ.

**ನಂಬಿಕೆಟ್ಟವರಿಲ್ಲವೋ ರಂಗಯ್ಯನ.....**

> ಏಷ ಪಂಥಾ ಏತತ್ ಕರ್ಮೈತದ್ ಬ್ರಹ್ಮೈತತ್ ಸತ್ಯಮ್ ।
> ತಸ್ಮಾನ್ನ ಪ್ರಮಾದ್ಯೇತ್ ತಂ ನಾತೀಯಾತ್ ।
> ನ ಹ್ಯತ್ಯಾಯನ್ ಪೂರ್ವೇ । ಯೇಽತ್ಯಾಯನ್ ತೇ ಪರಾಬಭೂವುಃ ॥

ಮಹಾವ್ರತಯಾಗದಲ್ಲಿ ಆರಾಧಿಸಲ್ಪಡುವ ಈ ನಾರಾಯಣನೇ ಮೋಕ್ಷಪ್ರಾಪ್ತಿಗೆ ಕಾರಣನೂ ಸಂಕರ್ಷಣರೂಪಿಯೂ ಆಗಿದ್ದಾನೆ. ಕರ್ಮವು ಮೋಕ್ಷಸಾಧನವೆಂದೆನ್ನುವ ಶ್ರುತಿಗಳಲ್ಲಿ ಹೇಳಿದ ಕರ್ಮನೂ, ಅನಿರುದ್ಧನೂ ಇವನೇ. ಗುಣಪೂರ್ಣನೂ ವಾಸುದೇವರೂಪಿಯೂ ಇವನೇ. ನಿರ್ದೋಷನೂ ಪ್ರದ್ಯುಮ್ನರೂಪಿಯೂ ಇವನೇ. ಸಂಕರ್ಷಣಾದಿ ಬಹುರೂಪಗಳಿಂದ ಪ್ರಪಂಚದ ಎಲ್ಲ ಕಾರ್ಯಗಳನ್ನೂ ನಿರ್ವಹಿಸುತ್ತಾ ನಿರ್ದೋಷ ಗುಣಪೂರ್ಣನೆಂದೆನಿಸಿದ ಈ ನಾರಾಯಣನ ಅನುಗ್ರಹವೇ ಮೋಕ್ಷಸಾಧನವಾದುದರಿಂದ ಅವನ ಉಪಾಸನೆಯನ್ನು ಬಿಡಕೂಡದು. ಅವನನ್ನು ಬಿಟ್ಟು ಇತರ ದೇವತೆಗಳನ್ನು ಆರಾಧಿಸಕೂಡದು. ಆರಾಧಿಸಿದರೂ ಅವನ ಪರಿವಾರದವರು ಅವರು, ಎನ್ನುವ ಭಾವನೆ ಇಲ್ಲದೇ ಆರಾಧಿಸಕೂಡದು. ಬ್ರಹ್ಮಾದಿ ದೇವತೆಗಳು ಅವನ ಆರಾಧನೆಯನ್ನು ತ್ಯಜಿಸಲಿಲ್ಲ. ಆದರಿಂದ ಅವನು ನಿತ್ಯಮುಕ್ತನು, ಮಹಾಗುಣವಂತ. ಯಾರು ವಿಷ್ಣುವಿನ ಆರಾಧನೆಯನ್ನು ತ್ಯಜಿಸಿದರೋ ಅವರು ನಿತ್ಯನರಕ ಭಾಗಿಗಳಾದಾರು.



# ನಾರಾಯಣ

ಒಮ್ಮೆ ಇಂದ್ರದೇವ ಅಜ್ಞಾನಕ್ಕೆ ತುತ್ತಾದ. ಭುವಿಯಲ್ಲಿ ಅವತರಿಸಿದ ನಾರಾಯಣನು ಸ್ವರ್ಗಪದವಿಗಾಗಿ ತಪಸ್ಸನ್ನು ಮಾಡುತ್ತಿದ್ದಾನೆಂದು ಭಾವಿಸಿದ. ಇವನಂತೆ ಅಜ್ಞಾನ ಹೊಂದಿದ ಅಪ್ಸರಾಸ್ತ್ರೀಯರನ್ನು ಕರೆದ. ತನ್ನ ಪದವಿಯನ್ನು ನಾರಾಯಣನು ಅಪೇಕ್ಷಿಸಿ ತಪಸ್ಸು ಮಾಡುತ್ತಿದ್ದಾನೆ; ನೀವೆಲ್ಲರೂ ವಿಘ್ನ ಉಂಟು ಮಾಡಿರೆಂದು ಆದೇಶಿಸಿದ.

ಅಜ್ಞಾನ ಹೊತ್ತ ದೇವತಾಸ್ತ್ರೀಯರು ಕಾಮನನ್ನು ಮುಂದಿಟ್ಟುಕೊಂಡು ಭೂಲೋಕದ ತನಕ ಬಂದರು. ಸಾವಿರಾರು ಸ್ತ್ರೀಯರ ನಯನಗಳಲ್ಲಿ ಕುಳಿತ ಅನಂಗ ತನ್ನ ಅನಂತ ಬಾಣಗಳನ್ನು ನಾರಾಯಣನ ತಪೋವಿಘ್ನಕ್ಕಾಗಿ ಎಸೆದ. ಮಹಿಮೆ ಅರಿಯದ ಅಸುರರ ಬಾಧೆಗೆ ಗುರಿಯಾದ ಮದ ಏರಿದ ಸುರರನ್ನು ಕಂಡ ಶ್ರೀಹರಿಗೆ ಕರುಣೆ ಉಕ್ಕಿತು. ಅವರ ಮೇಲೆ ಮಂದಹಾಸ ಬೀರಿದ. ಮಂದಹಾಸದಿಂದಲೇ ಅಜ್ಞಾನವೆಂಬ ಪರದೆಯನ್ನು ಕಳೆದುಕೊಂಡ ದೇವತಾಸ್ತ್ರೀಯರೆಲ್ಲರೂ ದೇವದೇವೋತ್ತಮನೆಂದರಿತು ತಲೆ ತಗ್ಗಿಸಿದರು. ನಾಚಿದರು. ಮುಡಿಗಳಿಂದ ಅಡಿಗಳನ್ನಲಂಕರಿಸಿದರು. ಹರಿಯ ಅದ್ಭುತವಾದ ಮನೋಬಲವನ್ನು ಕಂಡು ನಿಬ್ಬೆರಗಾದರು.

ಕೆಲವರು ಕಾಮಕ್ಕೆ ಬಲಿಬೀಳುತ್ತಾರೆ. ಕೆಲವರು ಕಾಮಗೆದ್ದರೂ ಕ್ರೋಧಕ್ಕೆ ಬಲಿಯಾಗುತ್ತಾರೆ. ಕಷ್ಟದಿಂದ ಸಂಗ್ರಹಿಸಿದ ತಪಸ್ಸೆಲ್ಲವನ್ನು ಗೋಪಾದದ ತಗ್ಗಿನಂತಿರುವ ಕ್ರೋಧವೆಂಬ ತಗ್ಗಿನಲ್ಲಿ ಮುಳುಗಿ ಕಳೆದುಕೊಳ್ಳುತ್ತಾರೆ ಎಂದು ಮನಗಂಡು ಹರಿಯಮಹಿಮೆಯನ್ನು ಶುಶ್ರೂಷೆ ಗೈಯ್ಯುತ್ತಿರುವ ಅಪ್ಸರೆಯರ ದಂಡನ್ನು ಕಂಡರು. ಅವರ ದೇಹದ ಗಂಧದಿಂದಲೇ ಮೋಹಿತರಾದರು. ಅವರನ್ನು ಕುರಿತು ನಾರಾಯಣನು ಇಷ್ಟರಲ್ಲಿ ಒಬ್ಬಳನ್ನು ನಿಮ್ಮ ದೇವಲೋಕಕ್ಕೆ ಕರೆದುಕೊಂಡು ಹೋಗಿರಿ! ಎಂದನು. ಅವರಾದರೂ ಅದಕ್ಕೆ ಒಪ್ಪಿ ಅಪ್ಸರಾ ಶ್ರೇಷ್ಠಳಾದ ಊರ್ವಶಿಯನ್ನು ಸ್ವೀಕರಿಸಿ ದೇವಲೋಕಕ್ಕೆ ಹೋದರು.

ಇಂದ್ರಸದನದಲ್ಲಿ ದೇವತೆಗಳೆಲ್ಲರೂ ಇರುವಾಗ ಅಪ್ಸರೆಯರೆಲ್ಲರೂ ಹೋಗಿ ನಮಿಸಿ ದೇವದೇವೋತ್ತಮನಾದ ಶ್ರೀಮನ್ನಾರಾಯಣನ ಮನೋಬಲವನ್ನು ಬಣ್ಣಿಸಿದರು. ಇಂದ್ರನೂ ಊರ್ವಶಿಯಿಂದ ಮೋಹಿತನಾದನು.

ಹೀಗೆ ಸರ್ವೋತ್ತಮನಾದ ಭಗವಂತನು ಕಾಮಕ್ರೋಧಾದಿ ಪ್ರಮಾದಗಳನ್ನು ಗೆಲ್ಲುವ ಬಗೆ ಹೇಗೆ ಎಂದು ದೇವತೆಗಳಿಗೂ ತೋರಿಸಿಕೊಟ್ಟನು.

★ ★ ★ ★

## ಕಪಿಲ

ಸ್ವಾಯಂಭುವ ಮನು ಶತರೂಪೆಯರ ಕುವರಿ ದೇವಹೂತಿ. ಸ್ವಯಂಭುವಿನ ಛಾಯಾಸಂಜಾತರಾದ ಕರ್ದಮಪ್ರಜಾಪತಿ. ಇವರೀರ್ವರ ಮಿಲನಕ್ಕೆ ಹರಿಯೇ ಮಧ್ಯಸ್ಥಿಕೆ ವಹಿಸಿದ. ಕರ್ದಮರಿಗೆ ದೇವಹೂತಿಯನ್ನು ಸ್ವೀಕರಿಸುವಂತೆ ಹರಸಿದ. ಅವರಲ್ಲಿ ತಾನೇ ಕಪಿಲನಾಗಿ ಅವತರಿಸುವುದಾಗಿಯೂ ಸ್ಪಂದಿಸಿದ. ಕಾಲ ಕಳೆಯಿತು. ಕರ್ದಮ ದೇವಹೂತಿಯರ ತಪ ಫಲಿಸಿತು. ದೇವಹೂತಿಯ ಅಹಂ, ಮಮಕಾರ ರೂಪವಾದ ಹೃದಯ ಬಂಧನವನ್ನು ಪರಿಹರಿಸಲೋಸುಗ ದಯಾನಿಧಿಯಾದ ಹರಿಯು ದೇವಹೂತಿಯ ಗರ್ಭಗುಡಿಯಲ್ಲಿ ಪ್ರತಿಷ್ಠಿತನಾದ. ದಶಮಾಸಗಳು ಪೂರ್ಣವಾಗಲು ಕಾಷ್ಠದಿಂದ ಅಗ್ನಿಯಂತೆ ಕಪಿಲನು ಪ್ರಾದುರ್ಭವಿಸಿದ.

ಕಪಿಲನ ಪ್ರಾದುರ್ಭಾವದಿಂದ ಜನ್ಮ ಪಾವನಮಾಡಿಕೊಂಡ ಕರ್ದಮ ಕರ್ತವ್ಯಕ್ಕಾಗಿ ಕಾಡಿಗೆ ತೆರಳಿದ. ಜನ್ಮದಾತೆಯಾದ ದೇವಹೂತಿ ಜನ್ಮದೂರವಾಗಿಸಲು ಬೇಕಾದ ತತ್ತ್ವಗಳನ್ನು ಕಪಿಲನಿಂದ ಕೇಳಿದಳು.

### ಕರ್ಮ ಅಳಿಸಿದ ಕಪಿಲೋಪದೇಶ

ಸಾಂಖ್ಯಶಾಸ್ತ್ರದಿಂದ ಮೋಕ್ಷ. ಜೀವನ ಸಂಸಾರ ಬಂಧನಕ್ಕೆ ಕಾರಣವಾದ ಮನಸ್ಸೇ ಬಿಡುಗಡೆಗೂ ಕಾರನವಾಗಿದೆ. ಮನಸ್ಸನ್ನು ಶಬ್ದಾದಿ ವಿಷಯಗಳಲ್ಲಿಟ್ಟರೆ ಸಂಸಾರ ಬಂಧ; ಕಂಸಾರಿಯಲ್ಲಿಟ್ಟರೆ ಮುಕ್ತಿಪ್ರಬಂಧ. ಅಹಂಕಾರ-ಮಮಕಾರಗಳಿಂದ ಪುಟ್ಟಿದ ಕಾಮ ಲೋಭ ಮದಗಳು ಮನಸ್ಸಿನ ಮಲ ಎನಿಸಿವೆ. ಮನೋಮಲ ತ್ಯಾಗಕ್ಕೆ

ಬೇಕಾದುದು ಶ್ರವಣ-ಮನನ ಧ್ಯಾನಗಳು. ಭಕ್ತಿ-ಜ್ಞಾನ-ವಿರಕ್ತಿಗಳೇ ಶ್ರೀಹರಿಯ ಅಪರೋಕ್ಷಸಾಧನಗಳು. ಹರಿಪ್ರಾಪ್ತಿಗೆ ಭಕ್ತಿಯೋಗಕ್ಕಿಂತ ಉತ್ತಮಮಾರ್ಗವಿಲ್ಲ. ದುಷ್ಟರ ಸಹವಾಸ ಭಗವದ್ ಜ್ಞಾನಕ್ಕೆ ಪ್ರತಿಬಂಧಕವಾಗಿದೆ. ಸತ್ಸಂಗವು ಮುಕ್ತಿಗೇ ಕಾರಣವಾಗಿದೆ. ಕಾಮಲೊಭಾದಿಗಳೇ ಶತ್ರುಗಳಾಗಿವುಳ್ಳವರು ಸಜ್ಜನರು. ಮರಣಕಾಲದಲ್ಲಿಯೂ ಹರಿಯನ್ನೇ ಪ್ರೇಮಿಸುವವರು ಸಜ್ಜನರು. ಅವರು ವೈಷ್ಣವರನ್ನೇ ಬಂಧುಗಳೆನ್ನುವರು. ಸರ್ವಕರ್ಮಫಲವನ್ನು ಹರಿಗರ್ಪಿಸಿ ಮೃಷ್ಟಾನ್ನದಂತೆ ಹರಿಕಥಾಶ್ರವಣಮಾಡುವರು. 'ಹರಿಯೇ ಸರ್ವೋತ್ತಮ. ಅನ್ಯವೆಲ್ಲವೂ ಅವನ ಅಧೀನ' ಎಂಬ ಜ್ಞಾನದಿಂದ ಪ್ರಕಾಶಿಸುವರು. ದುಷ್ಟರ ಸಂಗ ಬಯಸದೆ ಶಿಷ್ಟರಸಂಗ ಬಿಡದೆ ಮಾಡಬೇಕು. ಸರ್ವದಾ ಶಾಸ್ತ್ರಚಿಂತಕರೇ ಸಜ್ಜನರು.

**'ಸಾಂಖ್ಯ ತತ್ತ್ವೋಪದೇಶ'**

ಪಂಚಭಿಃ ಪಂಚಭಿಃ ಬ್ರಹ್ಮಾ ಚತುರ್ಭಿರ್ದಶಭಿಸ್ತಥಾ ।
ಏತಚ್ಚತುರ್ವಿಂಶತಿಕಂ ಗುಣಂ ಪ್ರಾಧಾನಿಕಂ ವಿಧುಃ ॥

ಐದು, ಐದು, ನಾಲ್ಕು, ಹತ್ತು, ಹೀಗೆ ಇಪ್ಪತ್ತನಾಲ್ಕು; ಜಗತ್ತಿನ ಗಮ್ಮತ್ತು.

★ **ಪಂಚಭೂತಗಳು :-** ಪೃಥಿವೀ, ಅಪ್, ತೇಜ, ವಾಯು, ಆಕಾಶ.

★ **ಪಂಚತನ್ಮಾತ್ರಗಳು :-** ಗಂಧ, ರಸ, ರೂಪ, ಸ್ಪರ್ಶ, ಶಬ್ದ.

★ **ನಾಲ್ಕು ತತ್ತ್ವಗಳು :-** ಮಹತ್, ಅಹಂಕಾರ, ಬುದ್ಧಿ, ಮನಸ್

★ **ಹತ್ತು ಇಂದ್ರಿಯಗಳು :-** ಕಿವಿ, ಚರ್ಮ, ಕಣ್ಣು, ನಾಲಿಗೆ, ಮೂಗು, ವಾಕ್, ಪಾಣಿ, ಪಾದ, ಪಾಯು, ಉಪಸ್ಥ, ಹೀಗೆ ಇಪ್ಪತ್ತನಾಲ್ಕು ತತ್ತ್ವಗಳೇ ಜಗತ್ತು.

★ ಜೀವಾತ್ಮರ ಜನನ ಮರಣಗಳಿಗೆ ಕಾರಣನಾದ, ಅಹಂಕಾರ-ಮಮಕಾರಗಳಿಗೆ ತುತ್ತಾಗಿ ಮಿಥ್ಯಾಜ್ಞಾನಿಯಾದ ಜೀವನ ಹೃದಯಸ್ಥನಾದ ಶ್ರೀಹರಿಯು ಕಾಲ ನಾಮಕನಾಗಿ ಇಪ್ಪತ್ತೈದನೇಯ ತತ್ವ ಎನಿಸಿದ್ದಾನೆ. ಜಗತ್ತನ್ನು ಸೃಷ್ಟಿಸಲು ಇಚ್ಛಿಸಿದ ನಾರಾಯಣನು ಪುರುಷ ರೂಪವನ್ನುತಾಳಿ ಪ್ರಳಯದ ವಿಶಿಷ್ಟವಾದ ಕತ್ತಲೆಯನ್ನು ತನ್ನ ಸ್ವರೂಪ ಪ್ರಭೆಯಿಂದ ಪರಿಹರಿಸಿ ಶ್ರೀದೇವಿಯಲ್ಲಿ

ವೀರ್ಯಾದಾನ ಮಾಡಲು ಹಿರಣ್ಮಯನಾದ ಚತುರ್ಮುಖನಿಂದ ಅಭಿಮನ್ಯಮಾನವಾದ ಮಹತ್ತತ್ವವು ಉದ್ಭವಿಸಿತು. ಮಾಯಾದೇವಿಯಲ್ಲಿ ಬ್ರಹ್ಮನು ಜನಿಸಿದನು.

★ ಮಹತ್ತತ್ವದ ಕ್ರಿಯೆ :- ಪ್ರತಿಕ್ಷಣವು ಹಿಂದೆ ತಿಳಿದ ವಿಷಯಗಳು ಸಂಸ್ಕಾರಾಂತರಗೊಂಡು ಸ್ಮರಣೆಗೆ ಹೇತುವಾಗುವ ಚಿತ್ತ ಮಹತ್ತತ್ವವೆನಿಸಿದೆ. ಅಪ್ ತತ್ವದಂತೆ ಮಹತ್ತತ್ವವು ಧವಲವಾಗಿದೆ. ಜ್ಞಾನಪ್ರದವಾದ ಈ ತತ್ವದಿಂದ ಜನಿಸಿದ ತತ್ವವೇ ಅಹಂಕಾರ ತತ್ವ.

★ ಅಹಂಕಾರ ತತ್ವ:- ಶಾಂತ-ಘೋರ-ಮೂಢ ಎಂಬ ಮೂರು ಪ್ರಭೇದವುಳ್ಳ ಅಹಂಕಾರ ತತ್ವವು ವೈಕಾರಿಕ, ತೈಜಸ, ತಾಮಸ ಎಂದೆನಿಸಿದೆ.

★ ವೈಕಾರಿಕ ಅಹಂಕಾರ :- ಸತ್ವಾಂಶ ಪ್ರಾಚುರ್ಯವುಳ್ಳ ಭಗವತ್ ಸನ್ನಿಧಾನವುಳ್ಳ ವೈಕಾರಿಕವು ಶಾಂತವೆನಿಸಿದೆ. ಇದರಿಂದ ದೇವತೆಗಳು, ಪಿತೃಗಳು, ಕರ್ತೃತ್ವ ಭ್ರಮೆಯನ್ನು ಕೊಡುವ ಮನಸ್ಸೂ ಹುಟ್ಟಿದವು.

★ ತೈಜಸ ಅಹಂಕಾರ :- ಸತ್ವ ರಜೋಂಶ ಪ್ರಾಚುರ್ಯವುಳ್ಳ ತೈಜಸ ಅಹಂಕಾರವು ಬಂಧಕವಸ್ತುಗಳ ಜ್ಞಾನವನ್ನು ನೀಡುತ್ತದೆ. ಘೋರ ಕಾರ್ಯ-ಕಾರಣವಾಗಿದೆ. ಇದರಿಂದಲೇ ಜ್ಞಾನ, ಕರ್ಮೇಂದ್ರಿಯಗಳ ಉತ್ಪತ್ತಿ.

★ ತಾಮಸ ಅಹಂಕಾರ :- ತಮೋಂಶ ಪ್ರಚುರವಾಗಿ ಜ್ಞಾನವನ್ನೇ ಹುಟ್ಟಿಸದಿರುವ ತಾಮಸವು ಮೂಢ ಎನಿಸಿದೆ. ಇದರಿಂದ ಪಂಚಭೂತಗಳು ಅವುಗಳ ವಿಕಾರವೆನಿಸಿದ ಶರೀರಗಳೂ ಸೃಷ್ಟಿಯಾಗಿವೆ.

ಹೀಗೆ ದೇವಹೂತಿಗೆ ಕಪಿಲನು ತತ್ವೋಪದೇಶಮಾಡುತ್ತಿರುವಾಗಲೇ ತಾಯಿಯ ಕರ್ಮಬಂಧನವೆಲ್ಲವೂ ಕಡೆದು ಕೊನೆಗೆ ಅವಳ ಮೃತದೇಹವೂ ನದಿಯಾಗಿ ಹರಿಯಿತು. ಕರ್ಮನಿಷ್ಠರ ಕರ್ಮ ಬಂಧನವನ್ನು ಪರಿಹರಿಸುವ ನದಿಯಾಗಿ ಹರಿದಳು. ಹೀಗೆ ಪ್ರತ್ಯಕ್ಷವಾಗಿ ತಾಯಿಯ ಕರ್ಮದ ಭಯವನ್ನೇ ಪರಿಹರಿಸಿದ ಕಪಿಲ ಯಾರನ್ನೂ ಉದ್ಧರಿಸಬಲ್ಲ. 'ಕಮಪಿ ಲಾತಿ ಇತಿ ಕಪಿಲಃ'.

# ಶುಕಾಚಾರ್ಯರು

ಭಗವಾನ್ ವೇದವ್ಯಾಸದೇವರ ಮನಸಿಜನಾದ ಮಹಾನುಭಾವನೇ ಶುಕಮುನಿಯು. ಶುಕಾಚಾರ್ಯರ ಉತ್ಪತ್ತಿಯ ಕಥೆಯು ನಾರದ ಪುರಾಣದಲ್ಲಿ ವಿಸ್ತಾರವಾಗಿ ನಿರೂಪಿಸಲ್ಪಟ್ಟಿದೆ. ವೇದವ್ಯಾಸದೇವರು ಜಗತ್ತಿನ ದೃಷ್ಟಿಯಿಂದ ತಪೋನಿರತರಾದಾಗ ಘೃತಾಚಿ ಎಂಬ ಅಪ್ಸರೆಯು ಶುಕರೂಪದಿಂದ ಬಂದಿದ್ದಾಳೆ. ಅವಳನ್ನು ನಿಮಿತ್ತಮಾಡಿಕೊಂಡು ಅರಣಿಯಿಂದಲೇ ಹುಟ್ಟಿದ ಮಹಾಯೋಗಿಗಳು ಶುಕಾಚಾರ್ಯರು. 'ಪರಮರ್ಷಿರ್ಮಹಾಯೋಗೀ ಅರಣೀಗರ್ಭಸಂಭವಃ । ಯತ್ತೈವಹಿ ಸಮಿದ್ಧೋಗ್ನಿರ್ಭಾತಿ ಹವ್ಯಮುಪಾತ್ತವಾನ್ ಜ। ತತೋ ರೂಪಃ ಶುಕೋ ಜಜ್ಞೇ ಪ್ರಜ್ವಲನ್ನಿವ ತೇಜಸಾ' ಎಂದು ಅರಣಿಯ ಮಥನದಿಂದ ಉತ್ಪನ್ನರಾದವರು ಶುಕಾಚಾರ್ಯರು. ಇದಕ್ಕೆ ಪೂರಕವಾದ ಮಾತು ಬ್ರಹ್ಮಸೂತ್ರದ ಭಾಷ್ಯದಲ್ಲಿಯೂ ಕಂಡುಬರುತ್ತದೆ. ತೃತೀಯಾಧ್ಯಾಯದ ಒಂದನೆಯ ಪಾದದ ಕೊನೆಯ ಅಧಿಕರಣ ಎನಿಸಿದ ಯೋನ್ಯಧಿಕರಣದಲ್ಲಿ – 'ಸ್ಥಾಣುಷ್ವಥಾಪಿ ಪುರುಷೇ ಪ್ರಮದಾಯಾಮಥಾಪಿವಾ। ಗರ್ಭೇವಾ ಬಹಿರೇವಾಥ ಕ್ವಚಿತ್ ಸ್ಥಾನಾಂತರೇಶು ಚ' ಎಂಬ ಬ್ರಾಹ್ಮಪುರಾಣದ ವಚನವನ್ನು ಶ್ರೀಮದಾನಂದತೀರ್ಥರು ನೀಡಿದ್ದಾರೆ. ಸ್ತ್ರೀಪುರುಷ ನಿಮಿತ್ತದಿಂದ ಸೃಷ್ಟಿ ಎನಿಸಿದ್ದರೂ ಅಪವಾದವಾಗಿ ಸಸ್ಯರಾಶಿಯಿಂದಲೇ ಪುತ್ರೋತ್ಪತ್ತಿ, ಪುರುಷರಿಂದಲೇ ಪುತ್ರೋತ್ಪತ್ತಿ, ಕೇವಲ ಸ್ತ್ರೀ ಮಾತ್ರದಿಂದ ಪುತ್ರೋತ್ಪತ್ತಿ ಹೀಗೆ ಗರ್ಭದ ಒಳಗೆ, ಹೊರಗೆ ಸ್ಥಾನಾಂತರದಲ್ಲಿ ಮುಂತಾಗಿ ವಿಲಕ್ಷಣವಾದ ಸೃಷ್ಟಿಯು ಪರಮಾತ್ಮನ ಸಂಕಲ್ಪದಂತೆ ಕಂಡುಬರುತ್ತದೆ. ಸ್ಥಾವರದಿಂದಲೇ ಆದ ಸೃಷ್ಟಿ ಶುಕಾಚಾರ್ಯರದ್ದು. ಪುರುಷರಿಂದಾದ ಸೃಷ್ಟಿ ಮಾಂಧಾತೃ ಮಹಾರಾಜ. ಪ್ರಮದೆಯಿಂದಾದ ಸೃಷ್ಟಿ ಜರತ್ಕಾರು. ಹೊರಗಡೆಯಾದ ಸೃಷ್ಟಿ ದ್ರುಪದಮಹಾರಾಜ. ಸ್ಥಾನಾಂತರದಲ್ಲಿ ಆದ ಸೃಷ್ಟಿಗೆ ದೃಷ್ಟಾಂತ ದೃಷ್ಟದ್ಯುಮ್ನ. ಆದ್ದರಿಂದ ಸ್ತ್ರೀನಿರಪೇಕ್ಷದಿಂದಾದ ಸೃಷ್ಟಿ ಶುಕಾಚಾರ್ಯರ ಸೃಷ್ಟಿ ಎಂದು ನಾರದಪುರಾಣ ಮತ್ತು ಬ್ರಹ್ಮಸೂತ್ರದ ಆಧಾರದಲ್ಲಿ ನಿರ್ಣಯಿಸಬಹುದು.

ವೇದವ್ಯಾಸದೇವರಿಗೆ ಕಾಮವಿಕಾರವಾಗಿಯಾಗಲಿ ಅಥವಾ ಸ್ತ್ರೀನಿಮಿತ್ತದಿಂದ ವೀರ್ಯೋತ್ಪನ್ನ ಸುತನಾಗಲಿ ಅಸಂಭವವಾಗಿದೆ. ಇಂತಹ ಶುಕಾಚಾರ್ಯರು ಅರಣಿಮಥನದಿಂದ ಉತ್ಪನ್ನರಾಗಿ ಉತ್ತಮ ಜ್ಞಾನಿಗಳಾಗಿದ್ದಾರೆ. ಪ್ರಕಾಶಮಾನವಾದ ಅಗ್ನಿಯಂತೆ ಪ್ರಜ್ವಲಿಸುವ ತೇಜಸ್ಸು ಶುಕಮುನಿಗಳದ್ದು. ಸರ್ವೋತ್ತಮನಾದ ಪರಮಾತ್ಮನ ಅನುಗ್ರಹದಿಂದ ಜನ್ಮವೆತ್ತಿದ ಶುಕಮುನಿಗೆ ಸಾಕ್ಷಾತ್ ಗಂಗೆಯೇ ಬಂದು ಸ್ನಾನ ಮಾಡಿಸಿದ್ದಾಳೆ. ಅಂತರಿಕ್ಷಲೋಕದಿಂದ ಜಿಂಕೆಯ ಚರ್ಮ ಭೂಮಿಗೆ ವಸ್ತ್ರವಾಗಿ ಬಿದ್ದಿದೆಯಂತೆ. 'ತಂ ಗಂಗಾ ಸರಿತಾ ಶ್ರೇಷ್ಠಾಮೇರುಪೃಷ್ಠೇ ಸುರೂಪಿಣಿ। ಅಭ್ಯೇತ್ಯ ಸ್ನಾಪಯಾಮಾಸ ವಾರಿಣಾ ಸ್ವೇನ ನಾರದ । ಕೃಷ್ಣಾಜಿನಂ ಚಾಂತರಿಕ್ಷಾತ್ ಶುಕಾರ್ಥೇ ಭೂವ್ಯಪಾತಯತ್' ಇಂತಹ ಮಹಾನುಭಾವರನ್ನು ಕಂಡ ಗಂಧರ್ವರು ಸ್ತೋತ್ರಮಾಡಿದ್ದಾರೆ, ಅಪ್ಸರಾಸ್ತ್ರೀಯರು ನರ್ತನಮಾಡಿದ್ದಾರೆ, ದೇವದುಂದುಬಿಗಳು ಮೊಳಗಿದ್ದಾವೆ, ಹಾಹಾ ಹೂಹೂ ಗಂಧರ್ವರು ತುಂಬುರು ನಾರದರು ಕೂಡ ಶುಕೋತ್ಪತ್ತಿಯನ್ನು ಪ್ರಶಂಸಿಸಿದ್ದಾರೆ. ಚರಾಚರಾತ್ಮಕವಾದ ಪ್ರಪಂಚಕ್ಕೂ ಸಂತೋಷವನ್ನು ನೀಡುವ ಸೃಷ್ಟಿ ಶುಕಮುನಿಗಳ ಸೃಷ್ಟಿ ದೇವೇಂದ್ರನೇ ಸ್ವತಃ ಶುಕಮುನಿಗೆ ಕಮಂಡಲವನ್ನು ಕೊಟ್ಟು ಅನುಗ್ರಹಪಡೆದಿದ್ದಾನೆ. ದೇವತೆಗಳು ಪ್ರೀತಿಪೂರ್ವಕವಾಗಿ ವಸ್ತ್ರಗಳನ್ನು ಕೊಟ್ಟಿದ್ದಾರೆ. ಪಕ್ಷಿಗಳೆಲ್ಲ ಶುಕಮುನಿಗೆ ಪ್ರದಕ್ಷಿಣೆ ಬಂದಿದ್ದಾರೆ. ಮಹಾಬ್ರಹ್ಮಚರ್ಯದಲ್ಲಿ ನಿರತರಾದ ಶುಕಮುನಿಯು ಸಮಸ್ತ ವೇದವೇದಾಂಗಗಳನ್ನು ಭಗವಂತನಿಂದ ಉಪದೇಶ ಪಡೆದಿದ್ದಾನೆ. ರುದ್ರದೇವರ ಅವತಾರಭೂತನಾದ ಶುಕಮುನಿಯು ಕಪಿಲನಿಂದ ರಚಿತವಾದ ಸಾಂಖ್ಯಯೋಗಶಾಸ್ತ್ರವನ್ನು ಸಂಪೂರ್ಣವಾಗಿ ಅಭ್ಯಾಸಮಾಡಿದ್ದಾನೆ. ಬ್ರಹ್ಮತೇಜಸ್ಸಿನಿಂದ ಉಕ್ಕುವ ಮಹಾಪರಾಕ್ರಮಶಾಲಿಯಾದ ಶುಕಮುನಿಯು ಜನಕಮಹಾರಾಜನ ಬಳಿಯೂ ಹೋಗಿ ಮೋಕ್ಷಶಾಸ್ತ್ರವಿಚಾರದಲ್ಲಿ ಚರ್ಚೆ ಮಾಡಿದ್ದಾನೆ.

ಜನಕನ ಆಸ್ಥಾನದಲ್ಲಿ ಇರುವ ಅನೇಕ ಸ್ತ್ರೀಯರು ಶುಕಮುನಿಯನ್ನು ನೂರಾರು ಹಾವ-ಭಾವಗಳಿಂದ ವಂಚಿಸಲು ಯತ್ನಿಸಿದರೂ ಸ್ತ್ರೀಲೋಲನಾಗದೆ

ಜಿತೇಂದ್ರಿಯನಾಗಿ ಶುಕಮುನಿಯು ಭಗವದ್ಧ್ಯಾನರತನಾದನು. ಭಗವಂತನಿಂದಲೇ ತಿಳಿಯಲ್ಪಟ್ಟ ಸಕಲ ವಿದ್ಯೆಗಳುಳ್ಳ ಶುಕಮುನಿಯು ಸನತ್ಕುಮಾರ ಮುಂತಾದ ಯೋಗಿಗಳಲ್ಲಿಯೂ ಶಾಸ್ತ್ರಾರ್ಥ ವಿಚಾರಗಳನ್ನು ನಿರಂತರಮಾಡಿದ್ದಾನೆ. ಇಂತಹ ಶುಕಮುನಿಗಳು ನಿವೃತ್ತ ಧರ್ಮದಲ್ಲಿಯೇ ಆಸಕ್ತರಾಗಿ ಕೊನೆಗೆ ಶೃಂಗಿಯ ಶಾಪಗ್ರಸ್ಥನಾದ ಮಹಾಯೋಗಿ ಎನಿಸಿದ ಪ್ರಯೋಪ್ರವೇಶಕ್ಕೆ ಕುಳಿತ ಪರೀಕ್ಷಿತರಾಜನಿಗೆ ಏಳುದಿನಗಳ ಕಾಲ ೧೮,೦೦೦ ಶ್ಲೋಕಾತ್ಮಕವಾದ ಪುರಾಣರಾಜವೆನಿಸಿದ ಭಾಗವತವನ್ನು ಹೇಳಿ ಅದ್ವಿತೀಯ ಕೀರ್ತಿ ಸಂಪನ್ನನಾಗಿದ್ದಾನೆ.

ಸ್ತ್ರೀಯರು ಬೆರಗಾಗುವ ಸೌಂದರ್ಯ ಶುಕಮುನಿಯದ್ದು. ಮುಖ್ಯಪ್ರಾಣನ ಸನ್ನಿಧಾನ ಉಳ್ಳವನು. ಸರ್ವೋತ್ತಮನಾದ ಭಗವಂತನೂ ಶುಕಾಚಾರ್ಯರಲ್ಲಿ ಮೋಹಗೊಂಡವನಂತೆ ನಟಿಸಿದ್ದಾನೆ. ಇಂತಹ ಯೋಗಿಗಳಲ್ಲೇ ಶಿಖರಪ್ರಾಯರಾದ ಯೋಗಿಯನ್ನು ಪಡೆದ ಧನ್ಯತೆ ಈ ಭರತ ಭೂಮಿಯದ್ದು.

★ ★ ★ ★

## ನಾರದ

ನಾರದರು ಬ್ರಹ್ಮನ ಮಾನಸ ಪುತ್ರರು. ನಾರದರ ಹೆಸರನ್ನು ಕೇಳದವರು ಯಾರಿದ್ದಾರೆ! ಎಲ್ಲ ಪುರಾಣಕಥೆಗಳಲ್ಲೂ ನಾರದರ ಪಾತ್ರವಿದೆ. ಜಗಳ ಗಂಟಿಕ್ಕುವವರಿಗೆ ನಾರದ ಎಂಬ ಅಡ್ಡ ಹೆಸರಿದೆಯಲ್ಲ! ಆದರೆ, ನಾರದರೂ ಇಬ್ಬರ ನಡುವೆ ಕಲಹ ಉಂಟು ಮಾಡುವುದು ಲೋಕಕ್ಷೇಮದ ಕಾರಣಕ್ಕಾಗಿ.

ನಾರದರು ತನ್ನ ತಂದೆಯ ಲೋಕವಾದ ಸತ್ಯಲೋಕದಲ್ಲಿಯೇ ಇದ್ದರು. ಒಮ್ಮೆ ಬ್ರಹ್ಮದೇವರು ತನ್ನ ಸೃಷ್ಟಿಕಾರ್ಯಕ್ಕೆ ಸಹಾಯ ಮಾಡುವಂತೆ ನಾರದರಲ್ಲಿ ಕೇಳಿದರು. ಪ್ರಾಪಂಚಿಕವಾದ ಸಂಗತಿಗಳಲ್ಲಿ ಆಸಕ್ತಿಯನ್ನು ಹೊಂದದೇ ಇದ್ದ ನಾರದರು ಇದಕ್ಕೆ ಒಪ್ಪಲಿಲ್ಲ. ಸಿಟ್ಟುಗೊಂಡ ಬ್ರಹ್ಮದೇವರು ಬೇರೆ ಬೇರೆ ಲೋಕಗಳಲ್ಲಿ ಎರಡು ಬಾರಿ ಜನ್ಮವೆತ್ತುವಂತೆ ಶಾಪ ನೀಡಿದರು. ಅದರಂತೆ, ನಾರದರು ಒಂದನೆಯ ಜನ್ಮವಾಗಿ ಗಂಧರ್ವಲೋಕದಲ್ಲಿ ಜನಿಸಿದರು.

ಚಿತ್ರಕೇತುವೆಂಬ ಗಂಧರ್ವ ರಾಜನಿದ್ದ. ತನಗೆ ಜನಿಸಿದ ಶಿಶುವಿಗೆ ಆತ 'ಉಪಾಭರಣ'ನೆಂದು ನಾಮಕರಣವನ್ನು ಮಾಡಿದನು. ಆ ಉಪಾಭರಣ ಮತ್ತಾರೂ ಅಲ್ಲ. ನಾರದರೇ. ಉಪಾಭರಣನು ಮುಂದೆ ಗಂಧರ್ವ ಲೋಕದ ಮತ್ತೋರ್ವ ರಾಜನಾದ ಚಿತ್ರರಥನ ಪುತ್ರಿಯರನ್ನು ವಿವಾಹವಾದನು. ನಾರದರು ಸಂಸಾರಿಗಳಾಗಿ ಕೆಲವು ಕಾಲ ಗಂಧರ್ವಲೋಕದಲ್ಲಿ ಸುಖವಾಗಿದ್ದರು. ಅವರಿಗೆ ಮಕ್ಕಳು ಜನಿಸಿದರು. ಆ ಮೂಲಕ 'ಸೃಷ್ಟಿಕಾರ್ಯಕ್ಕೆ ನೆರವಾಗು' ಎಂಬ ಬ್ರಹ್ಮದೇವರ ಆದೇಶ ಪೂರ್ಣವಾದಂತಾಯಿತು.

ಮುಂದೆ, ತನ್ನ ಶಾಪದ ಅವಧಿ ಮುಗಿದ ಬಳಿಕ ನಾರದರು ಗಂಧರ್ವ ಲೋಕವನ್ನು ತ್ಯಜಿಸಿದರು. ಬಳಿಕ ಭೂಲೋಕದಲ್ಲಿ ಜನಿಸಿದರು.

ಬ್ರಹ್ಮಜ್ಞಾನಿಯೊಬ್ಬನ ಮನೆಯಲ್ಲಿ ಸೇವೆಯನ್ನು ಮಾಡುತ್ತಿದ್ದ ಸ್ತ್ರೀಯೋರ್ವಳಿಗೆ ಮಗನಾಗಿ ಜನಿಸಿದರು. ತಾಯಿ ಆ ಶಿಶುವಿಗೆ 'ನಾರದ' ಎಂದೇ ಹೆಸರಿಟ್ಟಳು. ಬಹುಶಃ ಬ್ರಹ್ಮದೇವರ ಮಾನಸಪುತ್ರನ ಹೆಸರು ಎಂಬ ಕಾರಣಕ್ಕಾಗಿ ಅದೇ ಹೆಸರನ್ನು ಇಟ್ಟಿರಬಹುದು. ಆದರೆ, ಆಕೆಗೆ ನಿಜವಾದ ನಾರದನೇ ತನ್ನ ಮಗನಾಗಿ ಹುಟ್ಟಿದ್ದಾನೆ ಎಂದು ತಿಳಿದಿರಲಿಲ್ಲ. ಆ ಸ್ತ್ರೀಯು ಕೆಲಸ ಮಾಡುತ್ತಿದ್ದ ಮನೆಯಲ್ಲಿ ಯಾವಾಗಲೂ ಯಜ್ಞಯುಗಾದಿಗಳು ನಡೆಯುತ್ತಿದ್ದವು. ಸಜ್ಜನರ ಸಭೆ ನಡೆಯುತ್ತಿತ್ತು. ಇವೆಲ್ಲದರ ಪ್ರಭಾವದಿಂದ ಬಾಲಕ ನಾರದನಿಗೆ ಬಾಲ್ಯದಲ್ಲಿಯೇ ಭಗವದ್ಭಕ್ತಿಯ ಸಂಸ್ಕಾರ ಒದಗಿತು. ಮುಂದೊಂದು ದಿನ ಆ ತಾಯಿ ಮರಣ ಹೊಂದಿದಳು. ಬಳಿಕ ನಾರದರು ಆ ಮನೆಯನ್ನು ತೊರೆದು ಕಾಡಿಗೆ ಹೋದರು. ಭಗವಂತನನ್ನು ಕುರಿತು ತಪಸ್ಸು ಮಾಡತೊಡಗಿದರು. ಅವರ ಮನಸ್ಸಿನಲ್ಲಿ ಭಗವಂತನ ದಿವ್ಯ ಮಂಗಳವಾದ ಸುಂದರ ರೂಪವು ಗೋಚರವಾಯಿತು. ಇದರಿಂದ ತುಂಬ ಸಂತೋಷವಾಯಿತು. ಆದರೆ, ಮರುಕ್ಷಣದಲ್ಲಿಯೇ ಆ ದಿವ್ಯ ಮಂಗಳ ವಿಗ್ರಹವು ಮರೆಯಾಯಿತು. ಇದರಿಂದ ಅವರಿಗೆ ತುಂಬ ಬೇಸರವೆನಿಸಿತು. ಪುನಃ ಧ್ಯಾನಸ್ಥರಾದರೂ ದೇವರ ಮಂಗಳಮೂರ್ತಿ ಮನಸ್ಸಿನಲ್ಲಿ ಮೂಡಲಿಲ್ಲ. ಮತ್ತೆ ಮತ್ತೆ ದೀರ್ಘ ತಪಸ್ಸನ್ನು ಮಾಡಿದರೂ ಭಗವಂತನ ರೂಪ ಮಾತ್ರ ಅವರ ಮನಸ್ಸಿಗೆ ಕಾಣಿಸಲಿಲ್ಲ. ಅದರ

ಬದಲು ಗಂಭೀರವಾದ ಧ್ವನಿಯೊಂದು ಕೇಳಿಸಿತು. ''ಈ ಜನ್ಮದಲ್ಲಿ ನಿನಗೆ ದೊರೆಯುವುದು ಇಷ್ಟೇ. ನನ್ನನ್ನೇ ಕಾಣಬೇಕೆಂಬ ಪ್ರಬಲ ಇಚ್ಛೆಯು ನಿನ್ನಲ್ಲಿ ಯಾವಾಗಲೂ ಇರಲಿ. ಮುಂದಿನ ಜನ್ಮದಲ್ಲಿ ನನ್ನ ದರ್ಶನ ಭಾಗ್ಯವು ನಿನಗೆ ಲಭಿಸುವುದು''. ಈ ಧ್ವನಿಯನ್ನು ಕೇಳಿದ ನಾರದರು ಮುಂದಿನ ಜನ್ಮದಲ್ಲಿ ಭಗವಂತನ ದರ್ಶನವನ್ನು ಪಡೆಯಲೇಬೇಕೆಂಬ ಹಂಬಲದಿಂದ ಕಠಿಣವಾದ ತಪಸ್ಸನ್ನು ಆಚರಿಸಿದರು. ತಪಸ್ಸಿನಲ್ಲಿಯೇ ಅವರ ಭೂಲೋಕದ ಜೀವನ ಅಂತ್ಯವನ್ನು ಕಂಡಿತು.

ಮುಂದೆ ನಾರದರು ಮತ್ತೆ ವೈರಾಗಿಗಳಾಗಿ ಸತ್ಯಲೋಕವನ್ನು ಸೇರಿದರು. ಬ್ರಹ್ಮನ ಮತ್ತೊಬ್ಬ ಪುತ್ರನಿದ್ದ. ದಕ್ಷನೆಂದು ಅವನ ಹೆಸರು. ಅವನು ತನ್ನ ತಂದೆಯ ಆದೇಶದಂತೆ ಸೃಷ್ಟಿಕಾರ್ಯದಲ್ಲಿ ನಿರತನಾಗಿದ್ದನು. ಆಗಾಗ ಅಲ್ಲಿಗೆ ಬರುತ್ತಿದ್ದ ನಾರದರು ದಕ್ಷನ ಮಕ್ಕಳಿಗೆ ವೈರಾಗ್ಯದ ಉಪದೇಶ ಮಾಡುತ್ತಿದ್ದರು. ಮುಂದೆ, ದಕ್ಷನ ಮಕ್ಕಳು ತಾವು ಮದುವೆಯಾಗದೆ ಸಂನ್ಯಾಸಿಗಳಾಗಿ ಕಾಡಿಗೆ ತೆರಳಿದರು. ಈ ಮೂಲಕ ದಕ್ಷನ ಸೃಷ್ಟಿಕಾರ್ಯಕ್ಕೆ ತೊಡಕುಂಟಾಯಿತು. ಅವರ ಮಕ್ಕಳು ಸಂನ್ಯಾಸವನ್ನು ಹೊಂದಿದುದರಿಂದ ವಂಶವಾಹಿನಿ ಮುಂದುವರಿಯಲಿಲ್ಲ. ದಕ್ಷನಿಗೆ ನಾರದರ ಮೇಲೆ ಸಿಟ್ಟು ಬಂತು. ''ನೀನು ಯಾವತ್ತೂ ಒಂದೆಡೆ ನೆಲೆ ನಿಲ್ಲದೆ ಸದಾ ಸಂಚರಿಸುತ್ತಿರು'' ಎಂದು ಶಾಪವನ್ನಿತ್ತನು. ಇದರಿಂದಾಗಿ ನಾರದರು ಕೆಲವು ಘಳಿಗೆಗಳವರೆಗೂ ಒಂದೆಡೆ ನಿಲ್ಲದೆ ಗಾಳಿಯಂತೆ ಲೋಕಲೋಕಗಳಿಗೆ ಸಂಚರಿಸತೊಡಗಿದರು. ಹೀಗೆ ಅಲೆಯುತ್ತಿರುವಾಗಲೂ ನಾರದರು 'ಮಹತೀ' ಎಂಬ ತಮ್ಮ ವೀಣೆಯನ್ನು ನುಡಿಸುತ್ತಾ ಭಗವಂತನ ನಾಮಸ್ಮರಣೆ ಮತ್ತು ಸಂಕೀರ್ತನೆಗಳನ್ನು ಹಾಡುತ್ತಿದ್ದರು.

ರಾಮಾಯಣ, ಮಹಾಭಾರತ ಮತ್ತು ವಿವಿಧ ಪುರಾಣಗಳಲ್ಲಿ ನಾರದರ ಅನೇಕ ಕಥೆಗಳು ಬರುತ್ತವೆ.



# ಬ್ರಹ್ಮಜ್ಞಾನಿ ಭೃಗುಮುನಿ

ವೇದಪ್ರತಿಪಾದ್ಯರಾದ ಮಹಾಮಹರ್ಷಿಗಳಲ್ಲಿ ಬ್ರಹ್ಮಜ್ಞಾನಿ ಭೃಗು ಋಷಿಗಳೂ ಒಬ್ಬರಾಗಿದ್ದಾರೆ. ದಿವ್ಯಜನ್ಮ ಪ್ರಾಪ್ತಿಗಾಗಿ ಭೃಗು ಋಷಿಯು ಹೋಮ ಮಾಡಿದರೆಂದು ಋಗ್ವೇದದ ೧, ೪, ೬, ೭ನೇ ಮಂಡಲಗಳಲ್ಲಿ ಉಲ್ಲೇಖ ಬರುತ್ತದೆ. ಮತ್ತು ಋಗ್ವೇದದ ಎರಡನೇ ಮಂಡಲದಲ್ಲಿ ಹಾಗೂ ತೈತ್ತಿರೇಯ ಸಂಹಿತೆಯಲ್ಲಿಯೂ ಅಗ್ನಿಯನ್ನು ಮೊಟ್ಟ ಮೊದಲು ಕಂಡುಹಿಡಿದವರು ಭೃಗುಋಷಿಯೇ ಎಂದು ನಿರೂಪಿಸಿದ್ದಾರೆ. ನವಮ ಮಂಡಲದಲ್ಲಿ ಸುದಾಸನಿಗೆ ಸಹಾಯಕ ರೂಪದಿಂದ ಭೃಗುಗಳ ಉಲ್ಲೇಖ ದೊರಕುತ್ತದೆ. ಇನ್ನೂ ಒಂದೆರಡು ಕಡೆಗೆ ವೇದದಲ್ಲಿ ಈ ಋಷಿಯ ಆನುಷಂಗಿಕ ಉಲ್ಲೇಖವು ಬರುತ್ತದೆ.

ಆದರೆ ಬ್ರಾಹ್ಮಣಗಳಲ್ಲಿ ಈ ಋಷಿಯ ಕತೆಗೆ ಕೌತುಕದ ಕವಲೊಡೆಯುತ್ತದೆ. ಬ್ರಹ್ಮದೇವರ ಶಕ್ತಿಯು ಮೂರು ಭಾಗವಾಗಿ ಅದರಿಂದ ಆದಿತ್ಯ, ಭೃಗು ಮತ್ತು ಆಂಗಿರಸ ಈ ಮೂವರು ಜನಿಸಿದರೆಂದು ಹೇಳಲಾಗಿದೆ.

ಇದೇ ಭೃಗುವಿನ ಜನ್ಮ ವೃತ್ತಾಂತವು ಗೋಪಥ ಬ್ರಾಹ್ಮಣರಲ್ಲಿ ಇನ್ನೂ ವಿಸ್ತಾರದೊಂದಿಗೆ ಬಂದಿದೆ.

ಹಿಂದೆ ಯುಗ ಪ್ರಾರಂಭದಲ್ಲಿ ಸೃಷ್ಟಿಯನ್ನು ನಿರ್ಮಾಣ ಮಾಡಲಿಕ್ಕಾಗಿ ಬ್ರಹ್ಮದೇವರು ತಪಸ್ಸು ಮಾಡುತ್ತಲಿದ್ದರು.

ಅತಿ ಉಗ್ರವಾದ ತಪಸ್ಸಿನ ಅನುಷ್ಠಾನದಿಂದ ಅವರ ಮೈಯೆಲ್ಲವೂ ಜೋರಾಗಿ ಬೆವತಿತು. ಮತ್ತು ಅಂಗಾಂಗಗಳಿಂದ ಬೆವರು ಹರಿದು ನೆಲದ ಮೇಲೆ ನೀರಾಗಿ ನಿಂತಿತು.

ಆಗ ಬ್ರಹ್ಮದೇವರು ಎದ್ದು ನಿಂತು ತಮ್ಮ ಬೆವರು ನೀರನ್ನು ನೋಡಹತ್ತಿದರು. ಆಗ ಆ ಬೆವರಿನ ಜಲದಲ್ಲಿ ಅವರ ಪ್ರತಿಬಿಂಬ ಮೂಡಿತು. ಅದು ಆ ಪ್ರಜಾಪತಿಗೆ ಬಹುಸುಂದರವಾಗಿ ಕಂಡಿತಂತೆ. ಅದರಿಂದ ಮನಸ್ಸು ಚಂಚಲವಾಗಿ ಅವರ ಶಕ್ತಿ ಕರಗಿ ಸ್ಖಲನವಾಯಿತಂತೆ. ಅದು ಎರಡು ಭಾಗವಾಯಿತು. ಅದರಲ್ಲಿ ಒಂದು

ಮಧುರ ಮತ್ತೊಂದು ಕಟು. ಮಧುರಭಾಗದಿಂದ ಭೃಗು, ಕಟುಭಾಗದಿಂದ ಆಂಗಿರಸ ಉತ್ಪನ್ನರಾದರು. ಈ ಭೃಗುಋಷಿಯೇ ಅಥರ್ವಣ ವೇದದ ದೃಷ್ಟಾರನಾದುದರಿಂದ ಅವನಿಗೆ ಅಥರ್ವಣ ಎಂದೂ ಹೆಸರು.

ಭಾಗವತದಲ್ಲಿ ಭೃಗು ಬ್ರಹ್ಮದೇವರ ಹೃದಯದಿಂದ ಜನಿಸಿದರೆಂದು ಹೇಳಿದೆ. ಮಹಾಭಾರತದ ಆದಿಪರ್ವದಲ್ಲಿ ವರುಣನ ಯಜ್ಞದಲ್ಲಿ ಬ್ರಹ್ಮದೇವರು ಅಗ್ನಿಯಿಂದ ಭೃಗುವನ್ನು ಉತ್ಪನ್ನ ಮಾಡಿದರೆಂದು ಸೂತರು ವಿವರಿಸಿದ್ದಾರೆ.

ಈ ಭೃಗು ಋಷಿಗೆ ಪುಲೋಮಾ ಎಂಬ ಹೆಂಡತಿ ಇದ್ದಳು. ಅವಳು ಗರ್ಭಿಣಿಯಿದ್ದಾಗ ಒಂದು ದಿನ ಭೃಗು ಋಷಿಗಳು ಸ್ನಾನಕ್ಕೆಂದು ನದಿಗೆ ಹೋಗಿದ್ದರು. ಆಗ ಪುಲೋಮಾ ಎಂಬ ಅದೇ ಹೆಸರಿನ ದೈತ್ಯನೊಬ್ಬ ಇವರ ಆಶ್ರಮಕ್ಕೆ ಬಂದ.

ಪುಲೋಮಾ ಚಿಕ್ಕವಳಿದ್ದಾಗ ಹಟ ಮಾಡುತ್ತಿರಲು ಅವಳನ್ನು ಹೆದರಿಸಲಿಕ್ಕಾಗಿ ತಾಯಿ- ತಂದೆಯರು 'ನೀನು ಹಟಮಾಡಿದರೆ ನಿನ್ನನ್ನು ಪುಲೋಮ ರಾಕ್ಷಸನಿಗೆ ಕೊಟ್ಟು ಬಿಡುತ್ತೇನೆ. ಏ ಪುಲೋಮ! ಇವಳನ್ನು ಹಿಡಿದುಕೊಂಡು ಹೋಗೊ' ಎಂದು ಗದರಿಕೆಯ ಮಾತಿನಲ್ಲಿ ನುಡಿದದ್ದನ್ನೇ ನಿಜವೆಂದು ನಂಬಿದ ಆ ದೈತ್ಯನು ತುಂಬು ಗರ್ಭಿಣಿಯಾದ ಅವಳನ್ನು ಅಪಹರಿಸಿ ಹೊತ್ತುಕೊಂಡು ವೈಯ್ಯಹತ್ತಿದ. ಮಾರ್ಗದಲ್ಲಿ ಭಯ ಸಂಭ್ರಮಗಳಿಂದ ಅವಳ ಗರ್ಭಚ್ಯುತವಾಗಿ ತೇಜಸ್ವಿಯಾದ ಮಗುವೊಂದು ಜನಿಸಿತು. ಹೊಟ್ಟೆಯಿಂದ ಹಾದಿಯಲ್ಲಿಯೇ ಉಚ್ಚಿ ಬಿದ್ದದ್ದರಿಂದ ಆ ಮಗು ಮುಂದೆ ಚ್ಯವನ ಋಷಿಯಂದೇ ಪ್ರಸಿದ್ಧವಾಯಿತು. ಮತ್ತು ಆ ಮಗುವಿನ ತೇಜಸ್ಸಿನಿಂದಲೇ ಆ ಪುಲೋಮ ದೈತ್ಯನು ಸುಟ್ಟು ಬೂದಿಯಾಗಿ ಹೋದನು.

ಭೃಗುಪತ್ನಿ ಪುಲೋಮೆಯು ಆ ಮಗುವನ್ನು ಎತ್ತಿಕೊಂಡು ಆಶ್ರಮಕ್ಕೆ ಬಂದಳು. ಆಗ ಕುಪಿತನಾದ ಭೃಗು ಋಷಿಯು 'ಆ ದೈತ್ಯನು ಯಾರನ್ನು ಕೇಳಿ ನಿನ್ನನ್ನು ಅಪಹರಿಸಿದನು' ಎಂದು ಕೇಳಲಾಗಿ ಪುಲೋಮೆಯು 'ಅಗ್ನಿಯನ್ನು ವಿಚಾರಿಸಿ ನನ್ನನ್ನು ಅವನು ಅಪಹರಿಸಿದ' ನೆಂದು ಹೇಳಿದಳು.

ಆಗ ಭೃಗು ಋಷಿಯು ಅಗ್ನಿಗೆ 'ನೀನು ಸರ್ವ ಭಕ್ಷಿಯಾಗು' ಎಂದು ಶಾಪಕೊಟ್ಟನು. ಅದಕ್ಕೆ ಅಗ್ನಿಯು 'ಇದರಲ್ಲಿ ನನ್ನದೇನು ತಪ್ಪಿಲ್ಲ. ನಾನು ಆ ದೈತ್ಯನಿಗೆ

'ಇವಳನ್ನು ತಂದೆ- ತಾಯಿಗಳು ಬಾಲ್ಯದಲ್ಲಿ ವಿನೋದವಾಗಿ ನಿನಗೆ ಕೊಡುತ್ತೇವೆಂದು ಹೇಳಿದ್ದರೂ ವಿಧಿ ಪೂರ್ವಕವಾಗಿ ಈ ಋಷಿಗೇ ದಾನವಾಗಿ ಕೊಟ್ಟಿದ್ದಾರೆ. ಆದ್ದರಿಂದ ನಿನ್ನ ಅಧಿಕಾರವೇನೂ ಅವನ ಮೇಲೆ ಇಲ್ಲ' ಎಂದು ಸ್ಪಷ್ಟವಾಗಿ ಹೇಳಿದೆ. ಆದರೂ ಅವನು ಬಲಾತ್ಕಾರ ಮಾಡಿದರೆ ನನ್ನದೇನು ತಪ್ಪು? ನೀನು ನಿಷ್ಕಾರಣವಾಗಿ ಶಪಿಸುವದಾದರೆ ನಾನು ಯಾವದನ್ನೂ ಸ್ವೀಕರುಸುವುದಿಲ್ಲ' ಎಂದು ಅದೃಶ್ಯನಾಗಿಬಿಟ್ಟನು. ಆಗ ಮೂರು ಲೋಕದ ಜನರೂ ಸಂಭ್ರಾಂತರಾಗಿ ಬ್ರಹ್ಮದೇವರಿಗೆ ಶರಣು ಹೋದರು.

ಆಗ ಬ್ರಹ್ಮನು ಅಗ್ನಿಯನ್ನು ಕರೆದು ಅವನಿಗೆ ಅನೇಕ ರೂಪಗಳನ್ನು ಕೊಟ್ಟು 'ನೀನು ಕ್ರವ್ಯಾದ ರೂಪದಿಂದ ಅಪಾನ ಮಾರ್ಗದ ಜ್ವಾಲೆಗಳಿಂದ ಎಲ್ಲವನ್ನೂ ಭಕ್ಷಣ ಮಾಡಿ ಭೃಗು ಋಷಿಯ ಶಾಪದಂತೆ ಸರ್ವ ಭಕ್ಷನಾಗು, ಮತ್ತು ಋಷಿಮುನಿಗಳು ದೇವತೆಗಳಿಗೂ ನಿನಗೂ ಕೊಟ್ಟ ಯಜ್ಞದ ಪವಿತ್ರ ಆಹುತಿಗಳನ್ನು ಮುಖಭಾಗದಿಂದ ಸ್ವೀಕರಿಸಿ ಹುತಾಶನನೂ ಆಗು ಮತ್ತು ನಿನ್ನ ಸ್ಪರ್ಶವಾದ ಎಲ್ಲ ಪದಾರ್ಥಗಳೂ ಅತ್ಯಂತ ಪರಿಶುದ್ಧವಾಗಿ ಪವಿತ್ರವಾಗುವವು', ಎಂದು ಅಪ್ಪಣೆ ಕೊಡಿಸಿದರು, ಹೀಗೆ ಮಹಾಭಾರತದ ಆದಿ ಪರ್ವದಲ್ಲಿ ಕಥೆ ಬರುತ್ತದೆ.

ವಿಷ್ಣು ಸರ್ವೋತ್ತಮತ್ವ ತತ್ವವನ್ನು ಪ್ರತ್ಯಕ್ಷ ಕಂಡು ಜಗತ್ತಿಗೆ ಸಾರಿದ ಮಹರ್ಷಿಯೆಂದರೆ ಭೃಗು ಋಷಿಯೇ.

ಹಿಂದೆ ಸ್ವಾಯಂಭುವಮನು ಯಜ್ಞ ಮಾಡುವಾಗ ಬ್ರಹ್ಮ ವಿಷ್ಣು ಮಹೇಶ ಈ ತ್ರಿಮೂರ್ತಿಗಳಲ್ಲಿ ಯಾರು ಶ್ರೇಷ್ಠರು ಎಂದು ಋಷಿಗಳಲ್ಲಿ ವಾದ ಹುಟ್ಟಿತು. ಆಗ ಆ ಋಷಿಗಳೆಲ್ಲ ಕೂಡಿ ಭೃಗುವಿಗೆ ಇದರ ನಿರ್ಣಯ ಮಾಡಿಕೊಂಡು ಬರಲು ಹೇಳಿದರು. ಇವನು ಕೈಲಾಸ ಸತ್ಯಲೋಕಗಳಿಗೆ ಹೋದಾಗ ಬ್ರಹ್ಮಶಿವರು ತಮ್ಮ ಹೆಂಡಂದಿರೊಡನೆ ಸರಸವಾಡುತ್ತಿದ್ದು 'ಇಂಥ ಪ್ರಸಂಗದಲ್ಲಿ ಇದೇಕೆ ಭೃಗು ಬಂದಿತು' ಎಂದು ಬೇಸರ ತೋರಿಸಿದರು. ಆಗ ಅವನು ಸಿಟ್ಟಿಗೆದ್ದು ಮಹಾದೇವರಿಗೆ ಎಲ್ಲ ಕಡೆಗೂ ಲಿಂಗ ರೂಪದಿಂದಲೇ ನಿನ್ನ ಪೂಜೆಯಾಗಲೆಂದೂ, ಬ್ರಹ್ಮನಿಗೆ ನಿನ್ನ ಪೂಜೆಯೇ ಜಗತ್ತಿನಲ್ಲಿ ಆಗಬೇಡವೆಂದೂ ಶಪಿಸಿ ವಿಷ್ಣುವಿನ ಹತ್ತಿರ ಬಂದನು.

ಅಲ್ಲಿಯೂ ಅವನು ಲಕ್ಷ್ಮಿಯ ಜೊತೆಗೆ ಕ್ರೀಡಾಸಕ್ತನಾಗಿ ಕುಳಿತಿದ್ದನ್ನು ನೋಡಿ ಸಿಟ್ಟಿಗೆದ್ದು ವಿಷ್ಣುವಿನ ಎದೆಗೆ ಒದ್ದು ಬಿಟ್ಟನು ತಾಪಸನಾದ ಆ ಭೃಗು.

ಆಗ ಶ್ರೀಹರಿಯು ಸಿಟ್ಟಿಗೇಳದೆ ಆ ಮುನಿಯ ಪಾದ ಹಿಡಿದು, ಬಿಸಿನೀರಿನಿಂದ ತೊಳೆದು, ಪೂಜಿಸಿದ ಆ ನೀರನ್ನು ಪ್ರೋಕ್ಷಣ ಮಾಡಿಕೊಂಡನು. ಅವನ ಭಕ್ತವಾತ್ಸಲ್ಯ ನಿರಭಿಮಾನತೆ ಮತ್ತು ಕ್ರೋಧಜಯತ್ವಾದಿ ಗುಣಗಳನ್ನು ನೋಡಿ ಇವನೇ ಸರ್ವೋತ್ತಮ ಎಂದು ಭೃಗು ಸಾರಿದನು. ಆದರಿಂದ ಮನುವಿನ ಯಜ್ಞದಲ್ಲಿ ಕೂಡಿದ ಎಲ್ಲ ಋಷಿಗಳೂ ಶ್ರೀವಿಷ್ಣುವಿಗೆ ದೇವದೇವೋತ್ತಮನೆಂದು ಪ್ರಧಾನಾಹುತಿಯನ್ನಿತ್ತು ಪೂಜಿಸಿದರು. ಪದ್ಮಪುರಾಣ ಭಾಗವತ, ಪುರಾಣಗಳಲ್ಲಿ ಈ ಕತೆ ಬಂದಿದೆ.

ತೈತ್ತಿರೀಯೋಪನಿಷತ್ತಿನ ಭೃಗುವಲ್ಲಿಯಲ್ಲಿ ಇವನು ತನ್ನ ತಂದೆಯಾದ ವರುಣನಿಂದ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಬ್ರಹ್ಮಸ್ವರೂಪವನ್ನು ತಿಳಿದುಕೊಂಡು ಬ್ರಹ್ಮಜ್ಞಾನವನ್ನು ಪಡೆದನೆಂದೂ ಸಂದರ್ಭ ಬಂದಿದೆ.

ಭೃಗುವಿಗೆ ದಿವ್ಯಾ , ಪುಲೋಮಾ ಎಂಬ ಇಬ್ಬರು ಪತ್ನಿಯರಿದ್ದರು. ದಿವ್ಯಾ ಎಂಬ ಭಾರ್ಯೆಯಿಂದ ಶುಕ್ರಾಚಾರ್ಯರೂ ಪುಲೋಮಾಳಿಂದ ಚ್ಯವನ ಋಷಿಯೂ ಉತ್ಪನ್ನರಾದರೂ. ಚ್ಯವನನಿಂದ ಸುಕನ್ಯೆಯಲ್ಲಿ ದಧೀಚರೂ ದಧೀಚರಿಗೆ ಸರಸ್ವತಿಯೆಂಬ ಭಾರ್ಯೆಯಿಂದ ಸಾರಸ್ವತರೂ, ಸಾರಸ್ವತರಿಗೆ ಋಚೀಯಲ್ಲಿ ಔರ್ವ ಋಷಿಯೂ ಹಾಗೇ ಮುಂದೆ ಇದೇ ಪೀಳಿಗೆಯಲ್ಲಿ ಜಮದಗ್ನಿ, ಪರಶುರಾಮ ಮುಂತಾದ ತೇಜಸ್ವೀ ಋಷಿಮುನಿಗಳು ಜನಿಸಿ ಭಾರ್ಗವರೆಂದೂ ಪ್ರಸಿದ್ಧರಾದರು.

ಅತ್ತ ದಿವ್ಯೆಯ ಸಂತತಿಯೂ ಶುಕ್ರಾಚಾರ್ಯರಿಂದ ವರಿತ್ರ , ಶಂಡ, ಮರ್ಕ, ತ್ವಷ್ಟಾ, ವಿಶ್ವರೂಪ, ವಿಶ್ವಕರ್ಮ ಮುಂತಾಗಿ ಭಾರ್ಗವ ವಂಶವು ಬೆಳೆಯಿತು.

ಭೃಗು ಋಷಿಗಳಿಗೆ ದಿವ್ಯಾಭಾರ್ಯೆಯಿಂದ ಶುಕ್ರಾಚಾರ್ಯರಲ್ಲದೆ ಭುವನ, ಭಾವನ, ಅಂತ್ಯ , ಕ್ರತು, ಶುಚಿ, ಸ್ವಮೂರ್ಧನ್, ವ್ಯಾಜ, ವಸುದ, ಪ್ರಭವ, ಅವ್ಯಯ,

ಅಧಿಪತಿ ಎಂದು ಹನ್ನೆರಡು ಜನ ದೇವತೆಗಳೂ ಮಕ್ಕಳಾಗಿ ಜನಿಸಿದರು' ಎಂದು ಮುಂತಾಗಿ ಭಾರತ, ಮತ್ಸ್ಯಪುರಾಣ, ವಾಯು ಪುರಾಣಾದಿಗಳಲ್ಲಿ ಭೃಗುವಂಶ ವಿಸ್ತಾರದ ವಾರ್ತೆ ಬರುತ್ತದೆ.

ಆದರೆ ಬ್ರಹ್ಮಾಂಡ ಪುರಾಣದಲ್ಲಿ ಈ ಭೃಗುವಂಶದ ವ್ಯಾಪ್ತಿ ವಿಸ್ತಾರಗಳನ್ನು ಬೇರೆ ಬಗೆಯಾಗಿಯೇ ಚಿತ್ರಿಸಲಾಗಿದೆ.

ದಕ್ಷಪ್ರಜಾಪತಿಯ ಖ್ಯಾತಿ ಎಂಬ ಕನ್ಯೆಯನ್ನು ಭೃಗುಋಷಿಗೆ ಕೊಟ್ಟಿದ್ದು ಮಹಾದೇವರು ಭೃಗುವಿನ ಷಡ್ಡಕನಾಗಿದ್ದನು. ಮಹಾದೇವನಿಗೆ ಆ ಮಂತ್ರವನ್ನೀಯದೇ ದಕ್ಷನು ಮಾಡಿದ ಯಜ್ಞದಲ್ಲಿ ಅವನ ಹಿರಿಯ ಅಳಿಯನಾದ ಈ ಭೃಗುವೂ ಭಾಗವಹಿಸಿ ಶಿವನಿಂದೆ ಮಾಡಿದ. ಇದನ್ನು ತಿಳಿದ ಇಂದುಮೌಲಿಯು ಭೃಗುಮುನಿಯನ್ನು ದಂಡಿಸಿ ಬರಲು ನಂದಿಯನ್ನು ಕಳಿಸಿದ. ಭೃಗು ನಂದಿಯನ್ನು ಶಪಿಸಿ ಓಡಿಸಿದ. ಆಗ ಪರಮೇಶ್ವರನು ತನ್ನ ಜಡೆಯಿಂದ ವೀರಭದ್ರನನ್ನು ಉತ್ಪಾದಿಸಿ ಕಳಿಸಿದ. ಕ್ರೂರನಾದ ಆ ವೀರಭದ್ರನು ದಕ್ಷನ ಯಜ್ಞವನ್ನು ವಿಧ್ವಂಸ ಗೈದು ಭೃಗುವಿನ ಗಡ್ಡವನ್ನೆಲ್ಲ ಸುಟ್ಟುಬಿಟ್ಟ. ಮುಂದೆ ಎಲ್ಲ ಋಷಿಗಳೂ ಶಂಕರನನ್ನು ಸ್ತುತಿಸಿ ಪ್ರಸನ್ನೀಕರಿಸಿಕೊಂಡ ಬಳಿಕ ಇವನಿಗೆ ಹೋತದ ಗಡ್ಡವನ್ನು ಹಚ್ಚಲಾಯಿತೆಂದು ಮುಂತಾಗಿ ಭಾಗವತಾದಿಗಳಲ್ಲಿ ಕತೆ ಕಂಡುಬರುತ್ತದೆ. ಆದರೆ ಬ್ರಹ್ಮಾಂಡ ಪುರಾಣದಲ್ಲಿ ಸ್ವತಃ ಮಹಾದೇವರೇ ಬಂದು ಎಲ್ಲರನ್ನೂ ಶಾಸನ ಮಾಡಿದರೆಂದು ಉಲ್ಲೇಖವಿದೆ.

ಈ ಬ್ರಹ್ಮಾಂಡ ಪುರಾಣದ ಪ್ರಕಾರ ಭೃಗುಋಷಿಗೆ ಖ್ಯಾತಿಯಲ್ಲಿ ಲಕ್ಷ್ಮೀದೇವಿಯೇ ಹುಟ್ಟಿದಳು. ಅವಳನ್ನು ಶ್ರೀವಿಷ್ಣುವಿಗೆ ಮದುವೆ ಮಾಡಿ ಭೃಗುಋಷಿಯು ಕನ್ಯಾದಾನ ಮಾಡಿದನು ಎಂದು ಹೇಳಲಾಗಿದೆ.

ಆ ಲಕ್ಷ್ಮೀನಾರಾಯಣರಿಂದ ಬಲ ಮತ್ತು ಉನ್ಮಾದ ಎಂಬ ಮಕ್ಕಳಾದರು. ಲಕ್ಷ್ಮಿಯ ಅನಂತರ ಧಾತೃ ವಿಧಾತೃ ಎಂಬ ಇಬ್ಬರು ಮಕ್ಕಳು ಖ್ಯಾತಿಯಿಂದ ಭೃಗುವಿಗೆ ಜನಿಸಿದರು. ಈ ವಿಧಾತೃವಿನ ವಂಶದಲ್ಲಿಯೇ ಮುಂದೆ ಮೃಕಂಡು ಮತ್ತು ಮಾರ್ಕಂಡೇಯ ಮೊದಲಾದವರು ಹುಟ್ಟಿದರು.

ಈ ಭೃಗು ಋಷಿಗೆ ಸತ್ತವರನ್ನು ಬದುಕಿಸುವ ಸಂಜೀವಿನೀ ವಿದ್ಯೆಯು ಬರುತ್ತಿತ್ತು. ಅವರ ಮಗನಾದ ಶುಕ್ರಾಚಾರ್ಯರು ತನ್ನ ತಪಶ್ಶಕ್ತಿಯಿಂದ ಅದನ್ನು ಅರಿತಿದ್ದರು.

ಒಮ್ಮೆ ಈ ಸಂಜೀವಿನೀ ಶಕ್ತಿಯ ಪ್ರಾಪ್ತಿಗಾಗಿ ಶುಕ್ರಾಚಾರ್ಯರು ಅನುಷ್ಠಾನಕ್ಕೆ ಕುಳಿತಿದ್ದರು. ಭೃಗುವೂ ತಪಸ್ಸಿಗೆ ಹೋಗಿದ್ದ. ಇವರಿಬ್ಬರೂ ಇಲ್ಲದ್ದನ್ನು ಕಂಡು ದೇವತೆಗಳು ದೈತ್ಯರ ಮೇಲೆ ಏರಿಬಂದರು. ಆಗ ದೈತ್ಯರೆಲ್ಲ ಹೊಡೆತ ತಿಂದು ಗುರುಗಳಾದ ಶುಕ್ರಾಚಾರ್ಯರ ಮನೆಗೆ ಓಡುತ್ತ ಬಂದರು. ಆಗ ತಂದೆ ಮಕ್ಕಳಿಬ್ಬರೂ ಮನೆಯಲ್ಲಿರಲಿಲ್ಲ. ಆದರೂ ತನ್ನ ಪತಿಯ ಪ್ರಿಯ ಶಿಷ್ಯರನ್ನು ಈ ಪ್ರಾಣಾಪಾಯದಿಂದ ರಕ್ಷಿಸುವದು ತನ್ನ ಕರ್ತವ್ಯವೆಂದು ತಿಳಿದು ಭೃಗುವಿನ ಭಾರ್ಯೆಯು ತಾನೇ ಕೈಯಲ್ಲಿ ಶಸ್ತ್ರಾಸ್ತ್ರ ಹಿಡಿದು ಯುದ್ಧಕ್ಕೆ ಹೊರಟಳು.

ಅವಳ ಶೌರ್ಯ ಪರಾಕ್ರಮಗಳ ಮುಂದೆ ನಿಲ್ಲಲಿಕ್ಕಾಗದೇ ದೇವತೆಗಳ ಸೈನ್ಯವೆಲ್ಲ ತತ್ತರಿಸಿ ದಿಕ್ಕಾಪಾಲಾಗಿ ಓಡಹತ್ತಿತು. ರಣಚಂಡಿಯಂತೆ ರಕ್ಕಸರ ಪಕ್ಷ ಹಿಡಿದು ಹೋರಾಡುವ ಆ ಋಷಿ ರಮಣಿಯನ್ನು ನೋಡಿ ದೇವದಾನವರೆಲ್ಲರೂ ಬೆಕ್ಕಸಬೆರಗಾದರು. ದೇವತೆಗಳೆಲ್ಲರೂ ಸೋತು ಓಡಿಹೋಗಿ ವಿಷ್ಣುವಿಗೆ ಮೊರೆ ಹೊಕ್ಕು ಈ ಮಾರಿಯಂಥ ನಾರಿಯಿಂದ ನಮ್ಮನ್ನು ರಕ್ಷಿಸಬೇಕೆಂದು ಬೇಡಿಕೊಂಡರು. ಆಗ ಭಗವಾನ್ ವಿಷ್ಣುವು ತನ್ನ ಸುದರ್ಶನ ಚಕ್ರವನ್ನು ಬಿಟ್ಟು ಆ ಭೃಗುಪತ್ನಿಯ ತಲೆಯನ್ನು ಕತ್ತರಿಸಿ ಹಾಕಿದನು.

ತಪಸ್ಸಿನಿಂದ ಮರಳಿ ಬಂದ ಭೃಗುಋಷಿಯು ತನ್ನ ಪತ್ನಿಯ ಈ ದುರ್ದಶೆಯನ್ನು ಕಂಡು ಕೆರಳಿ 'ನೀನು, ಭೂಲೋಕದಲ್ಲಿ ಹತ್ತು ಸಲ ಹಂದಿ, ಮೀನು, ಆಮೆ, ಮಾನವಾದಿ ನಾನಾ ನೀಚ ಜನ್ಮಗಳಲ್ಲಿ ಹುಟ್ಟಿಬಾ' ಎಂದು ವಿಷ್ಣುವಿಗೆ ಶಾಪ ಕೊಟ್ಟನು. ಮತ್ತು ಸಂಜೀವಿನಿ ವಿದ್ಯೆಯ ಪ್ರಭಾವದಿಂದ ವಿಷ್ಣು ಕೊಂದ ತನ್ನ ಪತ್ನಿಯನ್ನು ಮರಳಿ ಬದುಕಿಸಿದನು' ಎಂದು ಮುಂತಾಗಿ ಕತೆ ಬೆಳೆದು ಬಂದದ್ದನ್ನು ಕಾಣುತ್ತೇವೆ.

ಪದ್ಮಪುರಾಣದಲ್ಲಿ ಭೃಗುವು ವಿಷ್ಣುವನ್ನು ಶಪಿಸಿದ ಕಾರಣವನ್ನು ಬೇರೆ ಹೇಳಲಾಗಿದೆ. 'ಭೃಗು ಒಮ್ಮೆ ವಿಷ್ಣುವನ್ನು ತನ್ನ ಯಜ್ಞ ರಕ್ಷಣೆಗಾಗಿ ಸ್ವಯಂ ನೀನೇ ಇಲ್ಲಿ ನಿಂತು ಯಜ್ಞವನ್ನು ಸಾಂಗ ಮಾಡಬೇಕೆಂದು ಬೇಡಿಕೊಂಡನು. ಆದಕ್ಕೆ ಶ್ರೀ

ವಿಷ್ಣುವು ಆಗಲಿ ಎಂದು ಒಪ್ಪಿಕೊಂಡು ಭೃಗುವಿನಿಂದ ಯಜ್ಞವನ್ನು ಪ್ರಾರಂಭ ಮಾಡಿಸಿದ.

ಆದರೆ ಅಷ್ಟರಲ್ಲಿ ದೇವೇಂದ್ರನು ಅವಸರದಿಂದ ಹೇಳಿ ಕಳಿಸಿದ್ದರಿಂದ ದೇವಕಾರ್ಯಕ್ಕಾಗಿ ವಿಷ್ಣು ಅಮರಾವತಿಗೆ ಹೋದ. ಅದನ್ನು ನೋಡಿ ದೈತ್ಯರು ನುಗ್ಗಿ ಬಂದು ಭೃಗುವಿನ ಯಜ್ಞವನ್ನೆಲ್ಲ ಹಾಳು ಮಾಡಿಬಿಟ್ಟರು. ಆಗ ಭೃಗುವಿಗೆ ವಿಷ್ಣುವಿನ ಮೇಲೆ ಕೋಪ ಬಂದು ಅವನು ಹರಿಗೆ 'ದಶಾವತಾರ ದುರ್ದಶೆಗೆ ಈಡಾಗು ಎಂದು ಶಾಪವಿತ್ತ' ಎಂದು ಹೇಳಿದ್ದಾರೆ.

ಹಿಂದೆ ಭೂಲೋಕದ ರಾಜನಾದ ನಹುಷನು ಕೆಲಕಾಲ ಇಂದ್ರ ಸಿಂಹಾಸನವನ್ನು ಅಲಂಕರಿಸಿದ್ದ. ಆಗ ಅಧಿಕಾರದ ಮದದಿಂದ ಅವನು ದಾರಿ ತಪ್ಪಿ ನಡೆಯ ಹತ್ತಿದ. ಇಂದ್ರನ ರಾಣಿ ಶಚೀದೇವಿಯನ್ನು ಕಾಮಿಸಿದ. ದೇವತೆಗಳನ್ನು ಅವಮಾನಿಸಿದ, ಋಷಿಗಳನ್ನು ದಂಡಿಸಿದ, ಆಗ ಅಗಸ್ತ್ಯ ಮತ್ತು ಭೃಗು ಋಷಿ ಇಬ್ಬರೂ ಕೂಡಿ ಅವನ ಪಾರುಪತ್ಯ ಮಾಡಬೇಕೆಂದು ನಿರ್ಧರಿಸಿದರು.

ಒಂದುದಿನ ನಹುಷನು ಸಪ್ತರ್ಷಿಗಳನ್ನು ಕರೆದು ತನ್ನ ಪಲ್ಲಕ್ಕಿಯನ್ನು ಹೊರಲು ಆಜ್ಞೆಮಾಡಿದ. ದೇವರಾಜ ಸಿಂಹಾಸನದಿಂದ ಬಂದ ಬಳಿಕ ಆ ಅಪ್ಪಣೆಯನ್ನು ಎಲ್ಲರೂ ಮಾನ್ಯಮಾಡಬೇಕಷ್ಟೆ! ಸಪ್ತರ್ಷಿಗಳೆಲ್ಲರೂ ಪಲ್ಲಕ್ಕಿಯನ್ನು ಬೋವಿಗಳಾಗಿ ಎತ್ತಿದರು. ಶಚೀರಾಣಿಯ ಅಂತಃಪುರಕ್ಕೆ ಆ ಮೇಣೆಯನ್ನು ಹೊತ್ತೊಯ್ಯಲು ನಹುಷನು ಋಷಿಗಳಿಗೆ ಆದೇಶ ಮಾಡಿದ. ಅಗಸ್ತ್ಯರು ಪಾಲಕಿ ಹೊತ್ತಿದ್ದರು, ನಡೆಯುವಾಗ ಪಲ್ಲಕ್ಕಿಯು ತುಸು ಹೊಯ್ದಾಡಿತು. ನಹುಷನಿಗೆ ಸಿಟ್ಟು ಬಂದು 'ಚೆನ್ನಾಗಿ ನಡೆಯಲಿಕ್ಕೆ ಬರುವುದಿಲ್ಲವೇ?' ಎಂದು ಅಗಸ್ತ್ಯರ ತಲೆಗೆ ಕಾಲಿನಿಂದ ಒದ್ದ. ಅಗಸ್ತ್ಯರ ಜಡೆಯಲ್ಲಿ ಭೃಗು ಋಷಿಗಳು ಸೂಕ್ಷ್ಮರೂಪದಿಂದ ಕುಳಿತಿದ್ದರು. ಕಾಲಿನಿಂದ ಒದ್ದ ಕೂಡಲೇ ಭೃಗು ಋಷಿಗಳು ನಹುಷನಿಗೆ 'ಸ್ವರ್ಗಭ್ರಷ್ಟನಾಗಿ ನೆಲಕ್ಕೆ ಬೀಳು' ಎಂದು ಶಾಪವಿತ್ತರು.

ಹೀಗೆ ಉನ್ಮತ್ತರನ್ನು ಶಾಸನ ಮಾಡುವದರಲ್ಲಿಯೂ ಪರತತ್ವವನ್ನು ತಿಳಿದು ಸತ್ಯೋಪಾಸನೆ ಮಾಡುವಲ್ಲಿಯೂ, ತನ್ನ ಸಂಜೀವಿನಿ ವಿದ್ಯೆಯ ಪ್ರಭಾವದಿಂದ

ಪರೋಪಕಾರ ಗೈಯ್ಯುವದರಲ್ಲಿಯೂ ಈ ಭೃಗುಋಷಿಯು ಮುನಿಮಂಡಲಕ್ಕೆಲ್ಲ ಆದರ್ಶಭೂತರಾಗಿದ್ದರು.

ಪರೋಪಕಾರ, ಜ್ಞಾನಪ್ರಸಾರಗಳೇ ಈ ಮಹರ್ಷಿಗಳ ಜೀವನದ ಉಸಿರಾಗಿದ್ದವು. ಹೈಹಯ ರಾಜರ ಅತ್ಯಾಚಾರದಿಂದ ಹತರಾದ ಜಮದಗ್ನಿ ಮುನಿಗಳನ್ನು ಭೃಗು ಋಷಿಯೇ ತಮ್ಮ ಸಂಜೀವಿನೀ ವಿದ್ಯೆಯಿಂದ ಬದುಕಿಸಿದರು.

ಹಿಂದೊಮ್ಮೆ ವಿಂಧ್ಯ ಹಿಮಾಚಲಗಳಲ್ಲಿ ಬರಗಾಲ ಬಿದ್ದಾಗ ಭೃಗುಗಳು ಅಲ್ಲಿಗೆ ತಪಸ್ಸಿಗೆ ಹೋಗಿದ್ದರು. ಆಗ ಅಲ್ಲಿ ಒಂದು ವಿದ್ಯಾಧರ ದಂಪತಿಗಳಲ್ಲಿ ಗಂಡನ ಮೋರೆ ಹುಲಿಯದಾಗಿದ್ದರಿಂದ ಹೆಂಡತಿಗೋಳಾಡುತ್ತಿದ್ದಳು. ಭೃಗುಗಳು ಅವರಿಬ್ಬರಿಗೂ ಏಕಾದಶೀ ವ್ರತದ ಮಹಿಮೆ ಹೇಳಿ ಅವನಿಗೆ ಮಾನವೀಯ ಮುಖವನ್ನು ಕರುಣಿಸಿದರು.

ಇವರು ಭರದ್ವಾಜ ಋಷಿಗಳಿಗೆ ಈಶ್ವರನ ಜಗಜ್ಜನ್ಮಾದಿ ಕಾರಣತ್ವವನ್ನು ತಿಳಿಸಿ ಸೃಷ್ಟಿರಹಸ್ಯವನ್ನೆಲ್ಲ ಹೇಳಿಕೊಟ್ಟರು. ವೈತಹವ್ಯನನ್ನು ಬ್ರಾಹ್ಮಣನನ್ನಾಗಿ ಮಾಡಿ ಅವನಿಂದ ಗೃತ್ಸಮದ ಗೋತ್ರವನ್ನು ಪ್ರಾರಂಭಿಸಿದರು.

ಭೃಗು ಋಷಿಗಳು ಗೋತ್ರ ಪ್ರವರ್ತಕರೂ ಮಂತ್ರ ದೃಷ್ಟಾರರೂ ಆಗಿರುತ್ತಾರೆ. ಋಗ್ವೇದದಲ್ಲಿ ಅವರ ಹೆಸರಿನಿಂದ ಅನೇಕ ಮಂತ್ರಗಳು ದೊರಕುತ್ತಿದ್ದರು ಅಥರ್ವಣ ವೇದಕ್ಕಂತೂ ಅವರೇ ಮೂಲ ಪುರುಷರಾಗಿದ್ದಾರೆ. ಈ ಭೃಗು ಋಷಿಗಳ ಹೆಸರಿನಿಂದ ಭೃಗು ಸ್ಮೃತಿ, ಭೃಗುಗೀತಾ, ಭೃಗುಸೂತ್ರ, ಭೃಗುಸಿದ್ಧಾಂತ ಮುಂತಾದ ಗ್ರಂಥಗಳು ಪ್ರಸಿದ್ಧವಿವೆ.



# ಕಶ್ಯಪ

**ಕಶ್ಯಪಃ ಸರ್ವಲೋಕೇಡ್ಯಃ ಸರ್ವಶಾಸ್ತ್ರಾರ್ಥಕೋವಿದಃ ।**
**ನಾರೀಣಾಂ ಪಾಪನಾಶಾಯ ಋಷಿರೂಪೇಣ ತಿಷ್ಠತಿ ॥**

ಬ್ರಹ್ಮರ್ಷಿ ಮರೀಚಿ ಮುನಿಯ ಮಗ; ಕಶ್ಯಪರ ತಾಯಿ ಕರ್ದಮ ಪುತ್ರಿಯಾದ ಕಲೆ. ಈತನ ಹೆಂಡಿರು ದಕ್ಷನ ಹದಿಮೂರು ಮಂದಿ ಪುತ್ರಿಯರಾದ ಅದಿತಿ, ದಿತಿ, ದನು, ಕಾಲೆ, ದನಾಯು, ಸಿಂಹಿಕೆ, ಕ್ರೋಧೆ, ಪ್ರಾಧೆ, ವಿಶ್ವೆ , ವಿನತೆ, ಕಪಿಲೆ, ಮುನಿ, ಕದ್ರು ಎಂಬುವರು. ಇವರಿಗೆ ಹದಿನೇಳು ಮಂದಿ ಪತ್ನಿಯರೆಂದು ಭಾಗವತದಲ್ಲಿ ಹೇಳಿದೆ. ವೈಶ್ವಾನರನ ಪುತ್ರಿಯರಾದ ಕಾಲಾ ಮತ್ತು ಪುಲೋಮಾ ಎಂಬುವರೂ ಕಶ್ಯಪನ ಮಡದಿಯರು. ಪರಶುರಾಮನಿಂದ ಇವರಿಗೆ ಭೂಮಿಯು ದಾನವಾಗಿ ಕೊಡಲ್ಪಟ್ಟಿತು. ಇದರಿಂದ ಭೂಮಿಗೆ ಕಾಶ್ಯಪಿ ಎಂಬ ಹೆಸರಿದೆ. ವರುಣನ ಗೋಗಳನ್ನು ಈ ಮುನಿಯು ಎರವಲು ತಂದು ಅದಿತಿ ಸುರಭಿ ಎಂಬ ಇಬ್ಬರು ಪತ್ನಿಯರ ಮಾತು ಕೇಳಿ ಹಿಂದೆ ಕೊಡದುದರಿಂದ ವರುಣನ ಶಾಪಕ್ಕೆ ಗುರಿಯಾಗಿ ವಸುದೇವ ಮತ್ತು ದೇವಕಿ, ರೋಹಿಣಿಯರಾಗಿ ದ್ವಾಪರಯುಗದಲ್ಲಿ ಜನ್ಮವೆತ್ತಿದರು. ದನಗಳನ್ನು ವಸುದೇವನು ನಿರ್ಬಂಧಿಸಿದುದರಿಂದ ವಸುದೇವನಿಗೆ ಕಾರಾಗೃಹವಾಸ ಪ್ರಾಪ್ತವಾಯಿತು.

ಕಶ್ಯಪರು ವಸುದೇವನಾಗಿದ್ದಾಗಲೂ ಹದಿಮೂರು ಜನ ಪತ್ನಿಯರು. ರೋಹಿಣಿಯಲ್ಲಿ ಬಲರಾಮ ಕಾಶಿರಾಜನ ಸುತನು ಎಂಬ ಹೆಂಡತಿಯಲ್ಲಿ ಪೌಂಡ್ರಕ ವಾಸುದೇವ ಶೃಗಾಲವಾಸುದೇವ ಮುಂತಾದ ಸಾತ್ವಿಕ- ತಾಮಸ ಚೇತನರನ್ನು ಭಗವತ್ಕಾರ್ಯಕ್ಕಾಗಿ ಪಡೆದ ಮಹಾನುಭಾವರು.

ಕಶ್ಯಪರು ಗೋತ್ರಪ್ರವರ್ತರಾದ ಮಹರ್ಷಿಗಳಲ್ಲಿ ಮೊದಲನೆಯವನು. ಗೋತ್ರ ಗೊತ್ತಿಲ್ಲದವರು ತಮ್ಮದು ಕಾಶ್ಯಪ ಗೋತ್ರವೆಂದೇ ತಿಳಿಯಬೇಕೆಂದು ಧರ್ಮಶಾಸ್ತ್ರಗಳು ಹೇಳುತ್ತಿವೆ. ಪರ್ವತನೆಂಬ ದೇವರ್ಷಿ ಮತ್ತು ವಿಭಾಂಡಕನೆಂಬ ಬ್ರಹ್ಮರ್ಷಿಯು ಇವರ ಮಗ. ಕಶ್ಯಪನಿಗೆ ಅದಿತಿಯಲ್ಲಿ ದೇವತೆಗಳೂ, ದಿತಿಯಲ್ಲಿ ದೈತ್ಯರೂ, ದನುವಿನಲ್ಲಿ ದಾನವರೂ, ಕಾಲೆಯಲ್ಲಿ ಕಾಲಕೇಯರೂ ದನಾಯುವಿನಲ್ಲಿ

ಸಿದ್ಧರೂ, ಕ್ರೋಧೆಯಲ್ಲಿ ಮಾಂಸಾಹಾರಿ ಪ್ರಾಣಿಗಳೂ, ಪ್ರಾಧೆಯಲ್ಲಿ ಗಂಧರ್ವರೂ, ವಿನತೆಯಲ್ಲಿ ಅರುಣ ಗರುಡರೂ, ಕಪಿಲೆಯಲ್ಲಿ ಗೋಗಳೂ, ಮುನಿಯಲ್ಲಿ ಅಪ್ಸರೆಯರೂ, ಕದ್ರುವಿನಲ್ಲಿ ಹುಲ್ಲುಗಳೂ, ತಾಮ್ರೆಯಲ್ಲಿ ಅಶ್ವ, ಗರ್ದಭ, ಹದ್ದುಗಳೂ ಮಕ್ಕಳಾಗಿ ಹುಟ್ಟಿದರು.

ಭೂಮಿಯು ದುರಾತ್ಮರಿಂದ ಪೀಡಿತರಾಗಿ ರಸಾತಳಕ್ಕೆ ಇಳಿಯುತ್ತ ಬರಲು, ಉದಾರಬುದ್ಧಿಯುಳ್ಳ ಕಶ್ಯಪರು ಭೂಮಿಯನ್ನೆತ್ತಿ ತನ್ನ ತೊಡೆಯಲ್ಲಿ ಧರಿಸಿದರು. ಇದರಿಂದ ಭೂಮಿಗೆ ಉರ್ವಿ ಎಂದು ಹೆಸರಾಯಿತು.

ಬ್ರಹ್ಮದೇವರ ಸೃಷ್ಟಿಯನ್ನು ಪೂರ್ಣಗೊಳಿಸಿದ ಖ್ಯಾತಿಗೆ ಭಾಜನರು ಕಶ್ಯಪರು. ಎಲ್ಲಾ ಸೃಷ್ಟಿಯು ಕಶ್ಯಪರ ಮೂಲಕವೇ ನಡೆದುದರಿಂದ ಕಶ್ಯಪ ಸೃಷ್ಟಿಯೆಂದೇ ಕರೆಯಲಾಗುತ್ತದೆ. ಎಲ್ಲ ಮುಖದ ಜೀವರ ಉತ್ಪತ್ತಿಯು ಕಶ್ಯಪರಿಂದ ನಡೆದಿದೆ. ಅನೇಕ ಮಂತ್ರಗಳ ದ್ರಷ್ಟಾರ ಋಷಿಗಳು ಕಶ್ಯಪರಾಗಿದ್ದಾರೆ. ತಾಳ್ಮೆ, ಜಾಣ್ಮೆಗಳಲ್ಲಿ ಪ್ರಸಿದ್ಧರಾದವರು ಕಶ್ಯಪರು ಎಲ್ಲ ಋಷಿಗಳ ಯಾದಿಯಲ್ಲಿ ಅಗ್ರಸ್ಥಾನವನ್ನು ಅಲಂಕರಿಸಿದ್ದಾರೆ. ದೈತ್ಯರನ್ನೂ, ದೇವತೆಗಳನ್ನೂ ಮಕ್ಕಳನ್ನಾಗಿ ಪಡೆದ ಇವರು ದ್ವಂದ್ವದಿಂದ ಅತೀತರೆನ್ನುವುದಕ್ಕೆ ಬೇರೆ ಸಾಕ್ಷಿ ಬೇಕಾಗಿರುವುದಿಲ್ಲ.

ತಾರತಮ್ಯ ಕಕ್ಷೆಯಲ್ಲಿಯೇ ಅತ್ಯಂತ ಬಲಿಷ್ಠನಾದ ಗರುಡನಿಗೆ ತಂದೆ ಎನಿಸಿದ ಕಶ್ಯಪರು ಬ್ರಹ್ಮದೇವರನ್ನೇ ತಂದೆಯನ್ನಾಗಿ ಪಡೆದಿದ್ದಾರೆ. ಸರ್ವೋತ್ತಮನಾದ ಭಗವಂತನನ್ನು ಮೂರು ಬಾರಿ ಮಗನನ್ನಾಗಿ ಪಡೆದ ಖ್ಯಾತಿಗೆ ಇವರಂತೆ ಬೇರೆ ಯಾರೂ ಭಾಜನರಾಗಿಲ್ಲ. ಅದಿತಿ-ಕಶ್ಯಪರ ಉದರದಲ್ಲಿ ಪರಮಾತ್ಮನು ಪೃಶ್ನಿಗರ್ಭ, ವಾಮನ, ವಾಸುದೇವ (ಶ್ರೀಕೃಷ್ಣ) ಹೀಗೆ ಮೂರು ಅವತಾರಗಳನ್ನು ತಾಳಿದ್ದಾನೆ.

ಕಶ್ಯಪರ ಉಪದೇಶಗಳೆಲ್ಲವೂ ಪುರಾಣಗಳಲ್ಲಿ ಭಾರತ-ಭಾಗವತಗಳಲ್ಲಿ ಭಗವಂತನ ವಿಷಯಕವಾಗಿ ಮೂಡಿಬಂದಿವೆ. ಜಗತ್ತಿನಲ್ಲಿ ಸಂತಾನಹೀನರಿಗೆಲ್ಲರಿಗೂ ಅತ್ಯಂತ ಶ್ರೇಷ್ಠವಾದ ಪಯೋವ್ರತವನ್ನು ಅದಿತಿಯನ್ನು ನಿಮಿತ್ತಮಾಡಿಕೊಂಡು ಉಪದೇಶಿಸಿದ ಕೀರ್ತಿ ಕಶ್ಯಪರದ್ದು. ಇಂದಿಗೂ ಫಾಲ್ಗುಣಮಾಸದಲ್ಲಿ ಅನೇಕ ವೈಷ್ಣವರು ಪಯೋವ್ರತವನ್ನು ವಾಸುದೇವ

ಮಂತ್ರಧ್ಯಾನದ ಮೂಲಕ ನಡೆಸುತ್ತಾರೆ. ಹೀಗೆ ಜಗತ್ತೆಲ್ಲವನ್ನೂ ಸರ್ವಾಂಗೀಣವಾದ ಅಭಿವೃದ್ಧಿಗೆ ಕೊಂಡೊಯ್ದು, ಮಂತ್ರದ್ರಷ್ಟಾರರಾದ ಮಕ್ಕಳನ್ನು ಸಮಾಜಕ್ಕೆ ನೀಡಿದ ಸ್ವಯಂ ಮಂತ್ರಸಿದ್ಧರು, ಮಂತ್ರದ್ರಷ್ಟಾರರು ಆದ ಕಶ್ಯಪರನ್ನು ಏನೆಂದು ಬಣ್ಣಿಸೋಣ!!

★ ★ ★

## ಅತ್ರಿ

ಅಗ್ನಿಹೋತ್ರರತಂ ಶಾಂತಂ ಸದಾ ವ್ರತಪರಾಯಣಮ್ ।
ಸತ್ಕರ್ಮನಿರತಂ ದಾಂತಂ ಚಿಂತಯೇದತ್ರಿಮವ್ಯಯಮ್ ॥

ತಪೋನಿರತರಾದ ಅತ್ರಿಗಳ ಪ್ರಾಣಾಯಾಮದಿಂದ ಭುಗಿಲೆದ್ದ ಯೋಗಾಗ್ನಿ ಮೂರು ಲೋಕಗಳನ್ನು ದಹಿಸಲಾರಂಭಿಸಿತು. ಇದನ್ನು ಶಾಂತಗೊಳಿಸಲು ಅತ್ರಿಗಳನ್ನು ಅನುಗ್ರಹಿಸಲು ಹರಿ-ಹರ-ಬ್ರಹ್ಮರು ಗರುಡ-ಋಷಭ-ಹಂಸಗಳನ್ನೇರಿ ಬಂದರು.

ಇಲ್ಲಿ ತಿಳಿಯಬೇಕಾದ ಕೆಲವು ರಹಸ್ಯಗಳಿವೆ.

ಅತ್ರಿ ಋಷಿಗಳು ಸರ್ವಾಂತರ್ಯಾಮಿಯಾದ ಜಗದೀಶ್ವರನೊಬ್ಬನನ್ನು ಸ್ತುತಿಸಿದ್ದು. ಆದರೆ ಬಂದದ್ದು ಮೂವರು. ಏಕೆ ಹೀಗೆ? ಎಂದರೆ ಅತ್ರಿ ಋಷಿಗಳು ಬ್ರಹ್ಮ-ರುದ್ರಾಂತರ್ಯಾಮಿ ವಿಷ್ಣುವನ್ನು, ಪ್ರತ್ಯೇಕವಾಗಿ ವೈಕುಂಠಸ್ಥ ವಿಷ್ಣುವನ್ನೂ ಸ್ತುತಿಸಿದ್ದರು. ಬ್ರಹ್ಮ-ರುದ್ರ-ವಿಷ್ಣುವಿನಂತಹ ಮೂರು ಪುತ್ರರನ್ನು ಬಯಸಿದ್ದರು. ಆದಕ್ಕಾಗಿ ಮೂವರು ಬಂದರು. ವಾಸ್ತವಿಕವಾಗಿ ಅತ್ರಿಗಳ ಪ್ರಾರ್ಥನೆ ಬ್ರಹ್ಮನ ಅಂತರ್ಯಾಮಿಯಾದ ಬ್ರಹ್ಮಾ ಎನ್ನುವ ವಿಷ್ಣುವಿನಲ್ಲಿ ರುದ್ರನ ಅಂತರ್ಯಾಮಿಯಾದ ರುದ್ರ ಎಂಬ ವಿಷ್ಣುವಿನಲ್ಲಿಯೇ ಇತ್ತು. ಆದ್ದರಿಂದ ವಿಷ್ಣುವಿನ ಬ್ರಹ್ಮ-ರುದ್ರ ಎಂಬ ಅಂತರ್ಯಾಮಿರೂಪಗಳು ಮಾತ್ರ ಬರಬೇಕಿತ್ತು. ಆದರೆ ಚತುರ್ಮುಖತ್ರ್ಯಂಬಕರ ಜೊತೆಗೆ ಬ್ರಹ್ಮ-ರುದ್ರ ಎಂಬ ವಿಷ್ಣುರೂಪ ಬಂದಿತೇ ವಿನಾ ಪ್ರತ್ಯೇಕ ಬ್ರಹ್ಮ-ರುದ್ರ ಎಂಬ ವಿಷ್ಣುರೂಪಗಳು ಬರಲಿಲ್ಲ. ಇದಕ್ಕೆ

ಕಾರಣವಿಷ್ಟೆ. ರಾಮ-ಕೃಷ್ಣ- ವಿಷ್ಣುಮುಂತಾದ ಶ್ರೀಹರಿಯ ರೂಪಗಳು ಪ್ರತ್ಯೇಕವಾಗಿ ಇರುವಂತೆ - ಅಂತರ್ಯಾಮಿಗಳಾದ ಬ್ರಹ್ಮ-ರುದ್ರ ಎಂಬ ರೂಪಗಳು ಪ್ರತ್ಯೇಕ ಇಲ್ಲ. ಆದುದರಿಂದ ಒಬ್ಬನಿಗೆ ಹಾಲು ತಾ! ಎಂದಾಗ ಆತ ಪಾತ್ರೆ ಸಹಿತ ಹಾಲುತರುವಂತೆ. ಹಾಲು-ಪಾತ್ರೆಯಿಂದ ಬೇರೆಯಾಗಿದ್ದರೂ ಹಾಲಿನ ಪ್ರಾಪ್ತಿ ಪಾತ್ರೆಸಹಿತವಾಗಿಯೇ ಆಗಿದೆ. ಆದರಂತೆ ಬ್ರಹ್ಮ-ರುದ್ರ ಎಂಬ ವಿಷ್ಣುವಿನರೂಪ ಕರೆದರೆ ಆ ದೇವತೆಗಳೂ ಬರುತ್ತಾರೆ. ಈ ರಹಸ್ಯ ಅರಿಯದ ಅಜ್ಞಾನಿಗಳು ಬ್ರಹ್ಮ-ವಿಷ್ಣು-ರುದ್ರರು ಮೂವರು ಜಗದೀಶ್ವರರು ಎಂದು ಭಾವಿಸುತ್ತಾರೆ. ಇವರಿಗೆ ಎಂದೆಂದಿಗೂ ಜ್ಞಾನ-ಭಕ್ತಿಗಳು ಉದಿಸವು. ಅಜ್ಞರಿಗೆ ಮೋಹಬರಲೆಂಬ ಉದ್ದೇಶವೂ ಇದೆ. ಆದ್ದರಿಂದಲೇ ಅತ್ರಿಋಷಿಗಳ ಒಂದು ಮಾತು ಅಜ್ಞರಿಗೆ ಗೊಂದಲ ಉಂಟುಮಾಡುತ್ತದೆ.

> ಏಕೋ ಮಯೇಹ ಭಗವಾನ್ವಿಬುಧಪ್ರಧಾನ-
> ಶ್ಚಿತ್ತೀಕೃತಃ ಪ್ರಜನನಾಯ ಕಥಂ ನು ಯೂಯಮ್ ।
> ಅತ್ರಾಗತಾಸ್ತನುಭೃತಾಂ ಮನಸೋಽಪಿ ದೂರಾದ್
> ಭೂತ ಪ್ರಸೀದತ ಮಹಾನಿಹ ವಿಸ್ಮಯೋ ಮೇ ॥ (೪-೧-೨೮)

ಸಂತಾನಾಪೇಕ್ಷಿಯಾದ ನಾನು ಒಬ್ಬನೇ ಜಗದೀಶ್ವರನನ್ನು ಪ್ರಾರ್ಥಿಸಿದ್ದೆನು. ಆದರೆ ಮೂವರು ಬಂದಿರೇಕೇ? ದೇಹಧಾರಿಗಳ ಮನಸ್ಸಿಗೂ ನಿಲುಕದ ನಿಮ್ಮ ಆಗಮನ ನನಗೆ ಅತಿವಿಸ್ಮಯ ಪುಟ್ಟಿಸಿದೆ. ಇದರ ರಹಸ್ಯವನ್ನು ನೀವೇ ಭೇದಿಸಿರಿ ಎಂದು ಪ್ರಾರ್ಥಿಸುತ್ತಾರೆ. ಇದಕ್ಕೆ ವಿಷ್ಣುವು ಉತ್ತರವಾಗಿ ಮುನಿಯೇ! ನೀನು ತ್ರಿಮೂರ್ತಿಗಳಲ್ಲಿ ಶ್ರೀಹರಿಯನ್ನು ಧ್ಯಾನಿಸಿರುವಿ. ಆದರಂತೆ ನಾವು ಬಂದಿದ್ದೇವೆ. ಆದರೆ ವಿಷ್ಣುರೂಪದಂತೆ ಬ್ರಹ್ಮ-ಶಿವ ರೂಪಗಳು ಪ್ರತ್ಯೇಕವಾಗಿ ಗೋಚರಿಸವು. ಆದುದರಿಂದ ಅಧಿಷ್ಠಾನರಾದ ಬ್ರಹ್ಮ-ಶಿವರೂ ಬಂದಿದ್ದಾರಷ್ಟೇ ಎನ್ನುತ್ತಾನೆ. ಇದರ ಜೊತೆಗೆ 'ಲೋಕಾನಾಂ ಮೋಹನಾಯ ಚ' ಎಂಬುದನ್ನು ಸೇರಿಸಿಕೊಳ್ಳಬೇಕು. ಅಜ್ಞಲೋಕಕ್ಕೆ ಈ ಮೂವರು ಒಂದೇ ಎಂಬ ಭ್ರಮೆಯು ಹುಟ್ಟಲಿ ಎಂಬ ಅಭಿಪ್ರಾಯವೂ ಇದೆ. ಆದರೆ ಅತ್ರಿ ಋಷಿಗಳಿಗೆ ಪರಮಾತ್ಮನು ಮಗನಾಗಿ ಹುಟ್ಟುವಾಗ ಸ್ವತಃ ತಾನು ಸ್ವರೂಪಾಂಶದಿಂದ ದತ್ತನಾದ. ಶಿವನ

ಅಂತರ್ಯಾಮಿಯಾದ ಶ್ರೀಹರಿಯು ದುರ್ವಾಸ ಎಂಬ ರುದ್ರನ ಅವತಾರವನ್ನು ಅಧಿಷ್ಠಾನವಾಗಿಟ್ಟುಕೊಂಡು ಅವತರಿಸಿದ. ಆದರೆ ಬ್ರಹ್ಮನ ಅಂತರ್ಯಾಮಿಯಾದ ವಿಷ್ಣುವು ನೇರವಾಗಿ ಬ್ರಹ್ಮನನ್ನಾಗಲೀ ಬ್ರಹ್ಮನ ಅವತಾರವನ್ನಾಗಲಿ ಅಧಿಷ್ಠಾನ ವಾಗಿಟ್ಟುಕೊಳ್ಳದೆ ಚಂದ್ರನನ್ನು ಅಧಿಷ್ಠಾನವನ್ನಾಗಿಟ್ಟು ಕೊಂಡು ಅವನಲ್ಲಿ ಬ್ರಹ್ಮನ ಆವೇಶವನ್ನು ಸೇರಿಸಿ ಅದರಲ್ಲಿ ತಾನು ಬ್ರಹ್ಮನೆನಿಸಿದ. ಇದಕ್ಕೆ ಕಾರಣವನ್ನು ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ಹೇಳುತ್ತಾರೆ–

ಬ್ರಹ್ಮಣೋ ನಾವತಾರೋಸ್ತಿ ಸನ್ನಿಧಾನಂ ತು ಕೇವಲಮ್ ।
ಋತೇ ವಿಷ್ಣೋರಾತ್ಮನಶ್ಚ ತದಂಶೋಕ್ತಿಃ ಪ್ರವೇಶತಃ ॥

ಬ್ರಹ್ಮನು-ಪುರುಷನಾಮಕನಾದ ಶ್ರೀಹರಿಯಿಂದ ಚತುರ್ಮುಖನಾಗಿ ಅವತರಿಸಿದ. ನಂತರ ಸ್ವತಃ ತನ್ನಿಂದಲೇ ಬ್ರಹ್ಮಾಂಡದ ಹೊರಗೆ ಸತ್ವಾಭಿಮಾನಿಯಾದ ಗಾಯತ್ರೀ- ಸಾವಿತ್ರೀ- ಸರಸ್ವತೀ ಎಂಬಲ್ಲಿ ಸರಸ್ವತೀಯಿಂದ ತಾನೇ ಹುಟ್ಟಿದ. ಇಷ್ಟುಹೊರತು ಬೇರೊಬ್ಬರಿಂದ ಬ್ರಹ್ಮನಿಗೆ ಉತ್ಪತ್ತಿ ಇಲ್ಲ. ಎಲ್ಲಿಯಾದರೂ ಅವತಾರವೆಂದು ಬ್ರಹ್ಮನಿಗೆ ಹೇಳಿದ್ದರೆ ಅದನ್ನು ಆವೇಶವೆಂದೇ ಪರಿಗ್ರಹಿಸಬೇಕು. ಅತ್ರಿಗಳು ಹೀಗೆ ತಪಸ್ಸಿನಿಂದ ಬ್ರಹ್ಮ-ವಿಷ್ಣು-ರುದ್ರರನ್ನು ಅಭಿಮುಖೀಕರಿಸಿಕೊಂಡ ಮಹಾನುಭಾವರು.

★ ★ ★ ★

## ಭಾರದ್ವಾಜ

ಜಟಿಲಂ ತಪಸಾ ಸಿದ್ಧಂ ಯಜ್ಞಸೂತ್ರಾಕ್ಷಧಾರಿಣಮ್ ।
ಕಮಂಡಲುಧರಂ ನಿತ್ಯಂ ಭರದ್ವಾಜಂ ನತೋಽಸ್ಮ್ಯಹಮ್ ॥

ದೇವಗುರು ಬೃಹಸ್ಪತ್ಯಾಚಾರ್ಯರು ಮಮತೆಯೊಂದಿಗೆ ಕೂಡಿದ್ದರ ಪರಿಣಾಮವಾಗಿ ಜನಿಸಿದ ಮಗುವೇ ಭರದ್ವಾಜ. ಕೂಸು ಹುಟ್ಟಿದ ಬಳಿಕ ಅದನ್ನಾರು ರಕ್ಷಿಸಬೇಕು! ಮಮತೆಯು ಅದನ್ನು ಬೃಹಸ್ಪತಿಗೇ ಒಪ್ಪಿಸಿ ಇದನ್ನು ನೀವೇ ಪೋಷಿಸಿರಿ ಎಂದಳು. ಅವನು ಅವಳಿಗೆ ನೀನೇ ತಾಯಿಯಾದುದರಿಂದ ಇದನ್ನು ರಕ್ಷಿಸು ಎಂದು

ಹೇಳಿದ. ಅವಳು ಆ ಮಗುವನ್ನು ಬಿಟ್ಟೇ ನಡೆದಳು. ಬೃಹಸ್ಪತಿಯೂ ಅದನ್ನು ತೊರೆದು ನಡೆದನು. ಆಗ ಮರುತ್ತರು ಆ ಮಗುವನ್ನು ಎತ್ತಿಕೊಂಡು ಭೂಮಂಡಲದ ಚಕ್ರವರ್ತಿ ಭರತನಿಗೆ ತಂದು ಒಪ್ಪಿಸಿದರು. ದುಷ್ಯಂತ ಸಾರ್ವಭೌಮ ಮತ್ತು ಶಕುಂತಲೆಯರ ಮಗನಾದ ಭರತ ಚಕ್ರವರ್ತಿಗೆ ಮೂವರು ಹೆಂಡಂದಿರಿದ್ದರು. ಮೂರು ಹೆಂಡಂದಿರಿಗೂ ಒಬ್ಬೊಬ್ಬ ಮಕ್ಕಳಿದ್ದರೂ ಅವು ದುಷ್ಯಂತನಷ್ಟು ಸುಂದರವಾಗಿರಲಿಲ್ಲ. ಅದರಿಂದ ಮಹಾರಾಜನು ಕುಪಿತನಾಗಿ ತಮ್ಮನ್ನೆ ಬಿಟ್ಟು ಬಿಡಬಹುದೆಂದು ಭಯದಿಂದ ಮೂವರೂ ರಾಣಿಯರು ತಮ್ಮ ಮಕ್ಕಳನ್ನು ಕೊಂದುಬಿಟ್ಟರು. ಇದನ್ನು ತಿಳಿದು ಚಕ್ರವರ್ತಿಯು ನಿರಾಶನಾಗಿ ತನ್ನ ವಂಶದ ಕುಡಿಯೇ ಬಾಡಿಹೋಯಿತೆಂದು ದುಃಖದಿಂದ ಮಕ್ಕಳ ಸಲುವಾಗಿ ಮರುತ್ ಸ್ತೋಮ ಎಂಬ ಯಜ್ಞವನ್ನು ಮಾಡತೊಡಗಿದನು. ಆಗ ದೇವತೆಗಳು ತಾಯಿತಂದೆಗಳು ತೊರೆದುಹೋದ ಅನಾಥ ಭರದ್ವಾಜನನ್ನು ತಂದು ಅವನಿಗಿತ್ತು ಇವನನ್ನೇ ನಿನ್ನ ಮಗನನ್ನಾಗಿ ಮಾಡಿಕೋ ಎಂದು ಹೇಳಿದರು. ಅದರಂತೆ ಭರತನು ಭರದ್ವಾಜನನ್ನು ತನ್ನ ಪುತ್ರನೆಂದು ಸ್ವೀಕರಿಸಿದನು.

ಆದರೆ ಜನ್ಮತಃ ವಿರಕ್ತನಾದ ಭರದ್ವಾಜನಿಗೆ ರಾಜ್ಯ, ಅಧಿಕಾರ, ಐಶ್ವರ್ಯ, ಮತ್ತು ವಿಷಯ ಸುಖಗಳ ಭೋಗೇಚ್ಛೆಯು ಇರಲಿಲ್ಲ. ಆದುದರಿಂದ ಅವನು ಭರತ ಚಕ್ರವರ್ತಿಯ ಕಡೆಯಿಂದ ಯಮುನಾ ನದಿಯ ದಂಡೆಯ ಮೇಲೆ ಅನೇಕ ಯಜ್ಞಯಾಗಗಳನ್ನು ಮಾಡಿಸಿ ಅವನಿಗೆ ಬೇರೊಂದು ಗಂಡು ಮಗನು ಜನಿಸುವಂತೆ ಮಾಡಿದನು. ಭರತಚಕ್ರವರ್ತಿಯು ತೀರಿಕೊಂಡ ಬಳಿಕ ಅವನ ಔರಸಪುತ್ರನಾದ ಭ್ರೂಮನ್ಯುವು ಪ್ರೌಢಪ್ರಬುದ್ಧನಾದ ಕೂಡಲೇ ಅವನಿಗೆ ಆ ಭರತ ರಾಜ್ಯವನ್ನೆಲ್ಲ ಒಪ್ಪಿಸಿ ತಾನು ತಪಸ್ಸಿಗೆ ನಡೆದ ಭರದ್ವಾಜ. ಆದರೆ ಲೋಕೋತ್ತರ ಪ್ರತಿಭಾಶಾಲಿಯೂ ರಾಜಕಾರಣ ಪಂಡಿತನೂ ಆದ ಭರದ್ವಾಜನನ್ನು ಅಂದಿನ ಜನ ಏಕಾಂತದಲ್ಲಿ ತಪಸ್ಸನ್ನು ಮಾಡಗೊಡುತ್ತಿದ್ದಿಲ್ಲ. ಕಾಶಿಯ ನರೇಶ ದಿವೋದಾಸನಿಗೆ ಶಂಬರಾಸುರನ ಉಪದ್ರವವು ಬಹಳವಾಗಿ ಅವನು ಕಂಗಾಲಾಗಿದ್ದ. ಆಗ ಅವನು

ಭರದ್ವಾಜನ ಬಳಿಗೆ ಬಂದು ತನ್ನ ಕುಲಗುರುವಾಗಿ ಕಾಪಾಡಬೇಕೆಂದು ಅಂಗಲಾಚಿದ. ಆಗ ಪ್ರಜಾವತ್ಸಲನಾದ ಭರದ್ವಾಜ ಕಾಶೀ ಖಂಡದ ಜನರ ಪೀಡೆಯನ್ನು ಪರಿಹರಿಸಲಿಕ್ಕಾಗಿ ದಿವೋದಾಸನ ಪಕ್ಷಗಟ್ಟಿನಿಂತು ಸಾಕ್ಷಾದ್ ದೇವೇಂದ್ರನೇ ಅವನ ಸಹಾಯಕ್ಕೆ ಬರುವಂತೆ ಮಾಡಿದ. ಇದರಿಂದ ಶಂಬರಾಸುರನು ಸೋತು ಓಡಿಹೋದ. ವಿಜಯಿಯಾದ ದಿವೋದಾಸನಿಗೆ ಅಸುರ ರಾಜ್ಯದ ಅಪಾರ ಐಶ್ವರ್ಯವು ಕೈವಶವಾಯಿತು. ಆಗ ಅವನು ಭರದ್ವಾಜರಿಗೂ ವಿಪುಲ ಸಂಪತ್ತನ್ನು ದಾನವಿತ್ತನು.

ಇದರಂತೆ ಆ ಕಾಲದಲ್ಲಿ ವರಶಿಖ ಎಂಬ ರಾಜರು ಮಹಾಪ್ರಬಲರೂ ಮದೋನ್ಮತ್ತರೂ ಆಗಿದ್ದರು. ಅವರು ತಮ್ಮ ಪ್ರಚಂಡ ಸೇನೆಯಿಂದೊಡಗೂಡಿ, ಕಂಡವರ ರಾಜ್ಯದಲ್ಲಿನುಗ್ಗಿ, ಅಲ್ಲಿಯ ಅರಸರನ್ನು ಸೋಲಿಸಿ ಸಿರಿಸಂಪತ್ತನ್ನೆಲ್ಲ ಕೊಳ್ಳೆ ಹೊಡೆಯುತ್ತಿದ್ದರು. ಅಭ್ಯಾವರ್ತಿ, ಚಾಯಮಾನ, ಪ್ರಸ್ತೋಕ ಮುಂತಾದ ಅನೇಕ ರಾಜರು ವಾರಶಿಖರ ಪ್ರಚಂಡದಾಳಿಗೆ ತುತ್ತಾಗಿ ರಾಜ್ಯಭ್ರಷ್ಟರಾಗಿ ದಿಕ್ಕುಗೇಡಿಗಳಾಗಿದ್ದರು. ಅವರೆಲ್ಲರೂ ಭರದ್ವಾಜರ ಕರ್ತೃತ್ವಶಕ್ತಿಯನ್ನು ಕೇಳಿ ಅವರಿಗೆ ಶರಣಾಗತರಾಗಿ ರಕ್ಷಿಸಬೇಕೆಂದು ಬೇಡಿಕೊಂಡರು. ಆಗ ಭರದ್ವಾಜರು ತಮ್ಮ ಚಿರಂಜೀವನಾದ ಪಾಯುಮುನಿಯನ್ನು ಕರೆಯಿಸಿ ಇವರು ಯುದ್ಧದಲ್ಲಿ ಅಜೇಯರಾಗುವಂತೆ ಮಾಡು ಎಂದು ಹೇಳಿದರು.

ಆಗ ಪಾಯುವು ತನ್ನ ಅದ್ಭುತವಾದ ಮಂತ್ರ ಶಕ್ತಿಯಿಂದ ದಿವ್ಯವಾದ ರಥ, ಬಿಲ್ಲು, ಬಾಣ ಮತ್ತು ಅನೇಕ ಶಸ್ತ್ರಾಸ್ತ್ರಗಳನ್ನು ನಿರ್ಮಿಸಿ ಅವುಗಳನ್ನು ಅಭಿಮಂತ್ರಣ ಮಾಡಿ ಆ ಎಲ್ಲ ರಾಜರಿಗೂ ಕೊಟ್ಟನು. ಇಂಥ ದಿವ್ಯಾಸ್ತ್ರಗಳನ್ನು ಪಡೆದ ಅಭ್ಯಾವರ್ತಿ, ಚಾಯಮಾನ ಮತ್ತು ಸೃಂಜಯ, ಕುಮಾರ, ಪ್ರಸ್ತೋಕ ಮುಂತಾದ ಪೀಡಿತ ಪರಾಜಿತ ರಾಜರು ಹರಿಯುವ ಪೀಯಾ ನದಿಯ ದಂಡೆಯ ಮೇಲೆ ವಾರಶಿಖರವನ್ನು ತಡೆದರು. ಅವರಿಬ್ಬರ ಈ ಕಾಳಗದಲ್ಲಿ ಭರದ್ವಾಜರ ಪ್ರಯತ್ನದಿಂದ ಇಂದ್ರನ ಸಹಾಯವು ಚಾಯಮಾನಾದಿಗಳಿಗೆ ದೊರೆತು ಅವರು ಹುಮ್ಮಸ್ಸಿನಿಂದ ವಾರ ಶಿಖರನ್ನೆಲ್ಲ ಕೊಚ್ಚಿಹಾಕಿದರು. ಆಗ ಅಭ್ಯಾವರ್ತಿ ಚಾಯಮಾನವರ ಸೈನ್ಯಗಳು

ಅವರನ್ನು ಯವ್ಯಾವತೀ ನದಿಯ ಪಾತ್ರದವರೆಗೂ ಬೆನ್ನಟ್ಟಿ ಓಡಿಸಿಬಂದರು. ಹೀಗೆ ಭರದ್ವಾಜರ ಅನುಗ್ರಹದಿಂದ ಗೆಲುವು ಪಡೆದ ಆ ರಾಜರು ತಮ್ಮ ಗುರುಗಳಿಗೆ ಅಪರಿಮಿತ ಐಶ್ವರ್ಯವನ್ನು ಇತ್ತರು. ಭರದ್ವಾಜರಿಗೆ ಋಜಶ್ವಿನ್, ಪಾಯು, ಗರ್ಗ ಮುಂತಾದ ಅನೇಕ ಬ್ರಹ್ಮಜ್ಞಾನಿಗಳಾದ ಮಕ್ಕಳಿದ್ದರು. ವೇದಕಾಲದಲ್ಲಿ, ರಾಜಕಾರಣದಲ್ಲಿ ಅತ್ಯಂತ ನಿಷ್ಣಾತ ಋಷಿಯೆಂದರೆ ಭರದ್ವಾಜರೇ ಆಗಿದ್ದರು. ಮುಂದೆ ಕಾರ್ತವೀರ್ಯಾರ್ಜುನನು ಬಂದು ದಿವೋದಾಸನನ್ನು ಸೋಲಿಸಿ ಕಾಶಿಯನ್ನು ಆಕ್ರಮಿಸಿದಾಗ ದಿವೋದಾಸನು ಓಡಿ ಭರದ್ವಾಜರಿದ್ದ ಆಶ್ರಮಕ್ಕೆ ಬಂದು ಮತ್ತೆ ಅವರಿಗೆ ಶರಣು ಎಂದ. ಆಗ ಭರದ್ವಾಜರು ದಿವೋದಾಸನಿಂದ ಯಜ್ಞ ಮಾಡಿಸಿ ಅವನಿಗೆ ಅವನಿಂದ ಕಾರ್ತವೀರ್ಯನ ಮಕ್ಕಳನ್ನು ಸೋಲಿಸಿ ಅವನ ರಾಜ್ಯವನ್ನು ಮರಳಿ ಕೊಡಿಸಿದರು.

ಇಷ್ಟೆಲ್ಲ ಮಾನ ಧನ ಪ್ರತಿಷ್ಠೆ ಗೌರವಾದರಗಳು ತಾವಾಗಿ ಬಂದು ಅಡಿಬುಡದಲ್ಲಿ ಬಿದ್ದು ಹೊರಳಾಡುತ್ತಿದ್ದರೂ ಭರದ್ವಾಜರಿಗೆ ಐಶ್ವರ್ಯದ ಮೇಲೆ ಆಶೆಯಿದ್ದಿಲ್ಲ. ಅವರಿಗಿರುವ ಒಂದೇ ಒಂದಾದ ಆಶೆಯೆಂದರೆ ಸಮಗ್ರವಾದ ವೇದ ರಾಶಿಯನ್ನೆಲ್ಲ ಓದಿ ಬಿಡಬೇಕೆಂಬುದೇ ಆಗಿದ್ದಿತು. ಅವರು ಇಡೀ ತಮ್ಮ ಜೀವಮಾನದಲ್ಲಿ ಉಳಿದೆಲ್ಲ ಕಾರ್ಯಕ್ರಮಗಳಿಗೂ ಅತ್ಯಲ್ಪ ಅವಕಾಶವನ್ನಿತ್ತು ಉಳಿದ ಸಮಯವನ್ನೆಲ್ಲ ವೇದಾಧ್ಯಯನಕ್ಕೇ ವಿನಿಯೋಗಿಸುತ್ತಿದ್ದರು.

ವಯಸ್ಸಾದ ಬಳಿಕಂತೂ ಅವರು ಎಲ್ಲ ಲೋಕ ವ್ಯವಹಾರ, ಮನೆ ಮಾರುಗಳನ್ನು ಬಿಟ್ಟು ಏಕಾಂತದಲ್ಲಿ ನಿಂತು ವೇದಗಳನ್ನು ಸಂಶೋಧನ ಮಾಡತೊಡಗಿದರು. ವೇದ ರಾಶಿಯನ್ನು ಓದಿ ಓದಿದಂತೆ ಅವರಿಗೆ ಆ ಜ್ಞಾನ ಸಾಗರದ ಅಗಾಧತೆ ಅನಂತತೆಯ ಅರಿವಾಗಿ ಸಮಗ್ರವಾದ ವೇದ ವಾಙ್ಮಯವನ್ನೆಲ್ಲ ಪೂರ್ತಿ ತಿಳಿದು ನೋಡಿಯೇ ಬಿಡಬೇಕೆಂದು ಆಗ್ರಹ ಹುಟ್ಟಿತು. ಹಗಲು ರಾತ್ರಿ, ಅವರ ವೇದ ಸಂಶೋಧನೆಯು ಸಾಗಿತು. ಮುನ್ನೂರು ವರ್ಷ ಅವರು ಒಂದೇ ಸ್ಥಳದಲ್ಲಿದ್ದು ಚತುರ್ವೇದಗಳ ವಿವಿಧ ಶಾಲೆಗಳನ್ನು ಪರೀಕ್ಷಿಸಿ ಪಾರಾಯಣ ಮಾಡಿ ಅವುಗಳ ಅರ್ಥವನ್ನು ಅನುಸಂಧಾನಕ್ಕೆ ತಂದುಕೊಂಡರು.

ಮುಪ್ಪು ಅವರ ಪಾಂಚಭೌತಿಕವಾದ ದೇಹವನ್ನು ಅಪ್ಪಿ ಜೀರ್ಣ-ಶೀರ್ಣವಾಗಿತ್ತು. ಸಾವು ಬಾವುಗ ಬೆಕ್ಕಿನಂತೆ ಹತ್ತಿರದಲ್ಲಿಯೇ ಹೊಂಚಿತ್ತು. ಆಗ ಮರಣಶಯ್ಯೆಯಲ್ಲಿದ್ದ ಅವರನ್ನು ಮಾತನಾಡಿಸಬೇಕೆಂದು ಎಲ್ಲ ಋಷಿಮುನಿಗಳೂ ದೇವಗಂಧರ್ವರೂ ಬಂದು ಹೋದರು. ದೇವರಾಜನಾದ ಇಂದ್ರನೂ ಒಮ್ಮೆ ಅವರ ಮರುಕು ಗುಡಿಸಲಿಗೆ ಬಂದನು. ಅವನನ್ನು ಕಂಡು ದರ್ಭಶಯ್ಯೆಯಲ್ಲಿ ಒರಗಿ ಕೊನೆಯ ದಿನಗಳನ್ನು ಎಣಿಸುತ್ತಲಿರುವ ಭರದ್ವಾಜರ ಒಣ ತುಟಿಯಲ್ಲಿ ಕ್ಷೀಣ ನಗೆಯೊಂದು ಕಾಣಿಸಿತು. ಆಗ ಇಂದ್ರನು ಅವರಿಗೆ ಕಿವಿಯ ಬಳಿ ಬಾಗಿ ತಮ್ಮ ಕೊನೆಯ ಅಪೇಕ್ಷೆ ಏನು ಎಂದು ಕೇಳಿದ. ಆಗ ಋಷಿಯು ಮತ್ತೆ ೩೦೦ ವರ್ಷ ಆಯುಷ್ಯಬೇಕೆಂದು ಕೇಳಿದರು. ಅದಕ್ಕೆ ಇಂದ್ರನು ಆಗಲಿ ಎಂದು ಅವರಿಗೆ ಮುನ್ನೂರು ವರ್ಷದ ಆಯುಷ್ಯವನ್ನು ಕರುಣಿಸಿದನು. ಕೂಡಲೇ ಅವರು ನವ ತರುಣನಂತೆ ಎದ್ದು ಕುಳಿತರು. ಈಗ ಭರದ್ವಾಜರು ತಮ್ಮ ಹೊಸ ಜೀವನದಲ್ಲಿ ಒಂದು ಕ್ಷಣವೂ ವ್ಯರ್ಥಗೈಯ್ಯದೇ ಹಗಲಿರುಳು ವೇದ ಸಾಹಿತ್ಯವನ್ನು ಓದತೊಡಗಿದರು. ಓದ ಓದಿದಂತೆ ಆ ಅಕ್ಷರ ವಾಙ್ಮಯ ಪ್ರಪಂಚದ ಜ್ಞಾನದ ಕ್ಷಿತಿಜವು ವಿಸ್ತರಿಸುತ್ತ ಹೋಗುತ್ತಿತ್ತು. ನವಜನ್ಮದ ಮುನ್ನೂರು ವರ್ಷಗಳು ಈ ವೇದಾಧ್ಯಯನದಲ್ಲಿ ಎತ್ತೋ ಹಾರಿಹೋದವು. ಮತ್ತೆ ಮುಪ್ಪು ಮರಣಗಳು ಸಮೀಪಿಸಿದವು. ಆಗ ಪುನಃ ಇಂದ್ರನು ಬಂದು ನಿಮ್ಮ ಅಪೇಕ್ಷೆ ಏನು? ಎಂದು ಕೇಳಿದನು. ಸಂಪೂರ್ಣ ವೇದವನ್ನು ಓದಿಯೇ ಬಿಡಬೇಕೆಂದು ಛಲ ಹಿಡಿದ ಭರದ್ವಾಜರು ಮತ್ತೆ ಮುನ್ನೂರು ವರ್ಷ ಆಯಸ್ಸಿನ ಮತ್ತೊಂದು ಜನ್ಮವನ್ನು ಕೊಡಬೇಕೆಂದು ಕೇಳಿಕೊಂಡರು. ಹೀಗೆ ಮೂರು ಬಾರಿ ಮೂರು ಜನ್ಮತಾಳಿ ಸಾವಿರಾರು ವರ್ಷ ಅಧ್ಯಯನ ಮಾಡಿದರೂ ಅವರಿಗೆ ಆ ವಿದ್ಯಾಸಾಗರದ ಅಂತಪಾರಗಳು ಹತ್ತಲಿಲ್ಲ.

ಆಗ ಒಂದು ದಿನ ದೇವೇಂದ್ರನು ಅವರ ಹತ್ತಿರ ಬಂದು ಅವರನ್ನು ದೊಡ್ಡದಾದ ಮೂರು ಗುಡ್ಡಗಳ ಬಳಿಗೆ ಕರೆದೊಯ್ದು ನಿಲ್ಲಿಸಿ ಅಲ್ಲಿ ಒಂದು ಬೆಟ್ಟದ ಬುಡದಲ್ಲಿಯ ಹಿಡಿಮಣ್ಣನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಬ್ರಹ್ಮನ್, ನೀವು ಈ ಮೂರು ಜನ್ಮಗಳಲ್ಲಿ ಓದಿದ ವೇದಭಾಗವು ಈ ನನ್ನ ಮುಷ್ಟಿಯಲ್ಲಿಯ ಮಣ್ಣಿನಷ್ಟಿದೆ. ಇನ್ನು

ನೀವು ತಿಳಿಯಲಾರದ ಓದಲಾರದ ಭಾಗವು ಈ ಮೂರು ಗುಡ್ಡಗಳಷ್ಟಿದೆ ಎಂದು ಋಗ್ವೇದ ಯಜುರ್ವೇದ ಸಾಮವೇದಗಳ ರಾಶಿಗಳನ್ನು ತೋರಿಸಿದನು. ಆಗ ಭರದ್ವಾಜರಿಗೆ ವೇದಗಳು ಅನಂತ ಅಪಾರವಿದ್ದು ಅವುಗಳನ್ನು ಪೂರ್ತಿಯಾಗಿ ತಾವು ಎಷ್ಟು ಜನ್ಮ ಶ್ರಮಿಸಿದರೂ ಶಕ್ಯವಿಲ್ಲ ಎಂದು ಖಾತ್ರಿಯಾಯಿತು. ಸಂಪೂರ್ಣ ವೇದದ ಅಂತ ಪಾರಗಳನ್ನು ಕಂಡೇಬಿಡುತ್ತೇನೆ ಎಂಬ ಅವರ ಛಲವು ಕಡಿಮೆಯಾಯಿತು.

ಆಗ ದೀನದೃಷ್ಟಿಯಿಂದ ಆ ವೇದ ರಾಶಿಯ ಕಡೆಗೆ ನೋಡಿ ನಿರಾಶರಾಗಿ ನಿಟ್ಟುಸಿರು ಬಿಡುತ್ತ ಕುಳಿತ ಆ ಮಹಾಮುನಿಗಳನ್ನು ಕುರಿತು ಮಹೇಂದ್ರನು ಸ್ವಾಮಿ, ನಿಮಗೆ ಸಂಪೂರ್ಣ ವೇದಾಧ್ಯಯನದ ಫಲವು ದೊರೆಯಬೇಕೆಂದು ಅಪೇಕ್ಷೆ ಇದ್ದರೆ ಸಾವಿತ್ರಾಗ್ನಿಚಯನವನ್ನು ಮಾಡಿರಿ. ಅದರಿಂದ ಸಮಗ್ರ ವೇದವನ್ನು ಓದಿ ತಿಳಿದುಕೊಂಡ ಫಲವು ದೊರಕುತ್ತದೆ ಎಂದು ಉಪದೇಶಿಸಿದನು. ಆದರಿಂದ ಮುನಿಗಳಿಗೆ ಉತ್ಸಾಹವಾಗಿ ಅವರು ಚಯನ ಯಾಗವನ್ನು ಮಾಡಿ ಸ್ವರ್ಗಕ್ಕೆ ಪ್ರಯಾಣ ಮಾಡಿದರು. ಈ ಸಾವಿತ್ರ ವಿದ್ಯೆಯನ್ನು ಹಿಂದೆ ಅಹೋರಾತ್ರಿಗಳ ಅಭಿಮಾನಿ ದೇವತೆಗಳು ಬಂದು ರಾಜರ್ಷಿ ಜನಕ ಮಹಾರಾಜನಿಗೆ ಉಪದೇಶ ಮಾಡಿದ್ದವು.

ಈ ವಂಶದಲ್ಲಿ ಭರದ್ವಾಜರು ಮಾತ್ರವಲ್ಲದೇ ಅವರ ಸಂತತಿಯ ಅನೇಕ ಋಷಿಗಳು ವೇದದ್ರಷ್ಟರಾದರು. ರಾಮನು ವನವಾಸಕ್ಕೆ ಹೋಗುವಾಗ ಅವರ ಆಶ್ರಮದಲ್ಲಿ ತಂಗಿದ್ದ, ಮುಂದೆ ಅಣ್ಣನನ್ನು ಕಾಣಲಿಕ್ಕೆ ಬಂದ ಭರತನ ರಾಜ ಪರಿವಾರಕ್ಕೆಲ್ಲ ಭರದ್ವಾಜರು ರಾಜಾತಿಥ್ಯವನ್ನು ನೀಡಿದರು. ಪಂಚರಾತ್ರ ಸಂಪ್ರದಾಯದಲ್ಲಿ ಭರದ್ವಾಜ ಸಂಹಿತಾ ಎಂಬ ನಾಲ್ಕು ಅಧ್ಯಾಯದ ಗ್ರಂಥವಿದೆ. ಪದ್ಮ ಪುರಾಣದಲ್ಲಿ ಭರದ್ವಾಜ ಸ್ಮೃತಿಯ ಉಲ್ಲೇಖವಿದೆ. ಮಹಾಭಾರತ ಹಾಗೂ ಕೌಟಲೀಯ ಅರ್ಥಶಾಸ್ತ್ರದಲ್ಲಿ ಭರದ್ವಾಜರ ದಂಡನೀತಿಯ ಉಲ್ಲೇಖವಿದೆ ಮತ್ತು ಸಂವಾದಗಳೂ ದೊರಕುತ್ತವೆ. ಇದರ ಮೇಲಿಂದ ಭರದ್ವಾಜರು ಭಾರತೀಯ ಅರ್ಥಶಾಸ್ತ್ರದ ಜನಕರಾಗಿದ್ದರೆಂದು ತಿಳಿಯುತ್ತದೆ.

★ ★ ★ ★

# ವಿಶ್ವಾಮಿತ್ರ

**ಕೃಷ್ಣಾಜಿನಧರಂ ವಿಪ್ರಂ ಸದಂಡಪರಿಧಾನಕಮ್ ।**
**ದರ್ಭಪಾಣಿಂ ಜಟಾಜೂಟಂ ವಿಶ್ವಾಮಿತ್ರಂ ವಿಚಿಂತಯೇ ॥**

ಕುಶಿಕ ರಾಜನ ಮಗ ಗಾಥಿ ಅಥವಾ ಗಾಧಿ. ಇವನು ಇಂದ್ರನ ಅವತಾರ. ಹೀಗೆ ಕುಶಿಕನ ಮಗನಾದ್ದರಿಂದ ಇಂದ್ರ ''ಕೌಶಿಕ'' (ಕುಶಿಕಸ್ಯ ಅಪತ್ಯಂ ಪುಮಾನ್ ಕೌಶಿಕಃ)

ಅನುಕ್ರಮಣಿಕಾದಲ್ಲಿ ಈ ಮಾತು ಬಂದಿದೆ; ''ಕುಶಿಕ ಇಂದ್ರತುಲ್ಯಂ ಪುತ್ರಮಿಚ್ಛನ್ ಬ್ರಹ್ಮಚರ್ಯಂ ಚಚಾರ, ತಸ್ಯ ಇಂದ್ರ ಏವ ಗಾಥೀ ಪುತ್ರೋ ಜಜ್ಞೇ''.

(ಇಂದ್ರನಂಥ ಮಗ ಬೇಕು ಎಂದು ಕುಶಿಕ ಬ್ರಹ್ಮಚರ್ಯದೀಕ್ಷಿತನಾದ, ಅವನಿಗೆ ಇಂದ್ರನೇ ಗಾಥಿ ಎಂಬ ಹೆಸರಿನಿಂದ ಮಗನಾದ).

ಈ ಗಾಥಿಯ ಮಗನೇ ವಿಶ್ವಾಮಿತ್ರ.

ವಿಷಯ ಹೀಗಿದ್ದರೂ ಸಾಯಣರು ಈ ಮಂತ್ರವನ್ನು ವಿವರಿಸುತ್ತ ಹೀಗೆ ಹೇಳುತ್ತಾರೆ. ''ಯದ್ಯಪಿ ವಿಶ್ವಾಮಿತ್ರಃ ಕುಶಿಕಸ್ಯ ಪುತ್ರಃ ತಥಾಪಿ ತದ್ರೂಪೇಣ ಇಂದ್ರಸ್ಯೈವ ಉತ್ಪನ್ನತ್ವಾತ್ ಕುಶಿಕ ಪುತ್ರತ್ವಮ್''.

ಇದರ ಅರ್ಥ ವಿಶ್ವಾಮಿತ್ರನೇ ಕುಶಿಕನ ಮಗನಾದ ಕೌಶಿಕ. ಆದರೆ ಇಂದ್ರನೇ ವಿಶ್ವಾಮಿತ್ರನಾಗಿ ಜನಿಸಿದ್ದರಿಂದ ಇಲ್ಲಿ ಇಂದ್ರನನ್ನೆ ಕೌಶಿಕ ಎಂದು ಕರೆಯಲಾಗಿದೆ. ಇದು ಅರ್ಥವಾಗದ ಗೊಂದಲ.

ವಿಶ್ವಾಮಿತ್ರ ಕುಶಿಕನ ಮಗ ಅಲ್ಲ; ಮೊಮ್ಮಗ. ಇಂದ್ರನು ಜನಿಸಿದ್ದು ಕುಶಿಕನ ಮಗ ಗಾಥಿಯಾಗಿ. ವಿಶ್ವಾಮಿತ್ರನ ಅಪ್ಪನಾಗಿ ಹೊರತು ವಿಶ್ವಾಮಿತ್ರನಾಗಿ ಅಲ್ಲ.

ಕ್ಷಾತ್ರ ತೇಜದ ಫಲವಾಗಿ ಅವತರಿಸಿದ ಮಹಾನುಭಾವರು ವಿಶ್ವಾಮಿತ್ರರು. ಕ್ಷಾತ್ರ ತೇಜಸ್ಸಿನ ಹಿನ್ನೆಲೆಯಲ್ಲೇ ಬ್ರಾಹ್ಮತೇಜಸ್ಸನ್ನು ಪಡೆದ ಮೇಧಾವಿಗಳು. ವಿಶ್ವಾಮಿತ್ರರು ಎಂದರೆ ಜಗತ್ತಿಗೆ ಅಮಿತ್ರರು ಎಂದರ್ಥವಲ್ಲ. ವಿಶ್ವಕ್ಕೆ ಮಿತ್ರ ಎಂದರ್ಥ. ಇದನ್ನು ಶ್ರೀಮದಾಚಾರ್ಯರು 'ವಿಶ್ವಸ್ಯ ಮಿತ್ರಂ ಸ ಇಹಾಜಗಾಮ' ಎಂದು ಹೇಳಿದ್ದಾರೆ.

ಲೋಕಕಲ್ಯಾಣದ ಮಹತ್ತರ ದೃಷ್ಟಿಯುಳ್ಳ ಬ್ರಹ್ಮರ್ಷಿ ವಿಶ್ವಾಮಿತ್ರರು ಸಮಸ್ತ ಸಜ್ಜನರ ಮನದಲ್ಲಿ ಆರಾಧ್ಯದೈವವಾಗಿದ್ದಾರೆ. ದಶರಥ ಮಹಾರಾಜನ ಬಳಿ ರಾಮನನ್ನು ಯಜ್ಞ ರಕ್ಷಣೆಗಾಗಿ ಕೇಳಲು ಬಂದ ವಿಶ್ವಾಮಿತ್ರರನ್ನು ಕುರಿತು ದಶರಥರಾಜನು ಹೇಳುತ್ತಾನೆ–

> ಯಥಾಮೃತಸ್ಯ ಸಂಪ್ರಾಪ್ತಿರ್ಯಥಾ ವರ್ಷಮನೂದಕೇ ।
> ಯಥಾ ಸದೃಶದಾರೇಷು ಪುತ್ರಜನ್ಮಾಪ್ರಜಸ್ಯ ಚ ॥
>
> ಪ್ರಣಷ್ಟಸ್ಯ ಯಥಾ ಲಾಭೋ ಯಥಾ ಹರ್ಷೋ ಮಹೋದಯೇ ।
> ತಥೈವಾಗಮನಂ ಮನ್ಯೇ ಸ್ವಾಗತಂ ತೇ ಮಹಾಮುನೇ ॥

ಬರಗಾಲದಿಂದ ಬೆಂದು ಸಂತ್ರಸ್ತರಾದವರಿಗೆ ಮಳೆಬಂದರೆ ಹೇಗೆ ಸಂತೋಷವಾಗುತ್ತದೆಯೋ ಅಷ್ಟು ಆನಂದ ನಿಮ್ಮ ಆಗಮನದಿಂದಾಗಿದೆ. ಮಕ್ಕಳಿಲ್ಲದವರಿಗೆ ಮಕ್ಕಳಾದಾಗ ಆನಂದಕ್ಕೆ ಪಾರವೇ ಇರುವುದಿಲ್ಲ. ಅಂತಹ ಆನಂದ ನಿಮ್ಮ ಆಗಮನದಿಂದಾಗಿದೆ ಎಂದು ದಶರಥರಾಜನು ವಿಶ್ವಾಮಿತ್ರರ ವ್ಯಕ್ತಿತ್ವವನ್ನು ತಿಳಿದು ಸ್ವಾಗತಿಸಿದ್ದಾನೆ. ಯಜ್ಞರಕ್ಷಣೆಯ ನಿಮಿತ್ತದಲ್ಲಿ ರಾಮ-ಲಕ್ಷ್ಮಣರನ್ನು ಕರೆದುಕೊಂಡು ಹೋದ ವಿಶ್ವಾಮಿತ್ರರು ಯಜ್ಞರಕ್ಷಣೆಯ ಜೊತೆಗೆ ಮಾರೀಚ-ಸುಬಾಹುಗಳೆಂಬ ಜಾಗತಿಕ ಭಯೋತ್ಪಾದಕ ಶಕ್ತಿಗಳನ್ನು ರಾಮನ ಮೂಲಕ ನಿಗ್ರಹಿಸುವುದರಲ್ಲಿ ಯಶಸ್ವಿಯಾಗಿದ್ದಾರೆ. ಮುಂದೆ ಶೂರ್ಪನಖಿಗೆ ಶಿಕ್ಷೆ ಕೊಡಿಸುವ ಮೂಲಕ ಸಮಗ್ರ ರಾವಣನ ಭಯೋತ್ಪಾದನೆಯ ಮೂಲ ಗುಟ್ಟನ್ನೇ ಬಿಡಿಸಿದ ಕೀರ್ತಿ ವಿಶ್ವಾಮಿತ್ರರಿಗೆ ಸಲ್ಲುತ್ತದೆ. ತಾಟಕಿಯ ಸಂಹಾರ, ಖರದೂಷಣರ ನಿಗ್ರಹ ಮುಂತಾದ ಅಂದಿನ ಜಗತ್ತೇ ಬೆರಗಾಗುವ ಲೋಕೋತ್ತರ ಕಾರ್ಯಗಳನ್ನು ರಾಮನ ಮಾಡುವ ಮೂಲಕ ಕೀರ್ತಿಯನ್ನು ದಿಗಂತ ಬೆಳಗಿಸಿದವರು ಎಂಬ ಕೀರ್ತಿಗೆ ಭಾಜನರು ವಿಶ್ವಾಮಿತ್ರರು.

ವಿಶ್ವಾಮಿತ್ರರು ಜನಕಮಹಾರಾಜನ ಅಂತಃಪುರದಲ್ಲಿ ಸೀತಾಸ್ವಯಂವರಕ್ಕೆ ಫಲವಾಗಿ ಇಟ್ಟ ಶಿವಧನುಸ್ಸನ್ನು ರಾಮನನ್ನು ಕರೆದೊಯ್ಯುವ ಮೂಲಕ ಭಗ್ನಗೊಳಿಸಿ ಲೋಕೋತ್ತರವಾದ ರಾಮನ ಮಹತ್ವವನ್ನು ಜಗತ್ತಿಗೆ ಪ್ರಚುರಪಡಿಸಿದ ಕೀರ್ತಿಗೆ ಭಾಜನರಾಗಿರುತ್ತಾರೆ. ಈ ಮುಖದಿಂದ ಜ್ಞಾನಿಗಳಾದ ವಿಶ್ವಾಮಿತ್ರರ ಕೊಡುಗೆ

ಅಸ್ಪಾದೃಶವಾದುದು, ಅಪಾರವಾದುದು. ಇಷ್ಟುಮಾತ್ರವಲ್ಲದೆ ಇಂದಿಗೂ ಪ್ರತಿಯೊಬ್ಬರ ಬ್ರಾಹ್ಮಣ್ಯರಕ್ಷಣೆಗೆ ಕಾರಣೀಭೂತವಾದ ಗಾಯತ್ರೀಮಂತ್ರದ ದ್ರಷ್ಟಾರ ಋಷಿಗಳೇ ಇವರೇ ಆಗಿದ್ದಾರೆ.

'ಕುರ್ಯಾದನ್ಯಂ ನವಾ ಕುರ್ಯಾತ್ ಮೈತ್ರೋ ಬ್ರಾಹ್ಮಣ ಉಚ್ಯತೇ' ಅನ್ನುವ ಮಾತಿಗೆ ಎಲ್ಲರೂ ಇಂದು ತಲೆಬಾಗಿದ್ದಾರೆ. ಇದು ಒಂದು ವಿಶ್ವಾಮಿತ್ರರ ಗುಣಮುಖವಾದ ಚಿಂತನೆ.

ವಿಶ್ವಾಮಿತ್ರರಲ್ಲಿ ಮತ್ತೊಂದು ಮುಖವೂ ಇದೆ. ವಸಿಷ್ಠರ ಕಾಮಧೇನುವಿನ ಆತಿಥ್ಯವನ್ನು ಕ್ಷತ್ರಿಯರಾಗಿ ಸ್ವೀಕರಿಸಿದ ವಿಶ್ವಾಮಿತ್ರರು ಲೋಭದಿಂದ ಕಾಮಧೇನುವಿನ ಅಪಹಾರದ ದುರ್ಯೋಚನೆಯನ್ನು ಮಾಡುತ್ತಾರೆ. ವಸಿಷ್ಠರ ಶಾಂತಿ, ಕ್ಷಮೆ, ಔದಾರ್ಯಗಳಿಗೆ ನಿರುತ್ತರರಾಗಿ ಕಾಮಧೇನುವಿನಿಂದ ಸೃಷ್ಟರಾದ ಸೈನಿಕರಿಂದ ಹತರಾದ ತಮಗೆ ವಸಿಷ್ಠರಂತೆ ಬ್ರಹ್ಮರ್ಷಿಯಾಗಬೇಕೆಂಬ ಛಲಹುಟ್ಟುತ್ತದೆ. ಈ ಛಲದ ಹಿನ್ನೆಲೆಯಲ್ಲಿ ವಿಶ್ವಾಮಿತ್ರರು ಕಠಿಣವಾದ ತಪಸ್ಸುಗಳನ್ನು ಆಚರಿಸಿದ್ದಾರೆ. ಆ ತಪಸ್ಸುಗಳನ್ನು ಆಚರಿಸುವಾಗಲೇ ಆದ ಅವಗಡಗಳು ಕೂಡ ಲೋಕಕ್ಕೆ ಉಪಕಾರವನ್ನೇ ಮಾಡಿವೆ.

ತಪಸ್ವಿಯಾದ ವಿಶ್ವಾಮಿತ್ರರನ್ನು ಕೆಣಕಲು ದೇವಲೋಕದ ತುಂಬು ಸೌಂದರ್ಯವನ್ನು ಹೊತ್ತ ಪುತ್ಥಳಿಗೊಂಬೆಯೆಂದೇ ಕರೆಸಿಕೊಂಡ ಮೇನಕೆಯು ವಿಶ್ವಾಮಿತ್ರರ ಮುಂದೆ ಪ್ರತ್ಯಕ್ಷಳಾಗಿ ನಿಂತಾಗ ಅಂತರಂಗದ ಭಗವಂತನ ಸೌಂದರ್ಯಕ್ಕಿಂತ ಅತಿಶಯವೆಂದು ಮೇನಕೆಯ ಮೋಹಕವಾದ ಮೀನಾಕ್ಷಿಗಳಿಗೆ ವಶರಾಗಿ ಸುಂದರವಾದ ಶಿಶುವಿಗೆ ತಂದೆಯಾಗುತ್ತಾರೆ. ಆ ಶಿಶುವೇ ಶಕುಂತಲೆಯಾಗಿ ಕಣ್ವರ ಆಶ್ರಮದಲ್ಲಿ ಬೆಳೆದ ಈಕೆಯ ಸುತನೇ ದೌಷ್ಯಂತ, ಭರತ ಎಂದು ಭಾರತ ದೇಶದ ದಿಟ್ಟ ಕ್ಷತ್ರಿಯನಾಗಿ ಖ್ಯಾತನಾಗಿದ್ದಾನೆ. ಇದು ಒಂದು ವಿಶ್ವಾಮಿತ್ರರ ಅಸ್ಪಾದೃಶವಾದ ಕೊಡುಗೆ.

ತಮ್ಮ ತಪಸ್ಸು ಈ ಮೂಲಕ ನಿರ್ವೀರ್ಯವಾದುದನ್ನು ಕಂಡು ಪುನಃ ವಿಶ್ವಾಮಿತ್ರರು ಕಠಿಣವಾದ ಮನೋನಿಗ್ರಹದಿಂದ ಕಾಮವನ್ನು ಜಯಿಸಿ

ಅಂತರಂಗದ ಭಗವಂತನನ್ನು ಧ್ಯಾನಿಸಲು ಹೊರಟಾಗ ಎರಡನೆಯ ಅವಗಡಕ್ಕೆ ಸಿಲುಕುತ್ತಾರೆ ಮತ್ತು ವಸಿಷ್ಠರು, ಅವರ ಶಿಷ್ಯರಿಂದ ಇಷ್ಟಾರ್ಥವನ್ನು ಪಡೆಯಲಾಗದ ತ್ರಿಶಂಕು ವಿಶ್ವಾಮಿತ್ರರ ಬಳಿ ಬಂದಾಗ ವಸಿಷ್ಠರ ಮೇಲಿನ ಹಗೆತನದಿಂದ ಸಶರೀರವಾಗಿ ತ್ರಿಶಂಕುವನ್ನು ಸ್ವರ್ಗಕ್ಕೆ ಏರಿಸುವ ಪಣವನ್ನು ತೊಡುತ್ತಾರೆ. ಸಾಧ್ಯವಾಗದೆ ಇದ್ದಾಗ ಅವನಿಗೋಸ್ಕರ 'ಅನ್ಯಮಿಂದ್ರಂ ಕರಿಷ್ಯಾಮಿ' ಎಂದು ಸ್ವರ್ಗಲೋಕವನ್ನೇ ನಿರ್ಮಾಣ ಮಾಡಿ ತಮ್ಮ ತಪಸ್ಸನ್ನು ವ್ಯಯಮಾಡಿಕೊಂಡು ಅದ್ಭುತವಾದ ಶಕ್ತಿಯನ್ನು ಜಗತ್ತಿಗೆ ತೋರಿಸಿದ್ದಾರೆ.

ಪುನಃ ಕ್ರೋಧಕ್ಕೆ ವಶನಾದೆ ಎಂಬ ತಪ್ಪಿನ ಅರಿವಿನಿಂದ ತಪಸ್ಸಿಗೆ ಕುಳಿತ ಮುನಿಗಳು ಕಾಮ-ಕ್ರೋಧಾದಿಗಳಿಗೆ ವಶರಾಗದೆ ಬ್ರಹ್ಮನನ್ನೇ ಸಾಕ್ಷಾತ್ಕರಿಸಿಕೊಂಡ ಮಹಾನುಭಾವರಾದ ದೇವರ್ಷಿ ಎಂಬ ಪದವಿಯನ್ನು ಪಡೆದ ವಿಶ್ವಾಮಿತ್ರರು ವಸಿಷ್ಠರಿಂದ ಬ್ರಹ್ಮರ್ಷಿಯೆಂಬ ಪದವಿಯನ್ನು ಪಡೆದಿದ್ದಾರೆ. ಇಂತಹ ವಿಶ್ವಾಮಿತ್ರರ ಅನೇಕ ಜನ ಮಕ್ಕಳು ವೇದದ್ರಷ್ಟಾರರು. ಸ್ವತಃ ವಿಶ್ವಾಮಿತ್ರರೂ ಕೂಡ ವೇದದ್ರಷ್ಟಾರರಾಗಿದ್ದಾರೆ. ಹರಿಶ್ಚಂದ್ರನ ನಿಮಿತ್ತವಾದ ವರುಣಯಜ್ಞದಲ್ಲಿ ಶುನಃಶ್ಶೇಪನನ್ನು ತಮ್ಮ ಮಂತ್ರಶಕ್ತಿಯ ಉಪದೇಶದಿಂದ ಬಿಡುಗಡೆಗೊಳಿಸಿದ ಖ್ಯಾತಿಗೂ ವಿಶ್ವಾಮಿತ್ರರು ಭಾಜನರಾಗಿದ್ದಾರೆ. ಲೋಕೋತ್ತರವಾದ ಸಾಧನೆಗಳನ್ನು ಸಾಧಿಸಿ ಭಗವಂತನಿಂದ, ಬ್ರಹ್ಮದೇವರಿಂದ, ನಾರದ ವಸಿಷ್ಠಾದಿಗಳಿಂದ ಪ್ರಶಂಸೆಗೆ ಪಾತ್ರರಾದ ವಿಶ್ವಾಮಿತ್ರಮುನಿಗಳ ಬಗ್ಗೆ ಹೇಳಲು ಮಾತು ಸಾಕಾಗುವುದಿಲ್ಲ.

★ ★ ★ ★

## ಗೌತಮ

ಯೋಗಾಢ್ಯಃ ಸರ್ವಭೂತಾನಾಮನ್ನದಾನರತಃ ಸದಾ ।
ಅಹಲ್ಯಾಯಾಃ ಪತಿಃ ಶ್ರೀಮಾನ್ ಗೌತಮಃ ಸರ್ವಪಾವನಃ ॥

ದೀರ್ಘತಮಾ ಮತ್ತು ಪ್ರದ್ವೇಷೀ ಪುತ್ರರಾದ ಗೌತಮರು ಸಪ್ತರ್ಷಿಗಳಲ್ಲಿ ಅನ್ಯತಮರಾಗಿ ಪೂಜ್ಯರಾಗಿದ್ದಾರೆ. ಪಾರಿಯಾತ್ರ ಪರ್ವತದ ಬಳಿಯ ಒಂದು

ಎಲೆಮನೆಯಲ್ಲಿ ಗೌತಮ ಮುನಿ ಅರವತ್ತು ಸಾವಿರ ವರ್ಷ ದೀರ್ಘತಪಂಗೈದ. ಯಮಧರ್ಮರಾಜನು ಇವರ ಭೇಟಿಗೆಂದು ಪಾರಿಯಾತ್ರ ಪರ್ವತಕ್ಕೆ ಬಂದಾಗ ಗೌತಮರು ಅವನಿಗೆ "ಪಿತೃಗಳ ಋಣವನ್ನು ತೀರಿಸುವ ಬಗೆಯೆಂತು" ಎಂದು ಪ್ರಶ್ನಿಸಿದರು. ಅದಕ್ಕೆ ಯಮದೇವನು "ಸತ್ಯ, ಅಹಿಂಸೆ, ಧರ್ಮ, ತಪಸ್ಸು ಮತ್ತು ಶುಚಿರ್ಭೂತತನದಿಂದ ತಾಯಿ ತಂದೆಗಳ ಸೇವೆ ಮಾಡಬೇಕೆಂದು" ಹೇಳಿದನು ಎಂದು ಮಹಾಭಾರತದಲ್ಲಿ ಯಮ ಗೌತಮರ ಸಂವಾದದ ವರ್ಣನೆ ಇದೆ. ಗೌತಮನ ತಂದೆ ರಹೂಗಣನೆಂದೂ ಅವನ ಮಗ ವಾಮದೇವನೆಂದೂ ಬ್ರಾಹ್ಮಣಗ್ರಂಥಗಳಲ್ಲಿ ಉಲ್ಲೇಖಿಸಿದ್ದಾರೆ. ಗೌತಮರು ತಮ್ಮ ಮಗ ವಾಮದೇವನಿಗೆ "ಕೃಣುಷ್ವಪಾಜ್ಯ" ಎಂಬ ರಕ್ಷೋಘ್ನಸೂಕ್ತವನ್ನು ಹೇಳಿಕೊಟ್ಟರು.

ಹಿಂದೊಮ್ಮೆ ಭರತ ಖಂಡದಲ್ಲಿ ಭೀಕರವಾದ ಕ್ಷಾಮ ತಲೆದೋರಿತ್ತು, ತಿನ್ನಲಿಕ್ಕೆ ಅನ್ನವಿಲ್ಲದೆ ಕುಡಿಯಲು ನೀರಿಲ್ಲದೆ ಜನ ಲಕ್ಷ ಲಕ್ಷ ಸಂಖ್ಯೆಯಲ್ಲಿ ಸಾವನ್ನಪ್ಪಿತು. ಇಂಥ ಸಂದರ್ಭದಲ್ಲಿ ಗೌತಮ ಮುನಿಯು ತನ್ನ ಗುಡಿಸಲದಲ್ಲಿ ಅನ್ನಛತ್ರ ತೆರೆದ. ಜಗತ್ತಿನಲ್ಲಿಯ ಋಷಿಮುನಿಗಳೆಲ್ಲರೂ ಗೌತಮನ ಪಾರಿಯಾತ್ರ ಪರ್ವತದಲ್ಲಿಯ ಪುಣ್ಯಾಶ್ರಮದಲ್ಲಿ ನೆರೆದರು. ಬಂದವರಿಗೆಲ್ಲ ಹನ್ನೆರಡು ವರ್ಷದ ಗೌತಮರು ಆದರದಿಂದ ಸ್ವಾಗತ ನೀಡಿ ಯಥೇಚ್ಛ ಭೋಜನಮಾಡಿಸಿದ. ಹನ್ನೆರಡು ವರ್ಷದ ಗೌತಮನ ಅನ್ನದಾನದ ಪ್ರಭಾವದಿಂದ ಬರಗಾಲ ಕಳೆದು, ಎಲ್ಲೆಡೆಗೆ ಸಾಕಷ್ಟು ಮಳೆಯಾಗಿ ಸಮೃದ್ಧ ಬೆಳೆ ಬಂದಿತು. ಋಷಿಗಳೆಲ್ಲರೂ ತಮ್ಮ ತಮ್ಮ ಸ್ಥಾನಗಳಿಗೆ ತೆರಳಲು ಉತ್ಸುಕರಾಗಿದ್ದರು. ಆದರೆ ಗೌತಮ ತನ್ನ ಮನೆಗೆ ಬಂದ ಯಾವ ಅತಿಥಿಯನ್ನೂ ಮನೆಗೆ ಬಿಡಲೊಪ್ಪಲಿಲ್ಲ. ಅವರೆಲ್ಲರಿಗೂ ತನ್ನಲ್ಲಿಯೇ ಊಟಮಾಡಿ ಸುಖದಿಂದ ಇರಲು ಬಲವಂತ ಮಾಡಿ ಎಲ್ಲ ಋಷಿ ಮುನಿಗಳನ್ನೂ ತನ್ನ ಆಶ್ರಮದಲ್ಲಿಯೇ ಇಟ್ಟುಕೊಂಡ. ಅಯಾಚಿತವೃತ್ತಿಯ ಆ ಋಷಿಗಳಿಗೆ ಇಷ್ಟುದಿನ ಗೌತಮನ ಅನ್ನವನ್ನು ಉಣ್ಣುತ್ತ ಇದ್ದದ್ದೇ ತಪ್ಪೆನಿಸಿತ್ತು. ಈಗಂತೂ ಎಲ್ಲೆಡೆಗೆ ಸುಕಾಲವಾದ ಬಳಿಕ ಸುಮ್ಮನೆ ಅದೇಕೆ ಗೌತಮ ಅನ್ನದ ಋಣದಲ್ಲಿ ಉಳಿಯಬೇಕು?" ಎಂದು ಚಡಪಡಿಸತೊಡಗಿದರು. ಆದರೆ ಪುಣ್ಯಲೋಭಿಯಾದ

ಗೌತಮ ಹೋಗಲು ಬೇಡವೆಂದಾಗ ಹನ್ನೆರಡುವರ್ಷ ಹೊಟ್ಟೆಗೆ ಹಾಕಿದ ಅವನ ಮಾತನ್ನು ಮೀರಿ ಹೋಗುವದೂ ಅವರಿಗೆ ಕಠಿಣವೆನಿಸಿತು. ಕೊನೆಗೆ ಅವರು ಒಂದು ಯುಕ್ತಿ ಮಾಡಿದರು.

ಇಷ್ಟೆಲ್ಲ ಋಷಿಮಂಡಲದ ಮುನಿ ಮನುಜರಿಗೆಲ್ಲ ನಿತ್ಯವೂ ಊಟ ಹಾಕಲಿಕ್ಕಾಗಿ ಗೌತಮಋಷಿಯು ತನ್ನ ಆಶ್ರಮದ ಸುತ್ತಲಿನ ಭೂಮಿಯನ್ನೆಲ್ಲ ಕಡಿದು ಕೃಷಿಯೋಗ್ಯ ಹೊಲವನ್ನಾಗಿ ಮಾಡಿ ಅದರಲ್ಲಿ ಹರಗಿ ಬತ್ತ ಜೋಳ ಕಡಲೆ ಮುಂತಾದ ಬೀಜ ಬಿತ್ತಿ ಬೆಳೆ ಮಾಡಿದ್ದನು. ಆದರಿಂದ ಅದನ್ನು ತಾನೇ ಸ್ವಂತ ಆ ಹೊಲವನ್ನು ಕಾಯುತ್ತಿದ್ದನು. ಒಂದು ದಿನ ಅದರಲ್ಲಿರುವ ಬೆಳೆಯನ್ನು ಒಂದು ಹಸು ಬಂದು ತಿನ್ನತೊಡಗಿತು. ಗೌತಮ ಅದನ್ನು ಎಷ್ಟು ಗದರಿಸಿದರೂ ಆ ಆವು ಹೋಗದೆ ಮುಂದೆ ಮುಖಮಾಡಿ ಆ ಹಸಿರು ಪೈರನ್ನು ಕಬಳಿಸಹತ್ತಿತು. ಆಗ ಗೌತಮನು ಆದಕ್ಕೆ ದೂರಿಂದ ಒಂದು ಕಲ್ಲನ್ನು ಎಸೆದನು. ಆ ಕಲ್ಲಿನ ಪೆಟ್ಟು ತಾಕಿದ ಕೂಡಲೇ ಆ ಆಕಳು ತಕ್ಷಣ ತೊಳಲಾಡಿ ಅಲ್ಲಿಯೇ ಪ್ರಾಣಬಿಟ್ಟಿತು.

ಆಗ ಋಷಿ ಮುನಿಗಳೆಲ್ಲರೂ ಅಲ್ಲಿ ನೆರೆದರು. ಗೌತಮನು ಮುಖ ತಗ್ಗಿಸಿಕೊಂಡು ಖಿನ್ನನಾಗಿ ನಿಂತುಕೊಂಡ. ''ಗೋಹತ್ಯೆ ಮಾಡಿದ ನಿನ್ನ ಅನ್ನವನ್ನು ನಾವಿನ್ನು ಸ್ವೀಕರಿಸುವದಿಲ್ಲ'' ಎಂದು ಹೇಳಿ ಅಲ್ಲಿಂದ ಹೊರಟುಹೋದರು.

ಆಗ ತನ್ನ ಕೈಯಿಂದ ಆಕಸ್ಮಿಕವಾಗಿ ನಡೆದ ಈ ಅಚಾತುರ್ಯದಿಂದ ಪಶ್ಚಾತ್ತಾಪ ಪಟ್ಟು ಗೌತಮನು ತನ್ನ ಗೋಹತ್ಯಾ ಪಾಪವನ್ನು ಕಳೆದುಕೊಳ್ಳಲಿಕ್ಕಾಗಿ ಪರಮೇಶ್ವರನನ್ನು ಕುರಿತು ತಪಸ್ಸು ಮಾಡಿದನು. ತುಷ್ಟನಾದ ಶಂಕರನು ಸತ್ತುಬಿದ್ದ ಆ ಆಕಳನ್ನು ಬದುಕಿಸಲಿಕ್ಕಾಗಿ ತನ್ನ ಜಡೆಯಿಂದ ಗಂಗೆಯನ್ನು ಬಿಟ್ಟನು. ಗಂಗೆಯ ನೀರು ಗೌತಮನ ಆಶ್ರಮದವರೆಗೆ ಹರಿದು ಬಂದು ಮಡಿದುಬಿದ್ದ ಹಸುವಿನ ಮೇಲೆ ಹಾಯ್ದು ಅದನ್ನು ಉದ್ಧರಿಸಿತು. ಶಿವನ ಜಡೆಯಿಂದ ಇಳಿದು ಬಂದ ಈ ನದಿಗೆ ವೃದ್ಧಗಂಗೆ ಅಥವಾ ಗೌತಮೀ ಎಂದು ಹೆಸರಾಯಿತು. 'ಗೋದಾ' - ಗೋವಿಗೆ ಜೀವದಾನಮಾಡಿದ- ವಾರಿ- ನೀರುಳ್ಳ ನದಿ ಗೋದಾವರಿ ಎಂದೂ ಅದನ್ನು ಕರೆಯುತ್ತಾರೆ. ಮುಂದೆ ಗಣಪತಿಯ ಬಾಯಿಂದ ''ಆ ಸತ್ತ ಆಕಳು ಇವನ

ಮನೆಯಿಂದ ಹೊರಹೋಗಲಿಕ್ಕಾಗಿ ಋಷಿಮುನಿಗಳು ನಿರ್ಮಿಸಿದ ಮಂತ್ರದ ಗೋವು ಎಂದೂ, ಗೌತಮನ ಕಲ್ಲು ತಾಕಿದ ನೆಪದಿಂದ ಅದು ಸತ್ತಂತೆ ಬಿದ್ದಿತೆಂದೂ, ಅದನ್ನು ಕಂಡು ಆ ಬ್ರಾಹ್ಮಣೋತ್ತಮರೆಲ್ಲ ತನ್ನ ಮೇಲೆ ಗೋಹತ್ಯಾ ಪಾಪವನ್ನು ಹೊರಿಸಿ ಹೋದರೆಂದೂ'' ತಿಳಿದುಬಂದಿತು. ಆಗ ಗೌತಮ ಋಷಿಗೆ ಕೋಪಬಂದು ಬ್ರಾಹ್ಮಣರ ಜ್ಞಾನವೇ ಲೋಪವಾಗಲಿ ಎಂದು ಶಾಪಕೊಟ್ಟನು.

ಆದರಿಂದ ಬಹುಕಾಲ ಪರ್ಯಂತ ಬ್ರಾಹ್ಮಣ ಜಾತಿಯು ಜ್ಞಾನವಿಲ್ಲದೆ ಶುಂಠವಾಗಿ ಅಜ್ಞಾನದ ಕತ್ತಲಲ್ಲಿ ಕುರುಬನಂತೆ ಕಾಲನೂಕುತ್ತಿತ್ತು. ಪಾಠಪ್ರವಚನ ನಡೆಯದಾದವು. ಅಧ್ಯಯನ ಅಧ್ಯಾಪನ ನಿಂತು ಹೋದವು. ಮಂತ್ರ ತಂತ್ರ ಲೋಪವಾದವು. ಹೀಗೆ ಜಗತ್ತೆಲ್ಲವೂ ಅಜ್ಞಾನದಿಂದ ಆವೃತವಾಗಿ ಪಶುವೃತ್ತಿಗೆ ಇಳಿಯತೊಡಗಿದಾಗ ದೇವತೆಗಳು ಶ್ರೀವಿಷ್ಣುವಿಗೆ ಮೊರೆಹೋದರು. ಅವರ ಪ್ರಾರ್ಥನೆಯನ್ನು ಮನ್ನಿಸಿ ಶ್ರೀಹರಿಯು ವೇದವ್ಯಾಸರೂಪದಿಂದ ಅವತಾರ ಮಾಡಿ ವೇದಗಳನ್ನು ವಿಂಗಡಿಸಿ, ಬ್ರಹ್ಮಸೂತ್ರಗಳನ್ನು ರಚಿಸಿ, ಹದಿನೆಂಟು ಪುರಾಣಗಳನ್ನು ನಿರ್ಮಿಸಿ, ಮತ್ತೆ ಭೂಮಂಡಲದಲ್ಲಿ ಜ್ಞಾನದ ಜ್ಯೋತಿಯನ್ನು ಬೆಳಗಿಸಿದನು.

ಗೌತಮಕುಲವು ಜ್ಞಾನೋಪಾಸನೆಗೆ ಪುರಾಣ ಪ್ರಪಂಚದಲ್ಲಿ ಪ್ರಸಿದ್ಧವಾಗಿದೆ. ಅರುಣ, ಅಗ್ನಿವೇಶ್ಯ, ಉದ್ದಾಲಕ, ಆರುಣಿ, ಕುಶ್ರಿ, ಸೌತಿ, ಮುಂತಾದ ಮಹರ್ಷಿಗಳು ಗೌತಮನ ವಂಶದಲ್ಲಿ ಬೆಳಗಿದ ವಿದ್ವದ್ಯೋಗಿಗಳಾಗಿದ್ದರು. ಶಾಂಡಿಲ್ಯ, ಅನಭಿಮ್ಲಾತ, ಭಾರದ್ವಾಜ, ಮೌಂಟಿ, ಸೈತವ ಮುಂತಾದ ಮೇಧಾವಿ ಮುನಿವರ್ಯರು ಗೌತಮನ ಶಿಷ್ಯರಾಗಿ ಅವನು ಹಚ್ಚಿದ ಜ್ಞಾನ ನಂದಾದೀಪವನ್ನು ಎಲ್ಲೆಡೆಗೆ ಬೆಳಗಿಸಿ ಬೆಳಕು ಬೀರಿದರು. ಒಮ್ಮೆ ಗೌತಮರು ತೀರ್ಥಯಾತ್ರೆಗೆ ಹೋದಾಗ ಕಾಡಿನಲ್ಲಿ ಭಯಂಕರ ನೀರಡಿಕೆಯಾಗಿ ಅತ್ತಿತ್ತ ಹುಡುಕಿ ಬಂದು ಹಾಳು ಬಾವಿಯಲ್ಲಿ ಹಣಕಿ ಹಾಕಿದರು. ಅದರಲ್ಲಿ ಪಾತಾಳದಲ್ಲಿ ಹನಿ ನೀರು ಮಿಂಚುತ್ತಿತ್ತು. ಗೌತಮನ ಗಂಟಲು ಸೇದಹತ್ತಿತ್ತು. ಆಗ ಅವರು ಮರುತ್ ದೇವತೆಯನ್ನು ಸ್ತೋತ್ರ ಮಾಡಿದರು. ಕೂಡಲೇ ಬಾವಿಯ ಆ ನೀರನ್ನು ಕುಡಿದು ತೃಷೆಯನ್ನು ಹಿಂಗಿಸಿಕೊಂಡರು.

ಬ್ರಹ್ಮದೇವರು ತನ್ನ ಮಾನಸ ಕನ್ನೆಯಾದ ಅಹಲ್ಯೆಯನ್ನು ಮದುವೆಯಾಗುವದಕ್ಕೆ ಮೊದಲು ಗೌತಮಋಷಿಯ ಆಶ್ರಮದಲ್ಲಿ ತಂದಿಟ್ಟಿದ್ದನು. ಸಂಯಮಿಯಾದ ಗೌತಮ ಆ ಕನ್ನೆಯನ್ನು ಸ್ವಯಂವರ ಮಾಡಲಿಕ್ಕೆಂದು ಹೇಳಿಕಳಿಸಿದಾಗ ಸತ್ಯಲೋಕಕ್ಕೆ ಕರೆದುಕೊಂಡು ಹೋದರು. ಅಹಲ್ಯೆಯ ಬಾಯಿಂದ ಗೌತಮರ ಶೀಲ ಸಂಯಮಗಳನ್ನು ತಿಳಿದು ಬ್ರಹ್ಮದೇವರು ಗೌತಮನ ಮೇಲೆ ಪ್ರಸನ್ನರಾದರು. ಅನಂತರ ಪ್ರಾಯಕ್ಕೆ ಬಂದಾಗ ಅಹಲ್ಯೆಯ ಕಾಯದಲ್ಲಿ ಚೆಲುವಿನ ಮೊಗ್ಗೆ ಬಿಟ್ಟು ಸೊಬಗಿನ ಸುಗ್ಗಿ ಸೂರೆಯಾದಾಗ ಇಂದ್ರಚಂದ್ರಾದಿ ದೇವತೆಗಳು ಬ್ರಹ್ಮನ ಬಳಿ ಬಂದು ಅವಳನ್ನು ತಮಗೆ ಕೊಡಬೇಕೆಂದು ಕೇಳತೊಡಗಿದರು. ಆಗ ಪಿತಾಮಹನು ಅಹಲ್ಯೆಯ ಸ್ವಯಂವರವೊಂದನ್ನು ಏರ್ಪಡಿಸಿ ''ಪೃಥ್ವೀ ಪ್ರದಕ್ಷಿಣೆ ಮಾಡಿ ಮೊದಲು ಬಂದವರಿಗೆ ಅಹಲ್ಯೆಯನ್ನು ಕೊಡುತ್ತೇನೆ'' ಎಂದು ಪಣವನ್ನು ಘೋಷಿಸಿದರು. ಆಗ ಇಂದ್ರ ವರುಣ ಮುಂತಾದ ದೇವತೆಗಳು ತಮ್ಮ ತಮ್ಮ ವಾಹನಗಳನ್ನು ಓಡಿಸುತ್ತ ಭೂಪ್ರದಕ್ಷಿಣೆಗೆ ತೆರಳಿದರು.

ಆಗ ಭೂಲೋಕದ ಗೋದಾತೀರದ ಬ್ರಾಹ್ಮಣನಾದ ಗೌತಮನು ಚತುರ್ಮುಖನ ಬಳಿಗೆ ಬಂದು, ''ದೇವ ದೇವ, ವೇದಗಳಲ್ಲಿ 'ಕಪಿಲೆ ಹಸು ಈಯಲಾದಾಗ ಅದಕ್ಕೆ ಪ್ರದಕ್ಷಿಣೆ ಹಾಕಿದರೆ ಭೂಪ್ರದಕ್ಷಿಣೆ ಮಾಡಿದಂತೆ' ಎಂದು ಹೇಳಲಾಗಿದೆ. ನಾನೀಗ ನನ್ನ ಆಶ್ರಮದ ತುಂಬು ಗರ್ಭಿಣಿಯಾದ ಕಪಿಲೆಯ ಕರು ಅರ್ಧ ಹೊರಬಂದಾಗ ಮೂರು ಪ್ರದಕ್ಷಿಣೆ ಮಾಡಿ ನಮಸ್ಕಾರ ಹಾಕಿ ಬಂದಿದ್ದೇನೆ. ನಾನೀಗ ವೇದ ವಚನದಂತೆ ಭೂಪ್ರದಕ್ಷಿಣೆ ಮಾಡಿ ಬಂದಂತಾಯಿತು. ನನಗೆ ನಿಮ್ಮ ಪಣದಂತೆ ಅಹಲ್ಯೆಯನ್ನು ಕೊಡಬೇಕು'' ಎಂದು ಕೇಳಿದ. ಅನುದಿನವೂ ತಮ್ಮ ನಾಲ್ಮೊಗದಿಂದ ವೇದಪಾರಾಯಣವನ್ನು ನಿರಂತರ ಮಾಡುತ್ತಲೇ ಇದ್ದ ಆ ಹಂಸವಾಹನನು ಗೌತಮನ ಮಾತನ್ನು ಮನ್ನಿಸಿ ಅಹಲ್ಯೆಯನ್ನು ಅವನಿಗೆ ಮದುವೆಮಾಡಿ ಕೊಟ್ಟ. ಸತ್ಯಲೋಕದ ಸುಂದರಿಯಾದ ಅಹಲ್ಯೆ ಭೂಲೋಕದ ಸೊಸೆಯಾಗಿ ಗೋದಾವರೀ ತಟದ ಮುರುಕ ಗುಡಿಸಲಿನ ಗೃಹಿಣಿಯಾಗಿ ಬಂದು ನಿಂತಳು.

ಇಂದ್ರನಿಗೆ ಅವಳ ಮೇಲಿನ ಮೋಹ ಹೋಗಿರಲಿಲ್ಲ. ಒಂದುದಿನ ಅವನು ಸರಿರಾತ್ರಿಯಲ್ಲಿ ಗೌತಮರ ಆಶ್ರಮದ ಬಳಿ ಬಂದು ಕೋಳಿಯಾಗಿ ಕೂಗಿದ. ಆಗ ಗೌತಮರು ಬೆಳಗಾಗ ಬಂದಿತೆಂದು ಎದ್ದು ಗಿಂಡಿ ಪಂಚೆ ಹಿಡಿದುಕೊಂಡು ನದಿಗೆ ಸ್ನಾನಕ್ಕೆನಡೆದರು.

ಇತ್ತ ಇಂದ್ರನು ಗೌತಮರ ವೇಷ ತೊಟ್ಟು ಗುಡಿಸಲಿನೊಳಗೆ ಬಂದ. ಅವನು ಗೌತಮನೆಂದೇ ಬಗೆದು ಅಹಲ್ಯೆ ಅವನ ಜೊತೆಗೆ ಸರಸಕ್ಕಿಳಿದಳು. ಆದರೆ ಅವನ ಕೇಲೀವಿಲಾಸಕ್ರಮದಿಂದ ಅವಳಿಗೆ ''ಇವನು ಗೌತಮನಲ್ಲ ಇಂದ್ರ'' ಎಂದು ತಿಳಿಯಿತು. ದೇವರಾಜನ ಮೈಗಂಧ ಮಾದಕವಾಗಿತ್ತು ಮೋದಕವಾಗಿತ್ತು. ಪ್ರಾಯದ ಬಿಗುವು ಮೋಹಕವಾಗಿತ್ತು. ದೇವಸಾರ್ವಭೌಮನ ಮಧುರ ಮೋಡಿಗೆ ಮುನಿ ಪತ್ನಿಯು ಮೈಮರೆತಳು.

ಇತ್ತ ನದಿಗೆ ಸ್ನಾನಕ್ಕೆ ಬಂದ ಗೌತಮ ಕತ್ತೆತ್ತಿ ಮುಗಿಲ ಕಡೆನೋಡಿದಾಗ ಇನ್ನೂ ಸರಿರಾತ್ರಿಯೆಂದು ಗೊತ್ತಾಯಿತು. ಅವನ ಮಂಕುತನಕ್ಕೆ ಬಾನಿನಂಗಳದ ಚಿಕ್ಕೆಗಳು ನಕ್ಕಂತಾಯಿತು. ಮನೆಯಲ್ಲಿ ಏನೋ ಪ್ರಮಾದ ನಡೆದಿದೆ ಎಂದು ಅವನಿಗೆ ಸಂದೇಹವಾಯಿತು. ಉಟ್ಟ ಒದ್ದೆ ಬಟ್ಟೆಯಲ್ಲಿಯೇ ಅವನು ಆಶ್ರಮಕ್ಕೆ ಓಡಿದ. ಆಶ್ರಮದಲ್ಲಿ ಅಹಲ್ಯೆ ಮಲಗಿದ ಕೋಣೆ ಒಳಗಿನಿಂದ ಚಿಲಕ ಹಾಕಿದ್ದಿತ್ತು. ಮುನಿಬಾಗಿಲು ಒಡೆದ. ಅಹಲ್ಯೆಗೆ ಎಚ್ಚರ ಬಂದಿತು.

ಆದರೆ ಕಾರ್ಯ ಮಿಂಚಿ ಹೋಗಿತ್ತು. ಗಡಿಗೆ ಮೈಲಿಗೆಯಾಗಿತ್ತು. ಮುತ್ತು ಒಡೆದು ಹೋಗಿತ್ತು. ಇಂದ್ರ ಭಯದಿಂದ ಕಂಪಿಸ ಹತ್ತಿದ. ಬಚ್ಚಲ ಮೋರೆಯೊಳಗಿಂದ ಬೆಕ್ಕಿನ ರೂಪದಿಂದ ಪಾರಾಗಬೇಕೆಂದು ಹೊರಬಿದ್ದ. ಮುನಿಯ ಹದ್ದಿನ ಕಣ್ಣು ಅದನ್ನು ಗುರುತಿಸಿದವು. ಕಮಂಡಲದಲ್ಲಿಯ ನೀರನ್ನು ಪ್ರೋಕ್ಷಿಸಿದಾಗ ಶಚೀಪತಿಯ ನಿಜರೂಪ ಪ್ರಕಟವಾಯಿತು. 'ನಿರ್ವೀರ್ಯನಾಗು' ಎಂದು ಶಾಪವಿತ್ತ ಗೌತಮ. ಒಳಗೆ ಬಂದ ಅಹಲ್ಯೆ 'ಕ್ಷಮಿಸು' ಎಂದು ಪಾದಕ್ಕೆ ಬಿದ್ದಳು. ಮುನಿಯ ಎದೆ ಕಲ್ಲಾಗಿತ್ತು. ''ನೀನೂ ಕಲ್ಲಾಗಿ ಬೀಳು. ರಾಮ ಬಂದ ಬಳಿಕ ನಿನ್ನ ಉದ್ಧಾರ. ಮನೆತನದ ಪಾಪದ ಪರಿಹಾರ'' ಎಂದು ಹೇಳಿ ಹಿಮಾಲಯಕ್ಕೆ ತಪಸ್ಸಿಗೆ ನಡೆದ.

ಇತ್ತ ಆಶ್ರಮದಲ್ಲಿ ಅಹಲ್ಯೆಯ ಶಿಲಾ ತಪಸ್ಸನ್ನಾಚರಿಸುತ್ತ ಕಲ್ಲಾಗಿ ಬಿದ್ದುಕೊಂಡಳು. ಮುಂದೆ ತ್ರೇತಾಯುಗದಲ್ಲಿ ವಿಶ್ವಾಮಿತ್ರರೊಂದಿಗೆ ಮಿಥಿಲಾಪುರಿಗೆ ನಡೆದಾಗ ದಾರಿಯಲ್ಲಿ ಗೌತಮರ ಆಶ್ರಮವನ್ನು ಪ್ರವೇಶಿಸಿದರು. ಶೂನ್ಯವಾದ ಆ ಆಶ್ರಮದಲ್ಲಿ ಯಾರೋ ಬಿಕ್ಕಿ ಬಿಕ್ಕಿ ಅಳುವಂತೆ ತೋರಿತು. ಇದೇನೆಂದು ಕೌತುಕದಿಂದ ರಾಮನು ಅಲ್ಲಿಯ ಒಂದು ಬಂಡೆಗಲ್ಲ ಮೇಲೆ ನಿಂತಾಗ ಆ ಕಲ್ಲು ಶ್ರೀರಾಮನ ಪಾದಸ್ಪರ್ಶದಿಂದ ಅಹಲ್ಯೆಯಾಗಿ ಎದ್ದು ಕೈಮುಗಿಯಿತು. ಅಷ್ಟರಲ್ಲಿ ಇದೇ ಸಂಧಿಯನ್ನು ಕಾಯುತ್ತಲಿದ್ದ ಗೌತಮರೂ ಅಲ್ಲಿಗೆ ಧಾವಿಸಿ ಬಂದರು. ಶ್ರೀರಾಮನ ಆಜ್ಞೆಯಂತೆ ಅವನ ಪಾದಪರಾಗದ ಸ್ಪರ್ಶಮಾತ್ರದಿಂದ ಪೂಜಪ್ರೀತಳಾದ ಪತ್ನಿ ಅಹಲ್ಯೆಯನ್ನು ಆನಂದದಿಂದ ಸ್ವೀಕರಿಸಿದರು.

ಗೌತಮ ಅಹಲ್ಯೆಯರಿಗೆ ಶತಾನಂದ ಎಂಬ ಬ್ರಹ್ಮಜ್ಞಾನಿಯಾದ ಮಗನಿದ್ದ. ಏಕತ, ದ್ವಿತ, ತ್ರಿತ ಈ ಮೂವರೂ ಗೌತಮನ ಮಕ್ಕಳೆಂದು ಮಹಾಭಾರತ ಶಾಂತಿಪರ್ವದಲ್ಲಿ ಹೇಳಲಾಗಿದೆ. ವೈವಸ್ವತ ಮನ್ವಂತರದಲ್ಲಿ ಇಪ್ಪತ್ತನೇ ದ್ವಾಪರದಲ್ಲಿ ಗೌತಮನೇ ವೇದವ್ಯಾಸರ ಪರ್ಯಾಯ ಪೀಠವನ್ನು ಏರಿದ್ದ. ಇವನೊಬ್ಬ ಅಂಗಿರಕಾಲದ ಋಷಿ ಪ್ರವರ ಎಂದು ಇವನ ಉಲ್ಲೇಖ ಬರುತ್ತದೆ. ಲಾಟ್ಯಾಯನ ಶ್ರೌತಸೂತ್ರದಲ್ಲಿ ಇವನೊಬ್ಬ ಮಹಾಚಾರ್ಯನೆಂದು ಕರೆದಿದ್ದಾರೆ. ಋಗ್ವೇದದ ಪ್ರಥಮ ಮಂಡಳದ ೭೪ ರಿಂದ ೯೬ ರವರೆಗಿನ ಸೂಕ್ತಗಳಿಗೆ ಗೌತಮರೇ ದ್ರಷ್ಟಾರರಾದ ಮಹರ್ಷಿಗಳಾಗಿದ್ದಾರೆ.

ಭಾರತೀಯ ನ್ಯಾಯಶಾಸ್ತ್ರದ ಆದ್ಯಪ್ರವರ್ತಕನೆಂದೂ ಗೌತಮನ ಹೆಸರನ್ನು ಹೇಳುತ್ತಾರೆ. ಸಾಮವೇದದ ಗೋಭಿಲಗೃಹಸೂತ್ರದಲ್ಲಿ ಗೌತಮನ ಉಲ್ಲೇಖವು ಮೇಲಿಂದ ಮೇಲೆ ಬರುತ್ತದೆ. ಗೌತಮ ಸ್ಮೃತಿ ಎಂಬ ಗದ್ಯಗ್ರಂಥವು ಕಲಕತ್ತೆಯ ಜೀವಾನಂದ ವಿದ್ಯಾಸಾಗರ ಮತ್ತು ಮುಂಬೈ ವೆಂಕಟೇಶ್ವರ ಮುದ್ರಣಾಲಯಗಳಲ್ಲಿ ಮುದ್ರಿತವಾಗಿದೆ. ಬೋಧಾಯನ ಧರ್ಮಸೂತ್ರದಲ್ಲಿ ಗೌತಮ ಧರ್ಮಶಾಸ್ತ್ರದ ಮೊಟ್ಟ ಮೊದಲಿನ ಉಲ್ಲೇಖವು ಕಂಡುಬರುತ್ತದೆ.

ವಸಿಷ್ಠ ಧರ್ಮಶಾಸ್ತ್ರ, ಅಪರಾರ್ಕ ತಂತ್ರ ಮತ್ತು ಶಾಂಕರ ಭಾಷ್ಯ ಮೊದಲಾದ ಪ್ರಾಚೀನ ಅರ್ವಾಚೀನ ಗ್ರಂಥಗಳಲ್ಲಿ ವಿಪುಲವಾಗಿ ಗೌತಮ ಧರ್ಮ ಸೂತ್ರದಿಂದ ಅನೇಕ ವಚನಗಳನ್ನು ಎತ್ತಿ ಉದಾಹರಿಸುತ್ತಿರುವದನ್ನು ಕಾಣುತ್ತೇವೆ.

ಗೌತಮ ಧರ್ಮಸೂತ್ರದ ಮೇಲೆ ಹರದತ್ತನು ಮಿತಾಕ್ಷರಾ ಎಂಬ ಟೀಕೆಯನ್ನು ಬರೆದಿದ್ದಾನೆ. ಮಸ್ಕರೀ ಮತ್ತು ಅಸಹಾಯರು ಅದರ ಮೇಲೆ ಭಾಷ್ಯ ಬರೆದಿದ್ದಾರೆ. ಈ ಗೌತಮ ಧರ್ಮಸೂತ್ರದಲ್ಲಿ ರಾಜಧರ್ಮದ ಬಗ್ಗೆ ವಿಸ್ತೃತವಾದ ವಿವೇಚನೆ ಇದೆ ಮತ್ತು ಹೆಣ್ಣುಮಕ್ಕಳ ಕರ್ತವ್ಯ ಮತ್ತು ಅವರ ಬಗೆಗೆ ಸಮಾಜದ ಹೊಣೆಗಾರಿಕೆಯ ಬಗೆಗೂ ಸೂಕ್ಷ್ಮವಾದ ವಿಚಾರವನ್ನು ಮಾಡಲಾಗಿದೆ. ಅದರಂತೆ ಬ್ರಾಹ್ಮಣ ಶೂದ್ರಾದಿ ಜಾತಿಯವರ ಸಹ ಜೀವನದ ಆಚಾರ ವಿಚಾರಗಳನ್ನು ಶಾಸ್ತ್ರಶುದ್ಧರೀತಿಯಿಂದ ನಿರೂಪಿಸಲಾಗಿದೆ. ಚಿಕ್ಕಪುಟ್ಟ ಪಾಪ ಹಾಗೂ ಮಹಾಪಾತಕಗಳ ಪ್ರಾಯಶ್ಚಿತ್ತದ ಬಗೆಗೂ ಅದರಲ್ಲಿ ವಿವೇಚಿಸಲಾಗಿದೆ.

ಗೌತಮ ಧರ್ಮಸೂತ್ರದಲ್ಲಿಯೂ ಅತ್ಯಂತ ಉಪಯುಕ್ತವಾದ ಅನೇಕ ವಿಷಯಗಳ ವಿವೇಚನೆಯು ಕಂಡುಬರುತ್ತದೆ. ಮಿತಾಕ್ಷರಾ, ಸ್ಮೃತಿಚಂದ್ರಿಕೆಗಳಲ್ಲಿ ಶ್ಲೋಕ ಗೌತಮ ಎಂಬ ಗ್ರಂಥವನ್ನು ನಿರ್ದೇಶಿಸಲಾಗಿದೆ. ಅಪಾರಾರ್ಕದ ದತ್ತಕ ಮೀಮಾಂಸೆಯ ಸಂದರ್ಭದಲ್ಲಿ ವೃದ್ಧ ಗೌತಮ ಎಂಬ ಎರಡು ಧರ್ಮಶಾಸ್ತ್ರ ಗ್ರಂಥಗಳನ್ನು ಉದಾಹರಿಸಿದ್ದಾರೆ. ಜೀವಾನಂದ ಪ್ರೆಸ್ಸಿನಲ್ಲಿ ಗೌತಮ ಸ್ಮೃತಿ ಎಂಬ ಪದ್ಯ ಗ್ರಂಥವೂ ಮುದ್ರಿತವಾಗಿದೆ. ಅದರಲ್ಲಿ ೧೭೦೦ ಶ್ಲೋಕಗಳು ಇರುತ್ತವೆ. ಇವಲ್ಲದೇ ಆನ್ಹಿಕ ಸೂತ್ರ, ಪಿತೃಮೇಧಸೂತ್ರ, ದಾನಚಂದ್ರಿಕಾ ನ್ಯಾಯ ಸೂತ್ರ, ಗೌತಮೀ ಶಿಕ್ಷಾ, ಮುಂತಾದ ಅನೇಕ ಗ್ರಂಥಗಳು ಗೌತಮರ ಹೆಸರಿನಿಂದ ಬೆಳಕು ಕಂಡಿವೆ. ಇದರಿಂದ ಗೌತಮ ಮುನಿಗಳ ಜ್ಞಾನವು ಹಿಮಾಲಯದಂತೆ ಉನ್ನತವು ಸಮುದ್ರದಂತೆ ಅಪಾರವೂ ಆಗಿದ್ದಿತೆಂದು ತಿಳಿದುಬರುತ್ತದೆ.

★ ★ ★ ★

# ಜಮದಗ್ನಿ

ಅಕ್ಷಸೂತ್ರಧರಂ ಶಾಂತಂ ಜಮದಗ್ನಿಮೃಷೀಶ್ವರಮ್ ।
ದರ್ಭಪಾಣಿಂ ಜಟಾಯುಕ್ತಂ ಮಹಾತೇಜಸ್ವಿನಂ ಭಜೇ ॥

ಗಾಧಿ ಎಂಬ ಪರಮಧಾರ್ಮಿಕನಾದ ರಾಜನಿದ್ದನು. ಅವನಿಗೊಬ್ಬ ಸತ್ಯವತಿ ಎಂಬ ಸುಂದರಳಾದ ಮಗಳಿದ್ದಳು. ಋಚೀಕನೆಂಬ ಮುನಿಯು ಈಕೆಯನ್ನು ತನಗೆ ಕನ್ಯಾದಾನವನ್ನಾಗಿ ಕೊಡು ಎಂದು ಕೇಳಿಕೊಂಡ.

ಪ್ರತಿಯಾಗಿ ಗಾಧಿಯು ಕನ್ಯಾಶುಲ್ಕವನ್ನು ಬಯಸಿದ. ಶುಲ್ಕದ ನಿಯಮ ಹೀಗಿತ್ತು. ಒಂದು ಕಿವಿ ಮಾತ್ರ ಕಪ್ಪಾಗಿರುವ ಉಳಿದೆಲ್ಲ ಭಾಗ ಬಿಳಿಯಾಗಿರುವ ಸಾವಿರ ಕುದುರೆಗಳನ್ನು ಕನ್ಯಾಶುಲ್ಕವನ್ನಾಗಿ ನೀಡಿದರೆ ತನ್ನ ಮಗಳನ್ನು ದಾನ ಮಾಡುವುದಾಗಿ ಹೇಳಿದ. ಆ ಷರತ್ತಿಗೆ ಅನುಗುಣವಾಗಿ ಋಚೀಕನು ವರುಣನ ಬಳಿ ಬಂದ. ಅವನ ಬಳಿ ಇಂಥಹ ಸಾವಿರಾರು ಕುದುರೆಗಳಿದ್ದವು. ಅವನಿಂದ ಸಾವಿರ ಕುದುರೆಗಳನ್ನು ಪಡೆದು ಗಾಧಿಗೆ ನೀಡಿದ. ಗಾಧಿಯು ತನ್ನ ಮಗಳನ್ನು ನೀಡಿದ.

ಗಾಧಿಗೆ ತನ್ನ ಅಳಿಯನಾದ ಋಚೀಕನು ಅಸಾಮಾನ್ಯ ತಪಸ್ವಿ ಎಂದು ತಿಳಿಯಿತು. ಗಾಧಿಗೆ ಗಂಡು ಮಕ್ಕಳಿರಲಿಲ್ಲ. ಅದಕ್ಕಾಗಿ ಋಚೀಕನಲ್ಲಿ ಪ್ರಾರ್ಥಿಸಿದ. ಋಚೀಕನು ತನ್ನ ಪತ್ನಿ ಮತ್ತು ತನ್ನ ಅತ್ತೆ ಗಾಧಿಯ ಪತ್ನಿಗೆ ಸಂತಾನವಾಗಲೆಂದು ಎರಡು ಚರುಗಳನ್ನು ಅಭಿಮಂತ್ರಿಸಿದ. ಪ್ರತ್ಯೇಕವಾಗಿ ವಿಭಿನ್ನ ಮಂತ್ರಗಳಿಂದ ಪೂತವಾದ ಚರುವನ್ನು ಪತ್ನಿ- ಅತ್ತೆಯರಿಗೆ ಭಕ್ಷಿಸಿರಿ ಎಂದ. ಇಬ್ಬರೂ ಚರುವನ್ನು ಸ್ವೀಕರಿಸಿದರು. ಋಚೀಕನ ಪತ್ನಿಯ ತಾಯಿಯು ಹೀಗೆ ಯೋಚಿಸಿದಳು. ಗಂಡನಿಗೆ ಪತ್ನಿಯ ಮೇಲೆ ಅಧಿಕ ಪ್ರೀತಿ. ಆದ್ದರಿಂದ ನನ್ನ ಮಗಳಿನ ಚರುವಿನಲ್ಲಿ ಋಷಿಯು ಅಧಿಕವಾದ ಮಂತ್ರಶಕ್ತಿಯನ್ನು ತುಂಬಿರುತ್ತಾನೆ. ಆದ್ದರಿಂದ ಆ ಚರುವನ್ನು ಭಕ್ಷಿಸಿದರೆ ನನಗೆ ಉತ್ತಮೋತ್ತಮನಾದ ಸುತನು ಜನಿಸುತ್ತಾನೆಂದು ಚಿಂತಿಸಿದಳು. ತನ್ನ ಮಗಳನ್ನು ಅನುನಯದಿಂದ ವಶಪಡಿಸಿಕೊಂಡು ಚರುವನ್ನು ಬದಲಾಯಿಸಿಕೊಳ್ಳೋಣ ಎಂದಳು. ಮಾತೃಪ್ರೇಮದಿಂದ ಮಗಳು ಒಪ್ಪಿದಳು. ಇಬ್ಬರೂ ಮಂತ್ರಪೂತವಾದ ಚರುಗಳನ್ನು ಬದಲಿಸಿಕೊಂಡು ಭಕ್ಷಿಸಿದರು.

ಋಚೀಕನಿಗೆ ನಂತರ ಈ ವಿಷಯ ತಿಳಿಯಿತು. ಬಹಳ ಬೇಸರಗೊಂಡ. ಏಕೆಂದರೆ ತನ್ನ ಅತ್ತೆಗೆ ಕ್ಷಾತ್ರ ತೇಜದ ಸುತನು, ತನಗೆ ಬ್ರಹ್ಮವರ್ಚಸ್ವಿ ಸುತನು ಜನಿಸಲೆಂದು ಚರುವನ್ನು ಅಭಿಮಂತ್ರಿಸಿದ್ದ. ಇದನ್ನು ಅವರು ಬದಲಾಯಿಸಿಕೊಂಡಿದ್ದಾರೆ. ತನಗೆ ಇನ್ನು ಕ್ಷಾತ್ರ ತೇಜಸ್ಸಿನ ಮಗ ಹುಟ್ಟುತ್ತಾನೆ. ಇದು ತನಗೆ ಅಷ್ಟು ಇಷ್ಟವಿರಲಿಲ್ಲ.

ಆದರೂ ತನ್ನ ಮಂತ್ರಬಲದಿಂದ ಹೆಂಡತಿಯ ಸಹಕಾರದಿಂದ ತನಗೆ ಬ್ರಹ್ಮವರ್ಚಸ್ವಿಯಾದ ಮಗನೇ ಹುಟ್ಟುವಂತೆ ಮಾಡಿಕೊಂಡ. ಆದರೆ ಮೊದಲ ಮಂತ್ರಶಕ್ತಿಯು ನಿರ್ವೀರ್ಯವಾಗಬಾರದೆಂದು ತನ್ನ ಮೊಮ್ಮಗನು ಕ್ಷತ್ರಿಯನಾಗಲೆಂದು ಬಯಸಿದ. ಹೀಗಾಗಿ ಋಚೀಕನಿಗೆ ಜಮದಗ್ನಿಗಳು ಮಗನಾಗಿ ಹುಟ್ಟಿದರೆ, ಜಮದಗ್ನಿಗಳಿಗೆ ಅನಂತಕಲ್ಯಾಣಗುಣನಿಧಿಯಾದ ಪರಮಾತ್ಮನೇ ಕ್ಷಾತ್ರತೇಜಸ್ಸಿನಿಂದ ಅವತರಿಸಿದ.

ಗಾಧಿಗೆ ಹುಟ್ಟಿದ ಮಗನೇ ಕೌಶಿಕ. ಈತನೇ ಮುಂದೆ ವಿಶ್ವಾಮಿತ್ರ ಮುನಿಯಾಗಿ ಮೆರೆದಿದ್ದಾನೆ.

ಈ ಜಮದಗ್ನಿಗೆ ರೇಣುಕೆ ಎಂಬ ಪತ್ನಿ. ಆಕೆಗೆ ಐದು ಮಕ್ಕಳು. ಇವರಲ್ಲಿ ಕೊನೆಯವನೇ ಪರಶುರಾಮ.

ಒಮ್ಮೆ ರೇಣುಕೆ ಸ್ನಾನಕ್ಕೆಂದು ನದಿಗೆ ಹೋಗಿದ್ದಳು. ಅದೇ ಸಮಯದಲ್ಲಿ ಜಲಕ್ರೀಡೆಯಾಡಲೆಂದು ಚಿತ್ರರಥನೆಂಬ ರಾಜನು ಬಂದಿದ್ದ. ಜಲಕ್ರೀಡೆಯಲ್ಲಿ ರತನಾದ ಚಿತ್ರರಥನನ್ನು ಕಂಡು ಒಂದು ಕ್ಷಣ ರೇಣುಕೆಯ ಮನದಲ್ಲಿ ಗಂಧರ್ವರಿಗೆ ಇರುವ ಸುಖ ಅವರ ಜೊತೆಗಿನ ವಿಹಾರ ಮುಂತಾದ ಸುಖ ತನಗೂ ಬೇಕೆಂಬ ಭಾವ ತಲೆದೂರಿತು. ಇವಳು ಕೊನೆಗೆ ಹರಿಚಿತ್ತವೆಂದು ಆಶ್ರಮಕ್ಕೆ ಆಗಮಿಸಿದಳು. ಆಕೆಯ ಮೊಗವನ್ನು ಕಂಡ ಜಮದಗ್ನಿಗಳಿಗೆ ಅವಳ ಮಾನಸಿಕ ವ್ಯಭಿಚಾರದಿಂದಾದ ಪಾತಿವ್ರತ್ಯದ ಶಕ್ತಿಯ ಪತನ ಸ್ಪಷ್ಟವಾಗಿ ಗೋಚರಿಸುತ್ತಿತ್ತು. ಮುಖವನ್ನು ನೋಡಿ ಮನಸ್ಸಿನ ಮರ್ಮವನ್ನರಿಯುವ ಋಷಿಗಳ ಜ್ಞಾನಕ್ಕೆ ನಮೋ ಎನ್ನಬೇಕಷ್ಟೇ!!

ಜಮದಗ್ನಿಯು ರೇಣುಕೆಯನ್ನು ಧಿಕ್ಕರಿಸಿದ. ಆಕೆಯು ಪತ್ನಿಯಾಗಿ ಇರುವುದೇ ಬೇಡವೆಂದು ಚಿಂತಿಸಿದ. ಬಳಿಯಲ್ಲೇ ಇದ್ದ ರುಮಣ್ವಂತ, ಸುಷೇಣ, ವಸು,

ವಿಶ್ವಾವಸು ಎಂಬ ನಾಲ್ಕು ಮಕ್ಕಳನ್ನು ಕರೆದ. ಅಪರಾಧಿನಿಯಾದ ತಾಯಿಯ ಶಿರಚ್ಛೇದನಗೈಯ್ಯಲು ಆದೇಶಿಸಿದ. ಆದರೆ ಮಾತೃತ್ವದ ಭಕ್ತಿಯಿಂದ ಅವರ್‍ಯಾರೂ ತಂದೆಯ ಮಾತನ್ನು ನಡೆಸಲಿಲ್ಲ. ಪಿತೃವಾಕ್ಯ ಉಲ್ಲಂಘಿಸಿದ ಪಾಪಕ್ಕೆ ಜಮದಗ್ನಿಯು ಅವರನ್ನು ಮೃತರಾಗಿರೆಂದು ಶಪಿಸಿದ. ತಂದೆಯ ಶಾಪಕ್ಕೆ ಸತ್ತುಬಿದ್ದರು.

ಅಷ್ಟರಲ್ಲಿ ಸಮಿತ್ತು ತರಲು ಹೋದ ಪರಶುರಾಮ ಆಶ್ರಮಕ್ಕೆ ಬಂದ. ಜಮದಗ್ನಿ ಪರಶುರಾಮನಿಗೆ ಹಿಂದಿನಂತೆ ಆದೇಶಿಸಿದ. ಪತಿತಳಾದ ನಿನ್ನ ತಾಯಿಯ ತಲೆಯನ್ನು ಕಡಿ ಎಂದ. ರಾಮನು ಕೂಡಲೇ ತಾಯಿಯ ತಲೆ ಕಡಿದ. ಜಮದಗ್ನಿಗೆ ರಾಮನ ಪಿತೃಭಕ್ತಿ ಮುದ ನೀಡಿತು. 'ಮಗನೇ, ವರ ಬೇಡು' ಎಂದ.

ಪರಶುರಾಮನು ತಾಯಿ-ಸಹೋದರರನ್ನು ಬದುಕಿಸೆಂದು ವರ ಬೇಡಿದ. ಅವರಿಗೆ ಪಾತಿತ್ವದ ಪಾಪ-ಪಿತೃವಾಕ್ಯ ಉಲ್ಲಂಘನೆಯ ಪಾಪ ಬರಬಾರದೆಂದು, ತನಗೆ ಯುದ್ಧದಲ್ಲಿ ಎದುರಾಳಿಗಳು ಇರಬಾರದೆಂದು, ತಾಯಿ-ಸಹೋದರರಿಗೆ ಸತ್ತು ಬದುಕಿದ ನೆನಪಿರಬಾರದೆಂಬ ವರಗಳನ್ನು ನರನಟನೆಯಿಂದ ಕೇಳಿದ.

ಸರ್ವೇಶ್ವರಃ ಸ್ವತಂತ್ರೋऽಪಿ ಸರ್ವಶಕ್ತಿಶ್ಚ ಸರ್ವದಾ ।
ಸರ್ವಜ್ಞೋऽಪಿ ವಿಮೋಹಾಯ ಜನಾನಾಂ ಪುರುಷೋತ್ತಮಃ ।
ಕ್ವಚಿಚ್ಛಿವಂ ಕ್ವಚಿದೃಷೀನ್ ಕ್ವಚಿದ್ದೇವಾನ್ ಕ್ವಚಿನ್ನರಾನ್ ।
ನಮತ್ಯರ್ಚಯತಿ ಸ್ತೌತಿ ವರಾನರ್ಥಯತೇऽಪಿ ಚ ॥

ತಾ.ನಿ. ೨-೧೩೩,೧೩೪ ॥

ಒಮ್ಮೆ ಪರಶುರಾಮನು ಆಶ್ರಮದಲ್ಲಿಲ್ಲದ ಸಮಯದಲ್ಲಿ ಕಾರ್ತವೀರ್ಯಾರ್ಜುನನೆಂಬ ರಾಜ ಆಶ್ರಮಕ್ಕೆ ಬಂದ. ರೇಣುಕೆ-ಜಮದಗ್ನಿಗಳು ಅವನನ್ನು ಯಥೋಚಿತವಾಗಿ ರಾಜನೆಂದು ಸತ್ಕರಿಸಿದರು. ಜಮದಗ್ನಿಗಳ ಬಳಿ ಒಂದು ಅಪೂರ್ವವಾದ ಕಾಮಧೇನುವಿತ್ತು. ಆದರಿಂದ ಬಗೆಬಗೆಯ ಭಕ್ಷ್ಯ-ಭೋಜ್ಯಗಳನ್ನು ಸೃಷ್ಟಿಸಿ, ರಾಜರಿಗೂ ಸಿಗದ ಭೋಗರಸದ ಸವಿಯೂಟವನ್ನು ಕಾರ್ತವೀರ್ಯಾರ್ಜುನನಿಗೆ, ಅವನ ಪರಿವಾರದವರಿಗೆ ಜಮದಗ್ನಿಗಳು ಉಣಿಸಿದರು. ಇದರಿಂದ ಉಪಚಾರ ಸ್ವೀಕರಿಸಿದ ರಾಜನಿಗೆ ಆ ನಂದಿನಿಯನ್ನು ತಾನು

ಕೊಂಡೊಯ್ಯಬೇಕೆಂಬ ದುರ್ಬುದ್ಧಿಯು ಹುಟ್ಟಿತು. ಋಷಿಗಳಿಗೆ ಅಪಚಾರ ಮಾಡಿದ. ಧೇನುವನ್ನು, ಕರುವನ್ನು ಬಲಾತ್ಕರಿಸಿದ. ಸೆಳೆದೊಯ್ದ. ಆಶ್ರಮವನ್ನು ಉಧ್ವಸ್ತಗೊಳಿಸಿದ. ಆದರೂ ಜಮದಗ್ನಿಗಳು ಶಾಂತರಾಗಿಯೇ ಇದ್ದರು.

ಇತ್ತ ಪರಶುರಾಮನು ಬಂದ. ತಂದೆಯಿಂದ ನಡೆದ ಸಂಗತಿಗಳೆಲ್ಲವನ್ನೂ ತಿಳಿದ. ಕ್ಷತ್ರಿಯರ ದುರ್ಬುದ್ಧಿಗೆ ಕೊಡಲಿಯಿಂದ ಪಾಠ ನೀಡಬೇಕೆಂದು ಕೊಡಲಿರಾಮ ಸಿಡಿಲಿನ ಧ್ವನಿಯಿಂದ ಆಶ್ರಮದಿಂದ ಹೊರ ಹೊರಟ. ಇದನ್ನು ಕಂಡ ಕಾರ್ತವೀರ್ಯನ ಅನುಯಾಯಿಗಳು ಯುದ್ಧಕ್ಕಾಗಿ ಆಗಮಿಸಿದರು. ಅವರನ್ನೆಲ್ಲ ಚೆಂಡಾಡಿದ. ಕೊನೆಗೆ ಅತ್ಯಂತ ಪರಾಕ್ರಮಿಯಾದ ಕಾರ್ತವೀರ್ಯಾರ್ಜುನನೇ ಬಂದ. ಅವನನ್ನೂ ಕ್ಷಣಮಾತ್ರದಲ್ಲಿ ಪರಶುರಾಮನು ಕೊಡಲಿಯಿಂದ ಕೊಚ್ಚಿಹಾಕಿದ. ಅಂದಿನಿಂದ ಪರಶುರಾಮನೆಂದೇ ಪ್ರಖ್ಯಾತನಾದ.

ಈ ಹಗೆತನ ಮುಂದುವರೆಯಿತು. ಕಾರ್ತವೀರ್ಯನ ಮಕ್ಕಳು ತನ್ನ ತಂದೆಯನ್ನು ಕೊಂದ ಸೇಡನ್ನು ತೀರಿಸಿಕೊಳ್ಳಬೇಕೆಂದು, ಒಂದು ದಿನ ರಾಮನಿಲ್ಲದಾಗ ಆಶ್ರಮವನ್ನು ಹೊಕ್ಕರು. ಜಮದಗ್ನಿಗಳು ತಪಸ್ಸು ಮಾಡುತ್ತಿದ್ದರು. ಖಡ್ಗಪಾಣಿಗಳಾಗಿ ಬಂದ ಕಾರ್ತವೀರ್ಯನ ಮಕ್ಕಳನ್ನು ನೋಡಿದರು. ಆದರೆ ಪ್ರಶಾಂತಮನಸ್ಕರಾದ ಜಮದಗ್ನಿಗಳು ಹರಿಯನ್ನೇ ಧ್ಯಾನಿಸುತ್ತಿದ್ದರು. ವಿಚಾರಹೀನರಾದ ದುಷ್ಟರು ಜಮದಗ್ನಿಗಳ ತಲೆಯನ್ನು ಕಡಿದರು. ರಾಮನು ಸಮಿತ್ತು ಹಿಡಿದು ಬರುವಷ್ಟರಲ್ಲಿ ತಂದೆಯು ಭೀಕರವಾಗಿ ಹತ್ಯೆಗೀಡಾಗಿದ್ದರು. ರಾಮನು ಪರಮ ಕ್ರುದ್ಧನಾದ. ಧರೆಯನ್ನು ನಿಃಕ್ಷತ್ರಿಯವನ್ನಾಗಿಸುವ ಪ್ರತಿಜ್ಞೆಗೈದ. ನಿರಪರಾಧಿಗಳಾದ ಬ್ರಾಹ್ಮಣರನ್ನು ಹತ್ಯೆಗೈಯ್ಯುವಷ್ಟು ಅಪರಾಧಿಗಳಾದ ಈ ದುಷ್ಟ ಕ್ಷತ್ರಿಯರನ್ನು ನಾಮಾವಶೇಷವನ್ನಾಗಿಸುತ್ತೇನೆ ಎಂದು ಪ್ರತಿಜ್ಞೆ ಮಾಡಿದರು. ತಂದೆಗೆ ಮಾಡಬೇಕಾದ ಔರ್ಧ್ವದೈಹಿಕ ಕ್ರಿಯೆಗಳನ್ನು ಮಾಡಿದರು. ಜಮದಗ್ನಿಗಳನ್ನು ಸಪ್ತರ್ಷಿಗಳಲ್ಲಿ ಸೇರಿಸಿದರು. ತಮ್ಮ ಪ್ರತಿಜ್ಞೆಯನ್ನು ಪೂರೈಸಲು ಇಪ್ಪತ್ತೊಂದು ಬಾರಿ ಭೂಮಂಡಲಕ್ಕೆ ಪ್ರದಕ್ಷಿಣೆ ಮಾಡಿ ದುಷ್ಟ ಕ್ಷತ್ರಿಯರನ್ನು ಸಂಹರಿಸಿ ಕುರುಕ್ಷೇತ್ರದಲ್ಲಿ 'ಸಮಂತಪಂಚಕ'ವನ್ನು ನಿರ್ಮಿಸಿ ಪಿತೃಗಳಿಗೆ ರಕ್ತದಿಂದ ತರ್ಪಣ ನೀಡಿದರು. ಕ್ಷತ್ರಿಯರಿಂದ ವಶಪಡಿಸಿಕೊಂಡ ಭೂಮಿಯನ್ನು ಬ್ರಾಹ್ಮಣರಿಗೆ ನೀಡಿದರು. ಕೊನೆಗೆ

ಪಿತೃಗಳು ಬಂದು ಕ್ಷತ್ರಿಯವಧೆಯಿಂದ ನಿವೃತ್ತನಾಗುವಂತೆ ಪ್ರಾರ್ಥಿಸಿದರು. ಅವರ ಪ್ರಾರ್ಥನೆಗನುಗುಣವಾಗಿ ಶಸ್ತ್ರತ್ಯಾಗ ಮಾಡಿ, ಕೋಪವನ್ನು ಬದಿಗಿಟ್ಟ. ಇಂದಿಗೂ ಈ ರೂಪವನ್ನು ಸಿದ್ಧ-ಗಂಧರ್ವ-ಚಾರಣರು ಪ್ರಶಂಸಿಸುತ್ತಿದ್ದಾರೆ.

★ ★ ★ ★

## ಬ್ರಹ್ಮರ್ಷಿ ವಸಿಷ್ಠರು

ಹರಿಧ್ಯಾನರತಂ ಶಾಂತಂ ತ್ರಿದಶೈರಭಿಪೂಜಿತಮ್ ।
ಬ್ರಹ್ಮಸೂನುಂ ಮಹಾತ್ಮಾನಂ ವಸಿಷ್ಠಂ ಪೂಜಯೇತ್ಸದಾ ॥

ವೈದಿಕ ವಾಙ್ಮಯದ ಮಂತ್ರದ್ರಷ್ಟಾರರಾದ ಋಷಿ ಪುಂಗವರಲ್ಲಿ ವಸಿಷ್ಠರು ವರಿಷ್ಠರಾಗಿದ್ದಾರೆ. ೮೪೮ ಮಂತ್ರಗಳನ್ನು ಕಂಡು ಹಿಡಿದ ಅವರಂಥ ಅಪರೋಕ್ಷ ಜ್ಞಾನಿಗಳು ವೈದಿಕ ಪ್ರಪಂಚದಲ್ಲಿಯೂ ವಿರಳರೇ ಆಗಿದ್ದಾರೆ.

ಅವರ ಹೆಸರಿನಿಂದ ನಮಗೀಗ ದೊರಕುವ ಋಗ್ವೇದದ ೧೦೪ ಸೂಕ್ತಗಳಲ್ಲಿ ಅವರ ಉದಾತ್ತವಾದ ತತ್ವಜ್ಞಾನದ ಅರುಳು ಅರಳಿ ನಿಂತಿದೆ. ಅವರ ಆರ್ಷ ಜೀವನದ ದಿವ್ಯದರ್ಶನ ಋಗ್ವೇದದ ಸಪ್ತಮ ಮಂಡಲದಲ್ಲಿ ಹೂತು ವೇದ ಪ್ರಪಂಚವನ್ನೇ ಪರಿಮಳಿತಗೊಳಿಸಿದೆ. ಅವರ ಸತ್ಯನಿಷ್ಠೆ, ಶಾಂತಿಪ್ರಿಯತೆ, ಯಜ್ಞ ವಿಜ್ಞತೆ, ಪರೋಪಕಾರ ವ್ಯಸನಿತೆಗಳು ಶ್ರೌತ ಸಂಸಾರದ ಸೀಮೋಲಂಘನ ಮಾಡಿ ಪುರಾಣ ಪ್ರಪಂಚದಲ್ಲಿಯೂ ತಮ್ಮ ಯಶೋಗಾಥೆಯಿಂದ ಮೆರೆದಿವೆ.

ಅತ್ರಿ, ಮರೀಚಿ, ಅಂಗಿರ, ಪುಲಸ್ತ್ಯ ಪುಲಹ, ಕ್ರತು, ಭೃಗು, ದಕ್ಷ, ನಾರದ ಮುಂತಾದ ಋಷಿ. ಪ್ರಜಾಪತಿಗಳಂತೆ ವಸಿಷ್ಠರೂ ಬ್ರಹ್ಮದೇವರ ಮಾನಸ ಪುತ್ರರಾಗಿದ್ದಾರೆ. ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮದೇವರ ಪ್ರಾಣವಾಯುವಿನಿಂದಲೇ ವಸಿಷ್ಠರು ಹುಟ್ಟಿದರೆಂದು ಭಾಗವತದಲ್ಲಿ ಉಲ್ಲೇಖ ಬರುತ್ತದೆ.

ಋಗ್ವೇದದ ಏಳನೆಯ ಮಂಡಲದಲ್ಲಿ ಮಾತ್ರ ವಸಿಷ್ಠರ ಜನನ ವಾರ್ತೆ ವಿಚಿತ್ರವಾಗಿಯೇ ಬರುತ್ತದೆ.

'ಉತಾಸಿ ಮೈತ್ರಾವರಣೋ ವಸಿಷ್ಠೋರ್ವಶ್ಯಾ ಬ್ರಹ್ಮನ್ ಮನಸೋಧಿ ಜಾತಃ।
ದ್ರಪ್ಸಂ ಸ್ಕನ್ನಂ ಬ್ರಹ್ಮಣಾ ದೈವ್ಯೇನ ವಿಶ್ವೇದೇವಾಃ ಪುಷ್ಕರೇತ್ವಾ ದದಂತಸತ್ರೇಹ
ಜಾತಾವಿಷಿತಾ ನಮೋಭಿಃ ಕುಂಭೇ ರೇತಃ ಸಿಷಿಚತುಃಸಮಾನಮ್ ॥
ತತೋಹಮಾನ ಚತುಃಸಮಾನಮ್ ॥ ತತೋಹಮಾನ
ಉದಿಯಾಯಮಧ್ಯಾತ್ ತತೋ ಜಾತ ಮೃಷಿಮಾಹುಃ ವಸಿಷ್ಠಃ ॥'

ಈ ವೈದಿಕ ಋಕ್ಕುಗಳನ್ನು ಬೃಹದ್ದೇವತಾ ಗ್ರಂಥದ ಕಥಾ ನಿರೂಪಣೆಯ ಭಾವದ ಬೆಳಕಿನಲ್ಲಿ ಪರಿಕಿಸಿದಾಗ ವಸಿಷ್ಠರ ಜನ್ಮಕತೆಯ ಕ್ರಮ ಹೀಗೆ ತಿಳಿದುಬರುತ್ತದೆ.

ಪ್ರಜಾಪತಿಯಿಂದ ಮರೀಚಿ, ಮರೀಚಿಯಿಂದ ಕಶ್ಯಪ, ಕಶ್ಯಪರಿಂದ ದಕ್ಷನ ಮಗಳಾದ ಅದಿತಿದೇವಿಯಲ್ಲಿ ಮಿತ್ರ ಮತ್ತು ವರುಣ ಎಂಬ ಇಬ್ಬರು ಅವಳಿ ದೇವತೆಗಳು ಜನಿಸಿದರು. ಮುಂದೆ ಈ ಮಿತ್ರಾವರುಣ ದೇವತೆಗಳು ಒಂದು ದೊಡ್ಡ ಯಜ್ಞವನ್ನು ಪ್ರಾರಂಭ ಮಾಡಿದರು. ಬ್ರಹ್ಮಜ್ಞಾನಿಗಳು ಕೈಗೊಂಡ ಈ ಮಹಾಯಜ್ಞಕ್ಕೆ ದೇವ ಮಾನವಕುಲದ ಮುಂದಾಳುಗಳೆಲ್ಲರೂ ನೋಡಲಿಕ್ಕೆ ಬಂದಿದ್ದರು.

ಅವರೆಲ್ಲರ ಜೊತೆಗೆ ಅಮರಾವತಿಯ ಅರಗಿಳಿಯಾದ ಗಂಧರ್ವರಮಣಿ ಊರ್ವಶಿಯೂ ದೇವಗಣಿಕೆಯರ ಜೊತೆಗೆ ಯಜ್ಞಮಂಟಪಕ್ಕೆ ಬಂದಿದ್ದಳು.

ನಂದನವನದ ಈ ಮಂದಾರ ಮೊಗ್ಗೆಯನ್ನು ಕಂಡು ಯಾಗಕ್ಕೆ ಕುಳಿತ ಮಿತ್ರಾವರುಣರ ಚಿತ್ತ ಚಂಚಲವಾಯಿತು. ಕಣ್ಣು ಕೋರೈಸುವ ಸಗ್ಗದ ಹೆಣ್ಣಿನ ಬಣ್ಣ ಬಿನ್ನಾಣಗಳಿಗೆ ಅವರ ಮನಸ್ಸು ಮಾರು ಹೋಯಿತು. ಅವರ ಪ್ರೇಮ ಕರಗಿ ನೀರಾಗಿ ಅಲ್ಲಿಯೇ ಇದ್ದ ವಸತೀವರೀ ಎಂಬ ಕೊಡದಲ್ಲಿ ಬಿದ್ದಿತು. ಅದರಿಂದ ಎರಡು ಮುತ್ತಿನಂಥ ಮಕ್ಕಳು ಉತ್ಪನ್ನವಾದವು. ಮೊದಲನೆಯದೇ ಅಗಸ್ತ್ಯ ಎರಡನೆಯದೇ ವಸಿಷ್ಠ. ಮುಂದೆ ಆ ಕೊಡದಲ್ಲಿಯ ನೀರನ್ನು ಹೊರಗೆ ಹೊಂಡಕ್ಕೆ ಹಾಕಿದಾಗ ಆ ವಸಿಷ್ಠ ಶಿಶುವು ಅಲ್ಲಿಯೇ ಇದ್ದ ಕಮಲದ ಬಳ್ಳಿಯ ತಾವರೆ ದಳದ ಮೇಲೆ ಕುಳಿತುಕೊಂಡಿತು.

ವೇದರಾಶಿಯಿಂದ ವಿಶಿಷ್ಟನಾಗಿಯೇ ಜನಿಸಿದ ಆ ಮಗುವನ್ನು ಕಮಲ ಪತ್ರ ಸುತ್ತಲೂ ಹಿನ್ನೆಲೆಯಲ್ಲಿ ನಿಂತುಕೊಂಡು ದೇವತೆಗಳೆಲ್ಲರೂ ಸುತ್ತುವರೆದು ಎತ್ತಿ

ಹಿಡಿದಿದ್ದರು. ಋಷಿ ದೇವತೆಗಳೆಲ್ಲರೂ ಮಿತ್ರಾವರುಣರನ್ನು ಪ್ರಶಂಸಿಸುತ್ತಿದ್ದರು. ಅಲ್ಲಿ ನೆರೆದ ಎಲ್ಲ ಋಷಿ ಮುನಿ ಮಂಡಲದ ಮಧ್ಯದಿಂದ ಎದ್ದ ಆ ಮುದ್ದು ಮಗುವಿಗೆ ವಸಿಷ್ಠ ಎಂದು ಕರೆದರು.

ಮುಂದೆ ವಸಿಷ್ಠರ ವಂಶ ಮುಂದುವರಿದ ಕ್ರಮದ ಬಗೆಗೂ ವೇದ ಪುರಾಣಗಳಲ್ಲಿ ಭಿನ್ನ ಭಿನ್ನ ವೃತ್ತಾಂತಗಳೇ ದೊರಕುತ್ತವೆ. ಅವುಗಳನ್ನು ನೋಡಿದರೆ ೧೩-೧೪ ವಸಿಷ್ಠರು ಇರಬಹುದೆಂದು ಗೋಚರವಾಗುತ್ತದೆ. ಯುಗಭೇದದಿಂದ ಅವೆಲ್ಲವೂ ಸರಿಯೆಂದೇ ಹೇಳಬಹುದು.

ಹರಿವಂಶದಲ್ಲಿ ಈ ವಸಿಷ್ಠರೇ ಆಪವ ಪ್ರಜಾಪತಿಗಳೆಂದು ಪ್ರಸಿದ್ಧರಾಗಿದ್ದು ಅವರ ಮಾನಸ ಕನ್ಯೆಯಾದ ಶತರೂಪಾ ಎಂಬ ಜಗತ್ತಿನ ಮೊಟ್ಟಮೊದಲನೆಯ ಹೆಣ್ಣು ಹತ್ತು ಸಾವಿರ ವರ್ಷ ತಪಸ್ಸು ಮಾಡಿ ಸಂತತಿಗಾಗಿ ವಸಿಷ್ಠರನ್ನೇ ಸೇವಿಸಿದಳು. ಆಗ ಭಗವತ್ಸಂಕಲ್ಪದಂತೆ ಶತರೂಪೆಗೆ ಆ ಆಪವವಸಿಷ್ಠರಿಂದ ವೀರ ಎಂಬ ಗಂಡು ಮಗ ಜನಿಸಿದ. ಈ ವೀರನಿಂದ ಕರ್ದಮ ಪುತ್ರಿ ಕಾಮ್ಯಾಳಲ್ಲಿ ಉತ್ತಾನಪಾದ ಪ್ರಿಯವ್ರತ ಎಂಬ ಇಬ್ಬರು ಪುತ್ರರು ಉತ್ಪನ್ನರಾದರು. ಅವರಿಂದ ಧ್ರುವರಾಜ ಹುಟ್ಟಿದ ಎಂದು ಮುಂತಾಗಿ ಕಥೆ ಬರುತ್ತದೆ.

ಆದರೆ ಬ್ರಹ್ಮಾಂಡಪುರಾಣದಲ್ಲಿ ಮಾತ್ರ ವಸಿಷ್ಠರ ಕೌಟುಂಬಿಕ ಕಥೆ ಬೇರೆ ತೆರನಾಗಿಯೇ ಬರುತ್ತದೆ. ದಕ್ಷ ಪ್ರಜಾಪತಿಯ ಮಗಳಾದ ಊರ್ಜಾಳನ್ನು ವಸಿಷ್ಠರಿಗೆ ಕೊಟ್ಟಿತ್ತು. ಊರ್ಜಾಳಿಂದ ವಸಿಷ್ಠರಿಗೆ ಪುಂಡರೀಕಾ ಎಂಬ ಹೆಣ್ಣುಮಗಳೂ ದಕ್ಷ, ಗರ್ತ, ಊರ್ಧ್ವಬಾಹು, ಸವನ, ಪವನ, ಸುತಪಸ್, ಶಂಕು ಎಂಬ ಏಳು ಗಂಡು ಮಕ್ಕಳೂ ಆದರು. ಈ ಏಳು ಮಕ್ಕಳೇ ಮುಂದೆ ವಸಿಷ್ಠೋಪದಿಷ್ಟವಾದ ಜ್ಞಾನ ಭಕ್ತಿ ಉಪಾಸನೆಗಳ ಪ್ರಭಾವದಿಂದ ಸಪ್ತರ್ಷಿಗಳಾದರು. ಪುಂಡರೀಕಾ ಎಂಬ ವಾಸಿಷ್ಠ ಕುಮಾರಿಯನ್ನು ಪ್ರಾಣ ಎಂಬ ವಸುವಿಗೆ ಕೊಟ್ಟು ವಿವಾಹ ಮಾಡಿದರು ಎಂದು ನಿರೂಪಿಸಲಾಗಿದೆ.

ಸ್ವಾಯಂಭುವ ಮನು ಹಾಗೂ ಶತರೂಪೆಯ ಮಗಳಾದ ದೇವಹೂತಿಯನ್ನು ಕರ್ದಮ ಪ್ರಜಾಪತಿಗೆ ಮದುವೆ ಮಾಡಿಕೊಡಲಾಗಿತ್ತು. ದೇವಹೂತಿಯ

ಹೊಟ್ಟೆಯಿಂದ ಕಪಿಲ ನಾಮಕ ಪರಮಾತ್ಮನು ಅವತರಿಸಿ ಬಂದ. ಆ ಭಗವಂತನ ಸಹೋದರಿಯಾಗಿ ಅರುಂಧತಿಯೂ ಜನಿಸಿದಳು. ಈ ಕಪಿಲ ಸೋದರಿಯನ್ನು ಕರ್ದಮರು ಗೌರವರ್ಣದ ತರುಣ ತಪಸ್ವಿಯಾದ ವಸಿಷ್ಠರಿಗೆ ಧಾರೆ ಎರೆದು ಕೊಟ್ಟರು. ವಾಯುಪುರಾಣದಲ್ಲಿ ಅರುಂಧತಿಯು ಕಶ್ಯಪರ ಮಗಳೆಂದು ಹೇಳಿದೆ. ಪರಮ ಪತಿವ್ರತೆಯಾದ ಅರುಂಧತಿಯ ಪಾತಿವ್ರತ್ಯದ ಪ್ರಭಾವ, ಪಾಂಡಿತ್ಯದ ಮಹಿಮೆ, ಆದರ್ಶ ಗೃಹಿಣೀತ್ವ, ತಪಸ್ಸಿದ್ಧಿ ಮುಂತಾದ ಸದ್ಗುಣಗಳು ಭಾರತಾದಿ ಪುರಾಣಗಳಲ್ಲಿ ಹೇರಳವಾಗಿ ವರ್ಣಿತವಾಗಿವೆ.

ಈ ಅರುಂಧತಿಯಿಂದ ವಸಿಷ್ಠರಿಗೆ ಶಕ್ತಿಯೇ ಮೊದಲಾದ ನೂರಾರು ಜನ ಮಕ್ಕಳಾದರು. ಶಕ್ತಿ ಋಷಿಗೆ ಅದೃಶ್ಯಂತಿಯೆಂಬ ಪತ್ನಿಯಿಂದ ಪರಾಶರ ಮುನಿಗಳು ಜನಿಸಿದರು. ಪರಾಶರರಿಂದ ಸಾಕ್ಷಾದ್ಭಗವಂತನೇ ವ್ಯಾಸರೂಪದಿಂದ ಅವತರಿಸಿ ವೇದೋದ್ಧಾರ ಮಾಡಿದನು.

ವಸಿಷ್ಠರು ವೇದ ವೇದಾಂತಗಳಲ್ಲಿ ಪೂರ್ಣಪ್ರಭುತ್ವವುಳ್ಳವರಿದ್ದುದು ಮಾತ್ರವಲ್ಲದೇ ರಾಜಕಾರಣದಲ್ಲಿಯೂ ಅವರು ನಿಷ್ಣಾತರೂ ಲೋಕಕ್ಷೇಮಾಕಾಂಕ್ಷಿಗಳೂ ಆಗಿದ್ದರು. ಶ್ರೀರಾಮಚಂದ್ರನ ರಘುವಂಶಕ್ಕೆ ಅವರು ರಾಜಪುರೋಹಿತರೂ ಕುಲಗುರುಗಳೂ ಆಗಿ ಅವನಿಂದ ಅನೇಕ ಲೋಕೋಪಕಾರಕ ಕಾರ್ಯಗಳನ್ನು ಮಾಡಿಸಿದರು. ಸಗರನ ಮಕ್ಕಳೆಲ್ಲ ಕಪಿಲಶಾಪದಿಂದ ಹತರಾದಾಗ ಭಗೀರಥನಿಗೆ ತಪಸ್ಸು ಮಾಡಲಿಕ್ಕೆ ಹೇಳಿ ಅವನಿಂದ ಭಾಗೀರಥಿಯನ್ನು ಪಾತಾಳಕ್ಕಿಳಿಸಿದರು. ದಿಲೀಪನಿಗೆ ಮಕ್ಕಳಾಗದಾಗ ನಂದಿನಿಯ ಸೇವೆಮಾಡಲು ಹಚ್ಚಿ ಅದರಿಂದ ಅವನಿಗೆ ರಘುರಾಜನು ಹುಟ್ಟುವಂತೆ ಮಾಡಿದರು.

ವಸಿಷ್ಠರು ದೀನ ದಲಿತರ ಹಾಗೂ ದುಃಖಿತರ ಕೈವಾರಿಗಳಾಗಿದ್ದರು. ಆಗಿನ ಕಾಲದಲ್ಲಿ ತೃತ್ಸುವಿನ ರಾಜರಾದ ಭರತರು ಯುದ್ಧದಲ್ಲಿ ಸೋತು ಅಮಾನಿತರಾಗಿದ್ದರು. ಅವರು ಪ್ರಜೆಗಳೆಲ್ಲರೂ ಶತ್ರುರಾಜರ ಆಕ್ರಮಣದಿಂದ ಕಂಗಾಲಾಗಿದ್ದರು, ಈ ರಾಜ ಪ್ರಜರನ್ನು ರಕ್ಷಿಸುವವರು ಯಾರೂ ಆ ಕಾಲದಲ್ಲಿ ಇರಲಿಲ್ಲ. ದೇಶದ ಈ ದುರವಸ್ಥೆ ದೈನ್ಯ, ದಾರಿದ್ರ್ಯಗಳನ್ನು ಕಂಡು ವಸಿಷ್ಠರ

ಅಂತಃಕರಣ ಕರಗಿತು. ಕೂಡಲೇ ಅವರು ಪ್ರಜಾಕೋಟಿ ಹಿತಕ್ಕಾಗಿ ತಮ್ಮ ಆರಣ್ಯಕ ಆಶ್ರಮವನ್ನು ತೊರೆದು ರಾಜಕೀಯ ರಂಗಕ್ಕಿಳಿದರು. ತೃತ್ಸುರಾಜನಿಗೆ ಎಲ್ಲ ವಿಧ ಸಹಾಯ ಮಾಡಿಸಿ ಅವರಿಗೆ ವಸಾಹತು ಮಾಡಿಕೊಂಡು ಇರುವದಕ್ಕೆ ವಿಸ್ತಾರವಾದ ಸಂಪನ್ನ ರಾಷ್ಟ್ರವೊಂದನ್ನು ಕೊಡಿಸಿ ಅಲ್ಲಿ ಅವರಿಗೆ ಸಕಲ ವಿಧವಾದ ಸುಖ ಸೌಕರ್ಯ ಸಂಪದಗಳನ್ನು ಕಲ್ಪಿಸಿಕೊಟ್ಟರು. ಈ ಅಂಶವು ಋಗ್ವೇದದಲ್ಲಿ – 'ವಸಿಷ್ಠಸ್ಯಸ್ತುವತ ಇಂದ್ರೋ ಅಶ್ರೋೀದುರುಂ ತೃತ್ಸುಭ್ಯೋ ಅಕೃಣೋದುಲೋಕಂ' 'ದಂಡಾ ಇವೇದ್ ಗೋ ಅಜನಾಸ ಆಸನ್ ಪರಿಚ್ಛಿನ್ನಾ ಭರತಾ ಅರ್ಭಕಾಸಃ। ಅಭವಚ್ಚ ಪುರಾ ಏತಾ ವಸಿಷ್ಠ ಆದಿತ್ ತೃತ್ಸೂನಾಂ ವಿಶೋ ಅಪ್ರದಂತ।' ಮುಂತಾದ ಸೂಕ್ತಗಳಿಂದ ವ್ಯಕ್ತವಾಗುತ್ತದೆ.

ವೈದಿಕಕಾಲದಲ್ಲಿ ವಸಿಷ್ಠರ ರಾಜಕೀಯ ಮುತ್ಸದ್ಧಿ ಗಿರಿಯ ನಿದರ್ಶಕನಾದ ಇನ್ನೊಂದು ಘಟನೆಯೆಂದರೆ ಪಂಜಾಬದ ರಾವೀ ನದಿಯ ದಂಡೆಯ ಮೇಲೆ ನಡೆದ ಕ್ರಾಂತಿ ಕೋಲಾಹಲವೆಂದು ಹೇಳಬಹುದು.

ಮಹರ್ಷಿ ವಿಶ್ವಾಮಿತ್ರರ ಶಿಷ್ಯನಾದ ಸುದಾಸ ಮಹಾರಾಜನು ಅವರ ನೇತೃತ್ವದಲ್ಲಿ ದೊಡ್ಡದಾದ ಅಶ್ವಮೇಧ ಯಾಗವೊಂದನ್ನು ಮಾಡಿದನು. ಅಶ್ವಮೇಧ ಕುದುರೆಯನ್ನು ಬಿಟ್ಟು ಅದರ ರಕ್ಷಣೆಯ ನೆವದಿಂದ ದೇಶದ ತುಂಬೆಲ್ಲ ಭರತರಾಜರು ತಮ್ಮದೊಂದು ಚೈತ್ರಯಾತ್ರೆಯನ್ನೇ ತೆಗೆದರು. ಪರಾಕ್ರಮಿಗಳಾದ ಭರತರಾಜರು ದೇಶ ವಿದೇಶಗಳ ರಾಜಮಹಾರಾಜರನ್ನೆಲ್ಲ ಗೆದ್ದು ತಮ್ಮ ಅಶ್ವಮೇಧ ಕುದುರೆಯನ್ನು ಭೂಮಂಡಲದ ತುಂಬ ಮೆರೆಸಿಗೊಂಡು ಸುರಕ್ಷಿತವಾಗಿ ಯಜ್ಞಮಂಟಪಕ್ಕೆ ಮರಳಿಬಂದರು.

ಯಜ್ಞವೂ ಕೂಡ ಸಾಂಗವಾಗಿ ನಿರ್ವಿಘ್ನದಿಂದ ನೆರವೇರಿತು. ಆದರೆ ಈ ಘಟನೆಯಿಂದ ಈ ಭರತರಾಜರ ವಿಷಯದಲ್ಲಿ ಜಗತ್ತಿನ ಎಲ್ಲ ರಾಜರಲ್ಲಿ ಅಸೂಯೆಯ ಉರಿ ಹೊತ್ತು ಎಲ್ಲರ ಹೃದಯದಲ್ಲಿ ಪ್ರತೀಕಾರ ಭಾವನೆ ಹೊಗೆಮಾಡಹತ್ತಿತ್ತು. ಸುದಾಸ ರಾಜನನ್ನು ಎದುರಿಸುವ ಧೈರ್ಯವು ಅವರಾರಲ್ಲಿಯೂ ಇರದ್ದರಿಂದ ಅವರು ಈ ಅಪಮಾನದ ಕಿಚ್ಚನ್ನು ಉಂಡು

ಬಾಯಿಮುಚ್ಚಿಕೊಂಡು ಕೆಲಕಾಲ ಸುಮ್ಮನಿದ್ದರು. ಆದರೂ ಒಳಗಿಂದೊಳಗೆ ಅವರು ಸಾಮೂಹಿಕವಾಗಿ ಯುದ್ಧದ ತಯಾರಿ ನಡೆಯಿಸಿದರು.

ಸುದಾಸ ರಾಜನ ಈ ಗೆಲುವಿಗೆ ತಮ್ಮಲ್ಲಿಯ ಅನೈಕ್ಯವೇ ಕಾರಣ ಎಂದು ಅರಿತ ರಾಜರೆಲ್ಲರೂ ಒಂದಾಗಿ ಸುದಾಸನನ್ನು ಸೋಲಿಸಬೇಕೆಂದು ತಮ್ಮ ತಮ್ಮಲ್ಲಿ ಸುಸಂಘಟಿತರಾದರು. ಪುರು, ದ್ರುಹ್ಯು , ಕವಷ ಭೇದ, ಕವಿ, ವೈಕರ್ಣ ಮುಂತಾದ ಮುಖ್ಯ ಮುಖ್ಯ ಹತ್ತು ಜನ ಮಹಾರಾಜರೆಲ್ಲರೂ ತುರ್ವಶು ರಾಜನ ನೇತೃತ್ವದಲ್ಲಿ ಒಂದುಗೂಡಿ ಪ್ರಪಂಚ ಸೈನ್ಯದೊಂದಿಗೆ ಸುದಾಸನ ಮೇಲೆ ಏರಿ ಬಂದರು. ವೈರಿರಾಜ ವೃಂದದ ಸಂಘಟಿತವಾದ ಈ ಸಾಂಘಿಕ ಆಕ್ರಮಣ ಮತ್ತು ಅವರೆಲ್ಲರ ಪ್ರಚಂಡ ಸೇನಾ ಸನ್ನಾಹಗಳನ್ನು ಕಂಡು ಸುದಾಸ ಮಹಾರಾಜನ ಧೈರ್ಯ ಉಡುಗಿಹೋಯಿತು. ಭಾರತದ ಇತಿಹಾಸದಲ್ಲಿಯೇ ಇಷ್ಟು ದೊಡ್ಡ ಪ್ರಮಾಣದಲ್ಲಿ ರಾಜರೆಲ್ಲರೂ ಒಗ್ಗೂಡಿ ಯಾರ ಮೇಲೆಯೂ ನುಗ್ಗಿ ಬಂದದ್ದಿಲ್ಲ. ಈ ಸೇನಾ ಸಾಗರದ ಮುಂದೆ ತನಗೆ ಉಳಿಗಾಲವಿಲ್ಲೆಂದು ತಿಳಿದ ಸುದಾಸನು ವಸಿಷ್ಠರ ಆಶ್ರಮಕ್ಕೆ ಬಂದು ಅವರ ಮುಂದೆ ಅಡ್ಡಬಿದ್ದು ಈ ಸಂಕಟದಿಂದ ತನ್ನನ್ನೂ ತನ್ನ ರಾಷ್ಟ್ರವನ್ನೂ ಪಾರುಮಾಡಬೇಕೆಂದು ಬೇಡಿಕೊಂಡ. ದೇಶಕ್ಕೆ ಬಂದ ಈ ಗಂಡಾಂತರವನ್ನು ಕಂಡು ಎದೆ ಕರಗಿದ ಮಹರ್ಷಿಗಳು ಅವನಿಗೆ ಅಭಯದ ಆಶ್ವಾಸನೆ ನೀಡಿದರು. ಅವರು ರಾಜಧಾನಿಗೆ ಬಂದು ಅಂದಿನ ಪರಿಸ್ಥಿತಿಯ ಸೂಕ್ಷ್ಮವಾದ ಅಭ್ಯಾಸಮಾಡಿ ವೈರಿರಾಜರ ಬಲಾಬಲ ಪರೀಕ್ಷೆ ಮಾಡಿದರು.

ಈ ಜಾಗತಿಕ ಯುದ್ಧವು ಪ್ರಾರಂಭವಾಯಿತು. ವೈರಿಗಳ ಅಪರಂಪಾರವಾದ ಸೈನ್ಯ ಸಂಭಾರದ ಮುಂದೆ ಸುದಾಸನ ಬಲವು ಸಿಂಹದ ಎದುರು ಕುರಿ ನರಿಗಳ ಕೂಗಾಟದಂತಿದ್ದಿತು. 'ಸಿಂಹ್ಯಂ ಚಿತ್ ಪೇತ್ವೇನಾ ಜಘಾನ' ಎಂದು ಉಭಯಪಕ್ಷಗಳ ಬಲಾಬಲಗಳ ತುಲನೆ ಮಾಡಿದ್ದು ಋಗ್ವೇದದಲ್ಲಿ ಕಂಡುಬರುತ್ತದೆ.

ವೇದದಲ್ಲಿ ಈ ಯುದ್ಧವೇ ದಾಶರಾಜ್ಞ ಯುದ್ಧವೆಂದು ಪ್ರಸಿದ್ಧವಾಗಿದೆ. ಇದರಲ್ಲಿ ಸುದಾಸನಿಗೆ ಎಳ್ಳಿನರ್ಧದಷ್ಟಾದರೂ ಗೆಲುವಿನ ಆಶೆಯಿದ್ದಿರಲಿಲ್ಲ. ಆದರೂ ವಸಿಷ್ಠರು ಧೈರ್ಯಗೆಡದೆ ತತ್ಕಾಲದಲ್ಲಿಯೇ ಸುದಾಸನ ಕಡೆಯಿಂದ ಸೋಮಯಾಗ

ಮಾಡಿಸಿ ಅದರಿಂದ ಅವನಿಗೆ ದೇವೇಂದ್ರನ ಸಹಾಯ ದೊರಕುವಂತೆ ಮಾಡಿದರು. ಆಗ ಇಂದ್ರನಾದರೂ ಪಾಶುದ್ಯುಮ್ನನ ಯಾಗದಲ್ಲಿ ಸೋಮಪಾನದಲ್ಲಿ ಮಗ್ನನಾಗಿದ್ದನು. ಆಗ ಅವನ ಕಿವಿಗೆ ವಸಿಷ್ಠರ ಮಾಂತ್ರಿಕ ಆವಾಹನೆ ಕೇಳಿದ ಕೂಡಲೇ ಆ ಸೋಮಪಾತ್ರೆಯನ್ನು ಅಲ್ಲಿಯೇ ಒಗೆದು ಸುದಾಸನ ಯಜ್ಞಮಂಟಪಕ್ಕೆ ಧಾವಿಸಿ ಬಂದನು. ಸಾಕ್ಷಾದಿಂದ್ರದೇವನೇ ಬಂದ ಬಳಿಕ ಕೇಳುವದೇನು! ಅವನ ಸಹಾಯದಿಂದ ಸುದಾಸನಿಗೆ ದೈವೀಬಲವೇ ಭೀಮರಕ್ಷೆಯಾಗಿ ಬೆಂಗಾವಲಿಗೆ ನಿಂತುಕೊಂಡಿತು. ಇದರಿಂದ ವೈರಿರಾಜರ ಪ್ರಚಂಡ ಸೇನಾಸಾಗರವೆಲ್ಲ ಛಿನ್ನ ವಿಚ್ಛಿನ್ನವಾಗಿ ಒಡೆದು ಸಿಡಿದು ಸೋತು ಹೋಯಿತು. ಜಯಶ್ರೀ ಸುದಾಸನ ಕೊರಳಿಗೆ ಮಾಲೆ ಹಾಕಿದಳು. 'ಏವೆನ್ನುಕಾ ದಾಶರಾಜ್ಞೇ ಸುದಾಸಂ ಪ್ರಾವದಿಂದ್ರೋ ಬ್ರಹ್ಮಣಾ ವೋ ವಸಿಷ್ಠಾ' (ದಾಶರಾಜ್ಞ ಯುದ್ಧದಲ್ಲಿ ಇಂದ್ರನು ಸುದಾಸನನನ್ನು ರಕ್ಷಿಸಿದ್ದು ವಸಿಷ್ಠರೇ, ನಿಮ್ಮ ಮಂತ್ರದ ಪ್ರಭಾವವೇ ಸರಿ' ಎಂದು ೩೩ನೇ ಸೂಕ್ತದಲ್ಲಿ ವಸಿಷ್ಠರ ಮಂತ್ರಶಕ್ತಿಯನ್ನು ಬಣ್ಣಿಸಿದ್ದಾರೆ.

ಆ ಕಲ್ಪಿತವಾದ ಈ ವಿಜಯದಿಂದ ಸುದಾಸನಿಗೆ ವಸಿಷ್ಠರ ಕರ್ತೃತ್ವ ಹಾಗೂ ತಪಃಶಕ್ತಿಗಳಲ್ಲಿ ವಿಶ್ವಾಸ ಹೆಚ್ಚಾಗಿ ಅವನಿಗೆ ತನ್ನ ಅಶ್ವಮೇಧ ಯಾಗದ ಪುರೋಹಿತರಾದ ವಿಶ್ವಾಮಿತ್ರರ ಮೇಲಿನ ವಿಶ್ವಾಸ ಕಡಿಮೆಯಾಯಿತು.

ಅವನು ವಿಶ್ವಾಮಿತ್ರರ ಕಡೆಯಿಂದ ತನ್ನ ಪೌರೋಹಿತ್ಯವನ್ನು ಕಸಿದುಕೊಂಡು ಈ ಯುದ್ಧ ಪೂರ್ವದಲ್ಲಿಯೇ ವಸಿಷ್ಠರಿಗೆ ಒಪ್ಪಿಗೆ ಅವರನ್ನೇ ತನ್ನ ರಾಜಪುರೋಹಿತರನ್ನಾಗಿ ಮಾಡಿಕೊಂಡಿದ್ದ. ಇದರಿಂದ ವಿಶ್ವಾಮಿತ್ರರ ಪಿತ್ತ ಕೆರಳಿಹೋಯಿತು. ಮೊದಲೇ ವಸಿಷ್ಠ ವಿಶ್ವಾಮಿತ್ರರಲ್ಲಿ ಮನಸ್ತಾಪವಿದ್ದಿತು. ವಿಶ್ವಾಮಿತ್ರರು ರಾಜ್ಯಕೋಶಗಳನ್ನೆಲ್ಲ ಬಿಟ್ಟು ವೈದಿಕ ಬ್ರಾಹ್ಮಣರಾದದ್ದೇ ವಸಿಷ್ಠರ ಮೇಲಿನ ತುರುಸಿನಿಂದ.

ಕೌಶಿಕ ರಾಜನಾಗಿದ್ದಾಗ ವಸಿಷ್ಠರ ಆಶ್ರಮಕ್ಕೆ ಬಂದಿದ್ದನು. ವಸಿಷ್ಠರು ಕಾಮಧೇನುವಿನ ಕೃಪೆಯಿಂದ ಮಹಾರಾಜನ ಚತುರಂಗ ಸೇನಾಪರಿವಾರದವರಿಗೆಲ್ಲ ರಾಜಸತ್ಕಾರವನ್ನು ನೀಡಿದರು. ಇದನ್ನು ಕಂಡು ವಿಶ್ವಾಮಿತ್ರರ ಮನದಲ್ಲಿ ಆ

ಕಾಮಧೇನುವಿನ ಬಗೆಗೆ ಆಶೆ ಮೂಡಿ ಬಾಯಿ ತೆಗೆದು ಅದನ್ನು ತನಗೆ ಕೊಡಬೇಕೆಂದು ಬೇಡಿದರು. ಅವರು ಕೊಡದಾದಾಗ ಬಲಾತ್ಕಾರದಿಂದ ಒಯ್ಯಬೇಕೆಂದರೂ ಬಾರದೆ ಮಹಾಯುದ್ಧವಾಯಿತು. ವಿಶ್ವಾಮಿತ್ರರ ಚತುರಂಗ ಸೇನೆ ಎಲ್ಲ ಅಸ್ತ್ರಶಸ್ತ್ರಗಳೂ ವಸಿಷ್ಠರ ಬ್ರಹ್ಮದಂಡದ ಮುಂದೆ ಸೋತು ತಣ್ಣಗಾದವು. ಆಗ ವಿಶ್ವಾಮಿತರು ''ಧಿಗ್ಬಲಂ ಕ್ಷತ್ರಿಯಬಲಂ ಬ್ರಹ್ಮ ತೇಜೋ ಬಲಂ ಬಲಂ'' ಎಂದಂದು ರಾಜ್ಯ ಐಶ್ವರ್ಯಗಳನ್ನೆಲ್ಲ ಬಿಟ್ಟು ಹತ್ತೆಂಟು ಸಾವಿರ ವರ್ಷ ತಪಸ್ಸು ಮಾಡಿ ಬ್ರಹ್ಮರ್ಷಿ ಪದವಿಗೇರಿದ್ದರು. ಈಗೀಗ ಆ ವಿರಸ ವಿರೋಧಗಳು ತುಸುಮಾಸಿದಂತಾಗಿದ್ದವು. ಆದರೆ ಅಷ್ಟರಲ್ಲಿ ಈ ದಾಶರಾಜ್ಞ ಯುದ್ಧದ ಪ್ರಕರಣದಿಂದ ಆ ಕಿಚ್ಚನ್ನು ಮತ್ತೆ ಕೆದರಿದಂತಾಯಿತು. ಯಾವದಾದರೂ ಒಂದು ಸಂಧಿ ಸಾಧಿಸಿ ವಸಿಷ್ಠರ ಮೇಲೆ ಇದರ ಸೇಡು ತೀರಿಸಿಕೊಳ್ಳಬೇಕೆಂದು ವಿಶ್ವಾಮಿತ್ರರು ಹೊಂಚುಹಾಕುತ್ತಲಿದ್ದರು.

ಮುಂದೆ ಒಮ್ಮೆ ಸುದಾಸನ ಮಕ್ಕಳು ವಸಿಷ್ಠರ ಮಗನಾದ ಶಕ್ತಿಯ ಪೌರೋಹಿತ್ಯದಲ್ಲಿ ಒಂದು ದೊಡ್ಡ ಯಜ್ಞವನ್ನು ಮಾಡತೊಡಗಿದ್ದರು. ಆ ಯಜ್ಞಕ್ಕೆ ವಿಶ್ವಾಮಿತ್ರರೂ ಬಂದು ಶಕ್ತಿ ಋಷಿಯ ಜೊತೆಗೆ ವಾದ ಹೂಡಿದರು. ಶಕ್ತಿಯೂ ಕೂಡ ವಸಿಷ್ಠರ ಮಗನಲ್ಲವೇ! ಜ್ಞಾನ ವಿಜ್ಞಾನಗಳಲ್ಲಿ ಅವನು ವಸಿಷ್ಠರ ಪ್ರತಿರೂಪನೇ ಆಗಿದ್ದ. ಅವನು ತನ್ನ ಪ್ರಚಂಡ ಪಾಂಡಿತ್ಯದಿಂದ ವಿಶ್ವಾಮಿತ್ರರ ವಾದಗಳನ್ನೆಲ್ಲ ಅಕ್ಷರಶಃ ಖಂಡಿಸಿದ. ಅವರ ಬಾಯಿ ಬಂದಾಯಿತು. ''ಶೇಷಂ ಕೋಪೇನ ಪೂರಯೇತ್'' ಎಂಬಂತೆ ಅವಮಾನಿತರಾದ ವಿಶ್ವಾಮಿತ್ರರು ತಲೆಕೆಟ್ಟು ಸಿಕ್ಕಾಪಟ್ಟೆ ವಸಿಷ್ಠ, ಶಕ್ತಿ ಮುಂತಾದವರನ್ನು ಬೈಯ್ಯ ಹತ್ತಿದರು. ವಿತಂಡವಾದ ಹೂಡಿ ಭ್ರಮಿಷ್ಠರಂತೆ ಬಡಬಡಿಸುವ ಈ ಅವಮಾನಿತ ಮಹರ್ಷಿಯಿಂದ ಯಜ್ಞ ಸಾಗದೇ ತಡೆದು ನಿಂತಾಗ ಕೊನೆಗೆ ನಿರ್ವಾಹವಿಲ್ಲದೆ ಅವರನ್ನಲ್ಲಿಂದ ಜುಲುಮೆಯಿಂದ ಹೊರಗೆ ಹಾಕಬೇಕಾಯಿತು.

ಇದರಿಂದ ವಿಶ್ವಾಮಿತ್ರರಿಗೆ ಭಾರೀ ಆಘಾತ ಭಯಂಕರ ಅಪಮಾನವಾದಂತಾಗಿ ಅವರು ಜನರಲ್ಲಿ ಮುಖ ತೋರಿಸದಂತಾಯಿತು. ಅವರು ಅಡವಿಯಲ್ಲಿ ಹುಚ್ಚನಂತೆ ಏಕಾಕಿಯಾಗಿ ಅಲೆದಾಡುತ್ತಿದ್ದರು. ಇದನ್ನು ನೋಡಿ ಜಮದಗ್ನಿ ಋಷಿಗಳಿಗೆ ಕರುಣೆ

ಬಂದಿತು. ಮಹಾಮಹರ್ಷಿಯೊಬ್ಬನು ಈರ್ಷೆಯ ವಶನಾಗಿ ಹೀಗೆ ಭ್ರಮಿಷ್ಟನಂತೆ ತಲೆಕೆಟ್ಟು ತಿರುಗಾಡುವದನ್ನು ಕಂಡು ಅವರಿಗೆ ನಿಜವಾಗಿಯೂ ದುಃಖವಾಯಿತು. ವಿಶ್ವಾಮಿತ್ರರು ಮುಖದ ಮೇಲಿನ ತೇಜಸ್ಸೇ ನಷ್ಟವಾಗಿತ್ತು. ಜಮದಗ್ನಿ ಮಹರ್ಷಿಗಳಿಗಾದರೂ ವೈದಿಕ ಪ್ರಪಂಚದಲ್ಲಿಯ ವಸಿಷ್ಠರ ಈ ಸಾರ್ವಭೌಮಾಧಿ ಕಾರವು ಸಹನವಾಗುತ್ತಿದ್ದಿಲ್ಲ. ಅಂದಿನ ಕಾಲದಲ್ಲಿ ಯಾರೇ ಯಜ್ಞ ಮಾಡಿದರೂ ವಸಿಷ್ಠರೇ ಬ್ರಹ್ಮ ಆಗಬೇಕಾಗುತ್ತಿತ್ತು. ಅವರನ್ನು ಬಿಟ್ಟರೆ ಬೇರಾರಿಗೂ ಯಜ್ಞ ಪ್ರಕ್ರಿಯೆಗಳ ಸರಿಯಾದ ಜ್ಞಾನವಿಲ್ಲವೆಂದೇ ಭಾವಿಸಿಬಿಟ್ಟಿದ್ದರಿಂದ ಎಲ್ಲರೂ ಅವರನ್ನೇ ಕರೆಯುತ್ತಿದ್ದರು.

ಒಮ್ಮೆ ಅಯೋಧ್ಯೆಯ ಅರಸನಾದ ಹರಿಶ್ಚಂದ್ರನು ರಾಜಸೂಯ ಯಾಗಮಾಡಿದಾಗ ವಿಶ್ವಾಮಿತ್ರರೇ ಪುರೋಹಿತರಿದ್ದರು. ಬ್ರಹ್ಮ ಆಗಲಿಕ್ಕೆ ವಸಿಷ್ಠರನ್ನೇ ಕರೆತರಬೇಕೆಂದು ಮಹಾರಾಜನು ಆಗ್ರಹ ಹಿಡಿದಿದ್ದರಿಂದ ಸ್ವತಃ ವಿಶ್ವಾಮಿತ್ರರೇ ಹೋಗಿ ವಸಿಷ್ಠರನ್ನು ಕರೆತಂದು ಬ್ರಹ್ಮನನ್ನು ಮಾಡಿ ಅವರ ಕೈಕೆಳಗೆ ತಾವು ಪುರೋಹಿತರಾಗಿ ಕೆಲಸ ಮಾಡಿದರು. ಆ ಯಜ್ಞದಲ್ಲಿ ಜಮದಗ್ನಿ ಋಷಿಗಳು ಅಧ್ವರ್ಯುಗಳಾಗಿದ್ದರು. ಅವರಿಬ್ಬರೂ ಋಷಿಗಳು ಕೂಡಿ ಈ ಯಜ್ಞದಲ್ಲಿ ವಸಿಷ್ಠರ ಯಾಜ್ಞಿಕ ವಿಧಿ ವಿಧಾನ ಅನುಷ್ಠಾನಗಳನ್ನೆಲ್ಲ ನೋಡಿ ತಿಳಿದುಕೊಂಡು ಮುಂದೆ ತಾವೂ ಅದರಂತೆ ಯಾಗಗಳನ್ನು ಮಾಡಿಸಲಿಕ್ಕೆ ಆರಂಭಿಸಿದರು. ವಸಿಷ್ಠರು ೧೦ ಮಂತ್ರ ಹೇಳುವಲ್ಲಿ ಜಮದಗ್ನಿ ವಿಶ್ವಾಮಿತ್ರರು ೧೫ ಮಂತ್ರ ಹೇಳಿ ಅವರಿಗಿಂತ ನಾವು ಚೆನ್ನಾಗಿ ಯಜ್ಞ ಮಾಡಿಸುತ್ತೇವೆ ಎಂದು ಹೇಳುತ್ತಿದ್ದರು. ಆದರೂ ಜನರಿಗೆ ವಸಿಷ್ಠರ ಮೇಲಿದ್ದ ವಿಶ್ವಾಸ ಬೇರಾರಲ್ಲಿಯೂ ಇರಲಿಲ್ಲ. ಅವರು ವಸಿಷ್ಠರನ್ನೇ ಕರೆದು ಯಜ್ಞ ಮಾಡಿಸುತ್ತಿದ್ದರು. ಇದರಿಂದ ಜಮದಗ್ನಿ ಋಷಿಗಳಿಗೂ ವಸಿಷ್ಠರ ಈ ಜನಪ್ರಿಯತೆಯನ್ನು ಕಂಡು ಅಸೂಯೆ ಅಂಕುರಿತವಾಗಿತ್ತು. ಆದುದರಿಂದ ಅವರು ವಸಿಷ್ಠ ಪ್ರಬಲ ವಿರೋಧಿಯಾದ ವಿಶ್ವಾಮಿತ್ರರನ್ನು ಮತ್ತೆ ಎತ್ತಿ ಕಟ್ಟಬೇಕೆಂಬ ಬುದ್ಧಿಯಿಂದ ಭ್ರಮಿಷ್ಟನಂತಾದ ವಿಶ್ವಾಮಿತ್ರರಿಗೆ ಸಸರ್ಪರೀ ಎಂಬ ವಿದ್ಯೆಯನ್ನು ಉಪದೇಶಿಸಿದರು. ಅದರಿಂದ ವಿಶ್ವಾಮಿತ್ರರು ಸೂರ್ಯನಾರಾಯಣನನ್ನು

ಆರಾಧಿಸಿದರು. ಇದರಿಂದ ಸಂತುಷ್ಟನಾದ ಸವಿತೃದೇವರು ವಿಶ್ವಾಮಿತ್ರರ ಬುದ್ಧಿ ಭ್ರಮಣೆಯನ್ನು ಕಳೆದು ಮತ್ತೆ ಅವರಿಗೆ ಜ್ಞಾನವಿಜ್ಞಾನಗಳೆಲ್ಲ ಪ್ರತಿಭಾತವಾಗಿ ಕಳೆ ಕಾಂತಿ ಆರೋಗ್ಯಗಳೆಲ್ಲ ಮರಳಿ ಅವರಲ್ಲಿ ಕಳಕಳಿಸುವಂತೆ ಮಾಡಿದನು. ಸೂರ್ಯದೇವನ ದಯೆಯಿಂದ ವಿಶ್ವಾಮಿತ್ರರ ತಪೋಜ್ಞಾನ ಶಕ್ತಿಗಳೆಲ್ಲ ಸಾಣೆ ಹಿಡಿದಂತಾಗಿ ಮತ್ತೆ ಪ್ರಜ್ವಲಿಸಹತ್ತಿದವು. ಅವರು ಮತ್ತೆ ತಮ್ಮನ್ನು ಯಜ್ಞ ಮಂಟಪದಿಂದ ಹೊರಗೆ ಹಾಕಿದ ಸುದಾಸನ ಮಕ್ಕಳ ಹತ್ತಿರ ಬಂದರು. ಆ ಸುದಾಸಪುತ್ರರನ್ನೆಲ್ಲ ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡು ಒಂದು ಯಜ್ಞ ಹೂಡಿಸಿದರು. ಆ ಯಜ್ಞಕ್ಕೆ ಕುಲಪುರೋಹಿತರಾದ ಶಕ್ತಿ ಮಹರ್ಷಿಗಳೂ ಬಂದಿದ್ದರು. ವಿಶ್ವಾಮಿತ್ರರು ಮತ್ತೆ ಅವರೊಡನೆ ವಾದ ಹೂಡಿ ಕಲಹ ಬೆಳೆಸಿದರು. ಮಾತಿಗೆ ಮಾತು ಬೆಳೆದಾಗ ಸೇಡಿನ ಭಾವನೆಯಿಂದ ಸಿಡಿಲುಸವಾರಿಯೇರಿದ ವಿಶ್ವಾಮಿತ್ರರು ತಮ್ಮ ವಿರುದ್ಧವಾದಿಸುವ ಆ ಶಕ್ತಿ ಮುನಿಯನ್ನು ಎತ್ತಿ ಅಗ್ನಿಕುಂಡದಲ್ಲಿ ಒಗೆಯುವಂತೆ ಸುದಾಸ ಪುತ್ರರಿಗೆ ಪ್ರೇರಣೆ ನೀಡಿದರು. ಶುಂಭಶಿಷ್ಯರಾದ ಸುದಾಸ ಪುತ್ರರು ಕ್ರೋಧಾಂಧ ಮಹರ್ಷಿಯ ಮಾತು ಕೇಳಿ ಯಜ್ಞಾಗ್ನಿಯಲ್ಲಿ ಓರ್ವ ಬ್ರಹ್ಮರ್ಷಿಯನ್ನೇ ಹೋಮ ಮಾಡಿಬಿಟ್ಟರು.

ರಾಮಾಯಣದಲ್ಲಿ ವಸಿಷ್ಠಪುತ್ರರ ವಿನಾಶದ ಕತೆ ಬೇರೆ ರೀತಿಯಾಗಿ ಬರುತ್ತದೆ.

ಅಯೋಧ್ಯೆಯ ಅರಸು ತ್ರಿಶಂಕು ಮಹಾರಾಜನಿಗೆ ತನ್ನ ಈ ಮನುಷ್ಯ ದೇಹ ಸಹಿತವಾಗಿಯೇ ಸ್ವರ್ಗಕ್ಕೆ ಹೋಗಬೇಕೆಂದು ಇಚ್ಛೆಯಾಯಿತು. ಅದಕ್ಕಾಗಿ ಅವನು ವಸಿಷ್ಠರ ಹತ್ತಿರ ಹೋಗಿ ತನ್ನನ್ನು ಯಜ್ಞ ಮಾಡಿಸಿ ಸದೇಹವಾಗಿಯೇ ಸ್ವರ್ಗಕ್ಕೆ ಕಳಿಸಬೇಕೆಂದು ಕೇಳಿಕೊಂಡ. ಅದಕ್ಕೆ ವಸಿಷ್ಠರು ಸಾಯದೇ ಸ್ವರ್ಗ ಯಾರಿಗೂ ಸಿಗಲಾರದು ಎಂದು ಸ್ಪಷ್ಟವಾಗಿ ಹೇಳಿಬಿಟ್ಟರು. ಆಗ ಅವನು ಶಕ್ತಿಯೇ ಮುಂತಾದ ನೂರು ಜನ ಬ್ರಹ್ಮಜ್ಞಾನಿಗಳಾದ ವಸಿಷ್ಠರ ಮಕ್ಕಳ ಹತ್ತಿರ ಬಂದು ತನ್ನನ್ನು ಶರೀರ ಸಹಿತ ಸ್ವರ್ಗಕ್ಕೆ ಕಳಿಸಬೇಕೆಂದು ಬೇಡಿಕೊಂಡನು. ಅವರೂ ಇದು ಸಾಧ್ಯವಿಲ್ಲವೆಂದರು. ಆಗ ಅವನು ಹಾಗಾದರೆ ನಾನು ಬೇರೆ ಗುರುವಿನ ಕಡೆಗೆ ಹೋಗುತ್ತೇನೆಂದಾಗ ಅವರಿಗೆ ಸಿಟ್ಟು ಬಂದು ನಿನ್ನ ಕುಲಗುರುವನ್ನು ತ್ಯಾಗಮಾಡಿ

ಅನ್ಯ ಗುರುವಿನ ಕಡೆ ಹೊರಟ ನೀನು ಚಂಡಾಲನಾಗು ಎಂದು ಶಾಪಕೊಟ್ಟರು. ಅದರಂತೆ ಅವನು ಹೊಲೆಯನಾದ. ಆದರೂ ಸದೇಹ ಸ್ವರ್ಗಕ್ಕೆ ಹೋಗುವ ಅವನ ಹುಚ್ಚು ಇನ್ನೂ ಬಿಟ್ಟಿರಲಿಲ್ಲ. ಅವನು ನೇರವಾಗಿ ವಿಶ್ವಾಮಿತ್ರರ ಆಶ್ರಮಕ್ಕೆ ಬಂದು ನಡೆದ ಸಂಗತಿಯನ್ನೆಲ್ಲ ತಿಳಿಸಿದ. ವಸಿಷ್ಠರ ಮೇಲಿನ ಹುರುಡಿನಿಂದ ವಿಶ್ವಾಮಿತ್ರರು ಆ ಕಾರ್ಯ ಕೈಕೊಂಡರು. ತ್ರಿಶಂಕುವಿನ ಕಡೆಯಿಂದ ದೊಡ್ಡದಾದ ಒಂದು ಯಜ್ಞ ಮಾಡಿಸಿ ಎಲ್ಲ ಋಷಿಗಳಿಗೂ ಆಹ್ವಾನ ಕಳಿಸಿದರು. ವಿಶ್ವಾಮಿತ್ರರ ಶಾಪ ಭಯದಿಂದ ಮನಸ್ಸಿಲ್ಲದಿದ್ದರೂ ಮುನಿಗಳೆಲ್ಲರೂ ಆ ಯಜ್ಞಕ್ಕೆ ಬಂದರು. ಆದರೆ ವಸಿಷ್ಠರು ಬರಲಿಲ್ಲ. ಅವರ ಮಕ್ಕಳಂತೂ ಕರೆಯಲಿಕ್ಕೆ ಬಂದವರ ಎದುರಿಗೆ ನಕ್ಕು ಹೊಲೆಯ ಯಜಮಾನ ಕ್ಷತ್ರಿಯ ಪುರೋಹಿತ. ಇಂಥ ಯಜ್ಞಕ್ಕೆ ನಮ್ಮಂಥ ಬ್ರಾಹ್ಮಣರೇಕೆ ಬೇಕು! ಅಲ್ಲಿ ಯಾವ ದೇವತೆಗಳು ಬಂದಾರು! ಮುಂತಾಗಿ ನುಡಿದು ತಾವು ಬರುವುದಿಲ್ಲವೆಂದು ಹೇಳಿ ಕಳಿಸಿದರು. ಅದನ್ನು ಕೇಳಿ ತಿಳಿದು ತಪ್ತರಾದ ವಿಶ್ವಾಮಿತ್ರರು ಈ ವಸಿಷ್ಠ ಕುಲವನ್ನೇ ವಿಧ್ವಂಸಗೈಯ್ಯಬೇಕೆಂದು ಸಂಕಲ್ಪಿಸಿ ಶಾಪಕೊಟ್ಟು ಬಿಟ್ಟರು. ಅದರಿಂದ ವಸಿಷ್ಠರ ನೂರು ಮಂದಿ ಮಕ್ಕಳು ಸತ್ತುಹೋದರು.

ಇಷ್ಟಾದರೂ ಬ್ರಹ್ಮರ್ಷಿಗಳಾದ ವಸಿಷ್ಠರು ಸಿಟ್ಟಿಗೇಳಲಿಲ್ಲ. ಪ್ರತಿ ಶಾಪ ಕೊಡಲಿಲ್ಲ. ವಿಶ್ವಾಮಿತ್ರರಿಗೆ ಅಕಲ್ಯಾಣವನ್ನು ಚಿಂತಿಸಲಿಲ್ಲ. ಇದರಲ್ಲಿಯೇ ವಸಿಷ್ಠರ ಹಿರಿಮೆ ಅಡಗಿದೆ. ಅವರಂಥ ಸಂಯಮಿಗಳನ್ನು ನಾವು ಯಾವ ಸಾಹಿತ್ಯದಲ್ಲಿಯೂ ಕಾಣೆವು.

ಒಂದುದಿನ ವಿಶ್ವಾಮಿತ್ರರು ಅವರನ್ನೂ ಕೊಂದು ಬಿಡಬೇಕೆಂದು ಅವರ ಗುಡಿಸಲಿನ ಹಿಂದೆ ಹೊಂಚು ಹಾಕಿಕೊಂಡು ಕುಳಿತಾಗ ಅರುಂಧತೀದೇವಿಯು ನಿಜವಾದ ಬ್ರಹ್ಮರ್ಷಿ ಯಾರು ಎಂದು ಪತಿಗೆ ಕೇಳಿದಳಂತೆ. ಆದಕ್ಕೆ ವಸಿಷ್ಠರು ಶಾಂತ ಮತ್ತು ಖಚಿತವಾದ ಸ್ವರದಲ್ಲಿ ಮಹರ್ಷಿ ವಿಶ್ವಾಮಿತ್ರರು ಎಂದು ಉತ್ತರ ಕೊಟ್ಟರಂತೆ. ಇದನ್ನು ಹೊರಗೆ ಅಡಗಿ ಕುಳಿತು ಕೇಳಿದ ವಿಶ್ವಾಮಿತ್ರರಿಗೆ ಪಶ್ಚಾತ್ತಾಪವಾಗಿ ಒಳಗೆ ಬಂದು ಆ ಮುನಿ ಪಾದಕ್ಕೆ ಬಿದ್ದು ತಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ಬೇಡಿಕೊಂಡರಂತೆ. ಮುಂದೆ ವಸಿಷ್ಠ ವಿಶ್ವಾಮಿತ್ರರಲ್ಲಿ

ಸಖ್ಯವೇರ್ಪಟ್ಟಿತು. ಆದುದರಿಂದಲೇ ವಿಶ್ವಾಮಿತ್ರರು ರಾಮನನ್ನು ಕಳಿಸಿಕೊಡಬೇಕೆಂದು ಕೇಳಲಿಕ್ಕೆ ಬಂದಾಗ ವಸಿಷ್ಠರು ವಿಶ್ವಾಮಿತ್ರರ ಕೇಳಿಕೆಗೆ ಬೆಂಬಲವಿತ್ತು ರಾಮ ಲಕ್ಷ್ಮಣರನ್ನು ಕಳಿಸಿಕೊಡಲಿಕ್ಕೆ ಹೇಳಿದರು.

ಮುಂದೆ ಅವರಿಬ್ಬರಲ್ಲಿ ಎಷ್ಟೇ ಸ್ನೇಹ ಸಂಬಂಧ ಕುದುರಿದರೂ ಪುತ್ರಶೋಕವು ಮಾತ್ರ ಬಹುಕಾಲ ವಸಿಷ್ಠರನ್ನು ಹಣ್ಣುಮಾಡಿತು. ನೂರು ಮಕ್ಕಳ ಮರಣದ ಘೋರ ದುಃಖವನ್ನು ತಾಳಲಾರದೆ ವಸಿಷ್ಠರು ತಮ್ಮ ಮೈಗೆ ಕಲ್ಲನ್ನು ಕಟ್ಟಿಕೊಂಡು ನದಿಯಲ್ಲಿ ಪ್ರಾಣ ಕೊಡಬೇಕೆಂದು ಮುಳುಗಿಬಿಟ್ಟರು.

ಆದರೆ ಆ ನದಿಯು ಇಂಥ ಬ್ರಹ್ಮಜ್ಞಾನಿ ಮಹಾಪುರುಷನು ತನ್ನ ಮಡುವಿನಲ್ಲಿ ಮುಳುಗಿ ಸತ್ತರೆ ತನಗೆಂಥ ಪಾತಕ! ಅಪಕೀರ್ತಿ! ಎಂದು ಗಾಬರಿಯಾಗಿ ತನ್ನ ತೆರೆಯ ಬೆರಳುಗಳಿಂದ ಅವರು ತಾವಾಗಿ ಮೈಗೆ ಕಟ್ಟಿಕೊಂಡ ಹಗ್ಗದ ಪಾಶಗಳನ್ನೆಲ್ಲ ಬಿಚ್ಚಿ ಅವರನ್ನು ತನ್ನ ತರಂಗದ ತೋಳುಗಳಲ್ಲಿ ತಕ್ಕೈಸಿ ತೀರಕ್ಕೆ ತಂದಿಳಿಸಿತಂತೆ. ಇದರಿಂದ ಆ ನದಿಗೆ ಇಂದಿಗೂ ವಿಪಾಶಾ ಎಂದು ಹೆಸರು ಬಂದಿತೆಂದು ಮಹಾಭಾರತದ ವನಪರ್ವದಲ್ಲಿ ಕಥೆ ಬರುತ್ತದೆ. ಈ ವಿಪಾಶಾ ನದಿಯಲ್ಲಿ ವಸಿಷ್ಠ ಶಿಲಾ ಕೃಷ್ಣಶಿಲಾ ಎಂಬ ಎರಡು ಆಶ್ರಮಗಳಿರುತ್ತದೆ. ಇಲ್ಲಿಯೇ ನಿಂತು ವಸಿಷ್ಠರು ತಪಶ್ಚರ್ಯ ಮಾಡುತ್ತಿದ್ದರು. ಹಿಮಾಲಯ ಪರ್ವತದಲ್ಲಿ ವಸಿಷ್ಠಾಶ್ರಮವೆಂಬ ಸ್ಥಾನವಿದೆ. ಸ್ವಾಮೀರಾಮತೀರ್ಥರು ಅಲ್ಲಿಯೇ ತಪಸ್ಸನ್ನು ಮಾಡಿದರು.

ಈ ವಸಿಷ್ಠರ ಮಹಿಮೆ ಸೂರ್ಯನಂತೆ ಸ್ಪಷ್ಟ, ಸಮುದ್ರದಂತೆ ಅಗಾಧವಿದ್ದವು, ಮತ್ತು ಅವರ ಮಂತ್ರ ಸಮುದಾಯಗಳು ವಾಯುವಿನಂತೆ ಅನುಸರಣ ಮಾಡಲಿಕ್ಕೆ ಅಶಕ್ಯವಾದಂಥವುಗಳಾಗಿದ್ದವು. ಇದನ್ನು ಋಗ್ವೇದದಲ್ಲಿಯೇ-

'ಸೂರ್ಯಸ್ಯೇವ ವಕ್ಷಥೋ ಜ್ಯೋತಿರೇಷಾಂ ಸಮುದ್ರಸ್ಯೇವ ಮಹಿಮಾ ಗಭೀರಃ। ವಾತಸ್ಯೇವ ಪ್ರಜವೋ ನಾನ್ಯೇನಸ್ತೋಮೋ ವಸಿಷ್ಠಾ ಅನ್ವೇ ತವೇವಃ॥ ಎಂದು ಮುಂತಾದ ಸೂಕ್ತಗಳಿಂದ ವಿವರಿಸಿದ್ದಾರೆ.

ಅವರ ಸತ್ಯನಿಷ್ಠೆ ಹಾಗೂ ಮಾತೃಭೂಮಿಯ ಪ್ರೇಮಗಳು ಅನ್ಯಾದೃಶವಾಗಿದ್ದವು. ಅವರಿಗೆ ಯಾವ ಲೌಕಿಕ ಸುಖ ಸೌಕರ್ಯಗಳ ಆಶೆಯೂ ಇರಲಿಲ್ಲ. ರಾಷ್ಟ್ರಕ್ಕೆ

ಗಂಡಾಂತರ ಬಂದಾಗ ಮಾತ್ರ ಅವರು ದೇಶರಕ್ಷಣೆಗೆ ಎಲ್ಲವನ್ನು ಬಿಟ್ಟು ಮುಂದೆ ಬಂದು ನಿಲ್ಲುತ್ತಿದ್ದರು.

ಇಕ್ಷ್ವಾಕುವಂಶದ ಪೌರೋಹಿತ್ಯವನ್ನು ವಹಿಸಬೇಕು ಎಂದು ಮಹಾದೇವರು ಅವರನ್ನು ಕೇಳಿಕೊಂಡಾಗ ಅವರು ತಮಗೆ ಯಾರ ಪೌರೋಹಿತ್ಯವೂ ಬೇಡವೆಂದು ಸ್ಪಷ್ಟವಾಗಿ ಹೇಳಿಬಿಟ್ಟರು. ಆದಕ್ಕೆ ಪರಶಿವನು ಈ ವಂಶದಲ್ಲಿ ಮುಂದೆ ಸಾಕ್ಷಾದ್ವಿಷ್ಣುವೇ ಅವತಾರ ಮಾಡಲಿದ್ದುದರಿಂದ ನಿಮಗೆ ಅವನ ಸೇವಾ ಭಾಗ್ಯ ದೊರಕುವದೆಂದಾಗ ಅವರು ರಾಜಕಾರಣದ ಬಗ್ಗೆ ಮಾರ್ಮಿಕವಾದ ವಿವೇಚನೆಯನ್ನು ಮಾಡಿದ್ದು ಕಂಡುಬರುತ್ತದೆ.

ವಸಿಷ್ಠರು ಬಣ್ಣದಿಂದ ಬೆಳ್ಳಗಿದ್ದು ಅವರ ತಲೆಯ ಬಲಬದಿಗೆ ಚಂಡಿಕೆ ಶೋಭಿಸುತ್ತಿತ್ತು ಎಂದು ಋಗ್ವೇದದಲ್ಲಿ ಶ್ವಿತ್ಯಂಚ ದಕ್ಷಿತಸ್ಕಪರ್ದಾಃ ಮುಂತಾದ ವಿಶೇಷಗಳಿಂದ ತಿಳಿದುಬರುತ್ತದೆ. ಮಂತ್ರವಿದ್ದ ಮತ್ತು ಯಾಜ್ಞಿಕಕರ್ಮ ಎರಡರಲ್ಲಿಯೂ ಅವರಿಗೆ ಸವ್ಯಸಾಚಿಯಂತೆ ಪಾಂಡಿತ್ಯವಿದ್ದಿತು. ಅವರ ಈ ಜ್ಞಾನ ಕರ್ಮಗಳಲ್ಲಿಯ ಉಭಯ ವೈಶಾರದ್ಯವನ್ನು ಅನುಲಕ್ಷಿಸಿ ಅವರಿಗೆ ದ್ವಿಬರ್ಹಾಃ ಎಂದು ಕರೆಯಲಾಗುತ್ತಿತ್ತು. ಅವರ ಹತ್ತಿರ ಯಾವಾಗಲೂ ಸಾವಿರಾರು ಆಕಳುಗಳಿರುತ್ತಿದ್ದವು. 'ಶತಸಾಃ ಸಂಸಹಸ್ರಮ್'.

ಅಂದಿನವರೆಗೆ ಯಾರಿಗೂ ಕಾಣದ ಪರವೈಶ್ವರ್ಯಶಾಲಿಯಾದ ಪರಮಾತ್ಮನನ್ನು ವಸಿಷ್ಠರು ತಮ್ಮ ಅತ್ಯುಗ್ರವಾದ ತಪಶ್ಚರ್ಯದಿಂದ ಆರಾಧಿಸಿ ಪ್ರಸನ್ನೀಕರಿಸಿಗೊಂಡು ಪ್ರತ್ಯಕ್ಷ ಕಂಡಿದ್ದರು.

'ಅದೃಶ್ಯಮೃಷಿಭಿರ್ಹೀಂದ್ರಂಸೋ(ವಸಿಷ್ಠಃ)ಽಪಶ್ಯತ್ತಪಸಾ ಪುರಾ' ಎಂದು ಬ್ರಹ್ಮದ್ದೇವತೆಯಲ್ಲಿ ಸ್ಪಷ್ಟ ಉಲ್ಲೇಖವಿರುತ್ತದೆ.

ಜರೂಥನೆಂಬ ದೈತ್ಯನು ವಸಿಷ್ಠರ ಯಜ್ಞಯಾಗಗಳಿಗೂ ತಪೋನುಷ್ಠಾನಕ್ಕೂ ಆಗಾಗ ವಿಘ್ನವುಂಟು ಮಾಡುತ್ತಿದ್ದನು. ಆಗ ವಸಿಷ್ಠರು ಅಗ್ನಿಯನ್ನು ಸ್ತುತಿಸಿ ಒಲಿಸಿಕೊಂಡು ಅಗ್ನಿದ್ವಾರಾ ಆ ಅಸುರನ ನಿಗ್ರಹ ಮಾಡಿಸಿದರು.

ವಸಿಷ್ಠರ ಹರಿಸರ್ವೋತ್ತಮತ್ವ ಜ್ಞಾನವು ಅತ್ಯಂತ ಸುದೃಢವಾಗಿದ್ದು ಅವರ ಭಗವದ್ಭಕ್ತಿ ಅಗಾಧವಾಗಿದ್ದಿತು. ಬ್ರಹ್ಮಾದಿದೇವತೆಗಳೆಲ್ಲರೂ ಶ್ರೀಹರಿ ದಾಸರೇ ಆಗಿದ್ದು ಆ ದೇವತೆಗಳಲ್ಲಿ ನಿಂತು ಶ್ರೀಹರಿಯೇ ಸೃಷ್ಟಿಸ್ಥಿತ್ಯಾದಿಗಳನ್ನು ಮಾಡುತ್ತಾನೆಂದು ನಂಬಿ ಸೂರ್ಯ ಇಂದ್ರ ಬ್ರಹ್ಮಾದಿ ದೇವತೆಗಳಲ್ಲಿ ತತ್ತಚ್ಛಬ್ದವಾಚ್ಯವಾದ ಭಗವತ್ ರೂಪಗಳನ್ನೇ ಅವರು ಉಪಾಸಿಸುತ್ತಿದ್ದರು ಎಂಬ ಮಾತು ಧಾತುರ್ದ್ಯುತಾನಾತ್ ಸವಿತುಶ್ಚ ವಿಷ್ಣೋರಥಂತರ ಮಾಜ ಭಾವಾ ವಸಿಷ್ಠಃ ಎಂಬ ಸೂಕ್ತಾರ್ಥದ ತಾತ್ಪರ್ಯವನ್ನು ಗಮನಿಸಿದಾಗ ಸ್ಪಷ್ಟವಾಗುತ್ತದೆ.

ಶ್ರೀಹರಿಯ ಕಿಂಕರರೆಂದು ಅವರು ದೇವತೆಗಳನ್ನು ಸ್ತುತಿಸುತ್ತಿದ್ದುದರಿಂದಲೇ ಇಂದ್ರ, ವರುಣ ಮುಂತಾದ ದೇವತೆಗಳೆಲ್ಲ ಅವರ ಮೇಲೆ ಸರ್ವದಾ ಪ್ರೀತಿ ಪ್ರಸನ್ನರಾಗುತ್ತಿದ್ದರು.

ಒಮ್ಮೆ ಅವರು ತಮ್ಮ ಒಂದು ಲಹರಿಯಲ್ಲಿ ವರುಣಾಂತರ್ಯಾಮಿಯಾದ ವರುಣ ನಾಮಕ ಪರಮಾತ್ಮನ ಮಹಿಮೆಯನ್ನು ಅನುಸಂಧಾನಕ್ಕೆ ತಂದುಕೊಂಡು ವರುಣ ಗಾಥೆಯನ್ನು ಹೇಳಿದಾಗ ವರುಣ ದೇವರಿಗೆ ಅತ್ಯಂತ ಸಂತೋಷವಾಗಿ ಅವನು ಇವರಿದ್ದಲ್ಲಿಗೆ ಬಂದನು ಮತ್ತು ಅವರ ಅನುಸಂಧಾನವನ್ನು ಅಭಿನಂದಿಸಿ ಅವರನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಒಂದು ಸುಂದರ ನೌಕೆಯಲ್ಲಿ ಕುಳ್ಳಿರಿಸಿಕೊಂಡು ಸಮುದ್ರದಲ್ಲಿ ನೌಕಾವಿಹಾರ ಮಾಡಿದನಂತೆ.

ಸಮುದ್ರ ತರಂಗಗಳ ಮೇಲೆ ಜೋಕಾಲಿ ಮಾಡುವ ಆ ವರುಣ ನೌಕೆಯಲ್ಲಿ ವಸಿಷ್ಠ ವರುಣರಿಬ್ಬರೂ ಕುಳಿತುಕೊಂಡು ಭಗವನ್ಮಹಿಮೆಯನ್ನು ಕೊಂಡಾಡುತ್ತ ಅದೇ ಹರಟೆ ಹೊಡೆಯುತ್ತ ವೇದಾಂತ ವಿನೋದ ಮಾಡಿದರೆಂಬ ಭಾವವು 'ಆಯದ್ ರು ಹಾವ ವರುಣಶ್ಚ ನಾವಂ ಪ್ರಯತ್ ಸಮುದ್ರ ಮೀರಯಾವ ಮಧ್ಯಮ್' ಮುಂತಾದ ಋಕ್ಕುಗಳಲ್ಲಿ ಸೂಚಿತವಾಗಿದೆ. ಇದೇ ರೀತಿಯಿಂದ ಅಗ್ನಿ, ಇಂದ್ರ, ಧಾತು, ಸವಿತಾ ಮುಂತಾದ ಭಗವತ್ಪರಿವಾರಭೂತರಾದ ಎಲ್ಲ ದೇವಾದಿದೇವತೆಗಳನ್ನೂ ಒಲಿಸಿಕೊಂಡು ವಸಿಷ್ಠರು ಅವರ ಕೃಪೆಯನ್ನೆಲ್ಲ ಜಗತ್ತಿನ ಕ್ಷೇಮಕ್ಕಾಗಿ ಉಪಯೋಗವಾಗುವಂತೆ ಮಾಡುತ್ತಿದ್ದರು.

ಇಷ್ಟೆಲ್ಲ ಮಹಾಮಹಿಮಾಶಾಲಿಗಳಾದ ವಸಿಷ್ಠರು ತಮ್ಮಷ್ಟಕ್ಕೆ ತಾವು ಉದ್ಧೃತರಾಗದೇ ಅಥವಾ ತಮ್ಮ ಸಮಕಾಲೀನ ಜನರನ್ನು ಮಾತ್ರ ಉದ್ಧರಿಸದೆ ಮಾನವ ಕುಲ ಕೋಟಿಯೇ ಎಂದಿಗಾದರೂ ಮುಂದುವರೆಯಬೇಕು ಎಂದು ಅನೇಕ ಗ್ರಂಥಗಳನ್ನು ಬರೆದಿಟ್ಟಿದ್ದಾರೆ. ಅವುಗಳಲ್ಲಿ ವಸಿಷ್ಠ ಧರ್ಮಸೂತ್ರ, ಯೋಗವಾಸಿಷ್ಠ, ವಸಿಷ್ಠ ಸ್ಮೃತಿ, ವಸಿಷ್ಠ ಕಲ್ಪ, ವಸಿಷ್ಠ ತಂತ್ರ, ವಸಿಷ್ಠ ಪುರಾಣ, ವಸಿಷ್ಠಲಿಂಗ ಪುರಾಣ, ವಸಿಷ್ಠ ಶಿಕ್ಷಾ, ವಸಿಷ್ಠ ಸಂಹಿತಾ, ವಾಸಿಷ್ಠ ಹೋಮಪ್ರಕಾರ ಮುಂತಾದ ಗ್ರಂಥಗಳು ಪ್ರಧಾನವಾಗಿವೆ. ಇವಲ್ಲದೆ ಜ್ಯೋತಿರ್ವಸಿಷ್ಠ ವಾಸ್ತುವಸಿಷ್ಠ ಮುಂತಾದ ಗ್ರಂಥಗಳೂ ಕೇಳಿಬರುತ್ತವೆ. ವಸಿಷ್ಠಗೋತ್ರಪ್ರವರ್ತಕ ಬ್ರಹರ್ಷಿಗಳು ವಸಿಷ್ಠರಾಗಿದ್ದಾರೆ. ಮಂತ್ರದ್ರಷ್ಟಾರರಾದ ಮುನಿಗಳಲ್ಲಿ ಗರಿಷ್ಠರಾಗಿದ್ದಾರೆ. ಅವರ ವಂಶದಲ್ಲಿಯೂ ಮುಂದೆ ಎಷ್ಟೋ ಗೋತ್ರ ಪ್ರವರ್ತಕರಾದ ಮುನಿಮಹರ್ಷಿಗಳು ಜನಿಸಿದ್ದಾರೆಂತಲೇ ವಸಿಷ್ಠ ಗೋತ್ರದವರಿಗೆ ವಿಶಿಷ್ಟಮಾನಮರ್ಯಾದೆಗಳುಂಟು.

ವಸಿಷ್ಠರ ಮಂತ್ರಗಳನ್ನೆಲ್ಲ ಪರಿಶೀಲಿಸಿದಾಗ ನಮಗೆ ಅವರ ಸ್ಫೂರ್ತಿದಾಯಕ ಸಂದೇಶವು ತಿಳಿದುಬರುವದು. ಮನುಷ್ಯನು ಸತ್ಯವ್ರತನಾಗಬೇಕು. ಈ ಸತ್ಯನಿಷ್ಠೆಯಿಂದ ಮಿಥ್ಯಾವಾದ, ಕಪಟ, ಅನ್ಯಾಯುಗಳೆಲ್ಲ ತಮ್ಮಷ್ಟಕ್ಕೆ ತಾವೇ ದೂರವಾಗಿ ಹೋಗುತ್ತವೆ. ಮಾನವರು ಹೊರಗಿನ ವೈರಿಗಳನ್ನು ಗೆಲ್ಲುವದಕ್ಕಿಂತ ಮೊದಲು ಅಂತಃ ಶತ್ರುಗಳನ್ನು ಕಾಮಕ್ರೋದಾಧಿಗಳನ್ನು ಗೆಲ್ಲಬೇಕು. ಸದ್ಬುದ್ಧಿಯಿಂದ ಪ್ರತಿಯೊಬ್ಬ ಮಾನವನೂ ತನ್ನ ದುರ್ಬುದ್ಧಿ ದುರ್ವಾಸನೆಗಳನ್ನು ಕಳೆದುಕೊಂಡು ತನ್ನಲ್ಲಿ ದೇವಸ್ವಭಾವ ಅರಳುವಂತೆ ಪ್ರಯತ್ನಿಸಬೇಕು. ಮನುಷ್ಯರು ಪೂಜಿಸಬೇಕಾದ ದೇವತೆಗಳು ಮೂರು. ಮಾತೃಭೂಮಿ, ಮಾತೃಭಾಷೆ, ಮಾತೃ ಸಂಸ್ಕೃತಿ ಈ ತ್ರಿಮೂರ್ತಿಗಳ ಸತ್ಯೋಪಾಸನೆಯಿಂದಲೇ ರಾಷ್ಟ್ರೋದ್ಧಾರವಾಗುವುದು ಎಂದು ಅವರು ತಮ್ಮ ನೂರಾರು ಸೂಕ್ತ ಮಂತ್ರಗಳಲ್ಲಿ ದಿವ್ಯ ಸಂದೇಶ ನೀಡಿದ್ದಾರೆ. ಅದರಂತೆ ನಡೆದು ಜಗತ್ತಿಗಾದರ್ಶರಾಗಿದ್ದಾರೆ. ಆದುದರಿಂದಲೇ ಅವರು ತಮ್ಮ ಧರ್ಮಪತ್ನಿ ಅರುಂಧತಿಯೊಂದಿಗೆ ನಕ್ಷತ್ರಸ್ಥಾನದಲ್ಲಿದ್ದು ನಿರಂತರ ಮಾರ್ಗದರ್ಶಿ ಮಹರ್ಷಿಗಳಾಗಿದ್ದಾರೆ.

★ ★ ★ ★

# ಆಂಗಿರಸ

ಅಥರ್ವವೇದದ ಪ್ರವರ್ತಕ ಮಹರ್ಷಿಯೆಂದರೆ ಆಂಗಿರಸ. ಆಂಗಿರಸ ಕುಲದಲ್ಲಿ ಜನಿಸಿದ ಋಷಿಗಳು ಒಂದು ಮಹಾ ಸತ್ರವನ್ನು ಮಾಡಿದರು. ಯಜ್ಞಾನುಷ್ಠಾನಕ್ಕೆ ಹವ್ಯಗವ್ಯವನ್ನು ಒದಗಿಸಲಿಕೆಂದು ಆಂಗಿರಸ ಮುನಿಯು ಒಂದು ಹಸುವನ್ನು ಸಾಕಿದನು. ಅದರ ಬಣ್ಣವು ಹಂಸದಂತೆ ಬೆಳ್ಳಗಿದ್ದಿತು.

ಒಮ್ಮೆ ದೇಶದಲ್ಲಿ ದುರ್ಭಿಕ್ಷದಿಂದ ಮಳೆಯೇ ಇಲ್ಲದಂತಾಗಿ ಆಂಗಿರಸರ ಆಕಳಿಗೆ ತಿನ್ನಲಿಕ್ಕೆ ಹುಲ್ಲೇ ಇಲ್ಲದಂತಾಯಿತು. ಯಜ್ಞದಲ್ಲಿ ಕುಟ್ಟಿದ ಸೋಮಬಳ್ಳಿಯ ಸಿಪ್ಪೆಯನ್ನೇ ಜಗಿದೇ ಅದು ಹೇಗೋ ಜೀವ ಹಿಡಿದುಕೊಂಡು ಬದುಕಿದ್ದಿತು. ಆ ಮೂಕಪ್ರಾಣಿಯ ಹಸಿವೆಯ ಕಸಿವಿಸಿಯನ್ನು ಆಂಗಿರಸ ಮುನಿಗಳಿಂದ ನೋಡಲಿಕ್ಕಾಗಲಿಲ್ಲ.

'ಒಂದು ಹಸುವಿನ ಹಸಿವೆಯನ್ನು ಹಿಂಗಿಸುವಷ್ಟು ಹಿಡಿಹುಲ್ಲನ್ನೂ ಕೂಡ ಹುಟ್ಟಿಸುವ ಶಕ್ತಿ ಅಥವಾ ತಪೋಬಲವಿಲ್ಲದ ಬಳಿಕ ನಾವು ಈ ಸತ್ರವನ್ನು ಪ್ರಾರಂಭಿಸಿದ್ದಾದರೂ ಏಕೆ' ಎಂಬ ಚಿಂತೆಯು ಅವರನ್ನು ಒಳಗಿಂದೊಳಗೆ ಹಣ್ಣು ಮಾಡಹತ್ತಿತ್ತು.

ಕೊನೆಗೆ ಆಂಗಿರಸರು 'ಕಾರೀರಿ' ಯಾಗವನ್ನು ಮಾಡಿದರು. ಅದರಿಂದ ಒಮ್ಮೆಲೆ ಮಳೆ ಸುರಿದು ಎಲ್ಲ ಕಡೆಗೂ ಹಚ್ಚ ಹಸಿರು ಮುರಿಯ ಹತ್ತಿತು. ಹಸುಗಳೆಲ್ಲವೂ ಆನಂದದಿಂದ ಹಸಿ ಹುಲ್ಲು ಮೇದು ತಿರುಗಾಡಹತ್ತಿದವು.

ಆದರೆ ಪಿತೃಗಳು ಇದನ್ನು ಕಂಡು ಹುಲ್ಲಿನಲ್ಲೆಲ್ಲ ವಿಷ ಬೆರಿಸಿಬಿಟ್ಟರು. ಆಗ ಬುದ್ಧಿವಂತರಾದ ಆಂಗಿರಸರು ತಾವು ಯಜ್ಞ ಮಾಡಿ ಅದರಲ್ಲಿ ಪಿತೃಗಳಿಗೂ ಆಹುತಿಕೊಡಲು ಪ್ರಾರಂಭಿಸಿದರು. ಆಗ ಬೇಕಾದಷ್ಟು ಮಳೆ ಬೆಳೆ ಆಗಿ ಎಲ್ಲ ಕಡೆಗೂ ಹುಲ್ಲು ಚೆಲ್ವರಿಯಿತು. ಅದನ್ನು ತಿಂದು ಹಸುಗಳು ಹತ್ತು ಪಟ್ಟು ಹೆಚ್ಚಿಗೆ ಹಾಲು ಕರೆಯುತ್ತಿದ್ದವು. ಈ ಆಂಗಿರಸರೇ ದ್ವಿರಾತ್ರಯಾಗವನ್ನು ಮೊಟ್ಟ ಮೊದಲಿಗೆ ಪ್ರಾರಂಭಿಸಿದ ಪುಣ್ಯಾತ್ಮರು. ಆಂಗಿರಸರು ರಥೀತರನ ಸ್ತ್ರೀಯರಲ್ಲಿ ಉತ್ಪಾದನೆ ಮಾಡಿದ ಬ್ರಹ್ಮಕ್ಷತ್ರಿಯ ಸಂತತಿಗೇ 'ಆಂಗಿರಸ' ಎಂದು ಕರೆಯತೊಡಗಿದರು.

# ಕಕ್ಷೀವಂತ

ಕಕ್ಷೀವಂತನು ದೀರ್ಘತಮ ಮಹರ್ಷಿಗಳ ಮಗ. ಈತನ ಕಥೆಯು ಭಾರತದ ಸಭಾಪರ್ವ ಮತ್ತು ಸ್ಕಾಂದ ಪುರಾಣದಲ್ಲಿದೆ. ಕಳಿಂಗ ದೇಶದ ರಾಜನಾದ ಬಲಿಯೆಂಬವನಿಗೆ ಮಕ್ಕಳಿರಲಿಲ್ಲ. ಆತನ ರಾಜ್ಯಕ್ಕೆ ಉತ್ತರಾಧಿಕಾರಿಗಳಿಲ್ಲದ ಕಾರಣ ರಾಜನು ದೀರ್ಘತಮ ಮಹರ್ಷಿಗಳಿಂದ ಸಂತಾನದ ಅನುಗ್ರಹವನ್ನು ಪಡೆಯಲು ನಿರ್ಧರಿಸಿದನು. ಆ ಕಾಲದಲ್ಲಿ ಋಷಿಗಳಿಂದ ಸಂತಾನವನ್ನು ಯೋಗ್ಯವೆಂದು ಪರಿಗಣಿಸಲ್ಪಟ್ಟಿತ್ತು. ರಾಜನು ದೀರ್ಘತಮ ಮಹರ್ಷಿಗಳನ್ನು ಅರಮನೆಗೆ ಬರಮಾಡಿಕೊಂಡನು. ತನ್ನ ಪಟ್ಟದ ರಾಣಿಯಾದ ಸುದೇಷ್ಣೆಯಲ್ಲಿ ಈ ವಿಷಯವನ್ನು ಅರುಹಿದನು. ಒಪ್ಪಿದ ರಾಣಿಯು ದೀರ್ಘತಮ ಮಹರ್ಷಿಗಳ ಸೇವೆಗಾಗಿ ತಾನು ಹೋಗದೆ ರಾಜನಿಗೆ ತಿಳಿಯದಂತೆ ತನ್ನ ದಾಸಿಯನ್ನು ಕಳುಹಿಸಿದಳು. ದಾಸಿಗೆ ಓರ್ವ ಪುತ್ರನನ್ನು ಋಷಿಗಳು ಅನುಗ್ರಹಿಸಿದರು. ಅವನೇ ಕಕ್ಷೀವಂತ. ಉದಂಕ ಮುನಿಯಲ್ಲಿ ವಿದ್ಯಾಭ್ಯಾಸವನ್ನು ಪೂರೈಸಿ ತಪಸ್ಸನ್ನು ಮಾಡುವುದಕ್ಕೆ ತೊಡಗಿದನು.

ಆ ಕಾಲದಲ್ಲಿ ಸ್ವನಯನೆಂಬ ರಾಜನಿದ್ದನು. ಅವನಿಗೆ ಒಬ್ಬಳು ಮಗಳಿದ್ದಳು. ಅತ್ಯಂತ ಸುಂದರಿಯಾದ ತನ್ನ ಮಗಳಿಗೆ ತಕ್ಕ ವರನಾರೆಂದು ಆಲೋಚಿಸುತ್ತಿದ್ದನು. ಈ ವಿಷಯವನ್ನು ತನ್ನ ಮಗಳಲ್ಲಿ ಕೇಳಿದನು. ''ನಿನ್ನ ಮನಸ್ಸಿನಲ್ಲಿ ಎಂಥಹವನು ವರನಾಗಬೇಕೆಂದಿದೆ'' ಎಂದು. ಆಗ ಮಗಳು ''ನಾಲ್ಕು ದಂತಗಳಿರುವ ಬಿಳಿಯ ಆನೆಯ ಮೇಲೆ ಕುಳಿತುಕೊಂಡು ಬರುವಂತಹವನನ್ನು ತಾನು ಇಷ್ಟಪಡುವುದಾಗಿ ಆತನನ್ನು ಸಂತೋಷದಿಂದ ವರಿಸುವೆನು'' ಎಂದಳು.

ರಾಜ ಆಲೋಚಿಸುವುದಕ್ಕೆ ತೊಡಗಿದ. ನಾಲ್ಕು ದಂತಗಳ ಆನೆಯಿರುವುದಕ್ಕೆ ಸಾಧ್ಯವಿದೆಯೆ! ಅದರಲ್ಲೂ ಬಿಳಿಯ ಆನೆ. ಹೀಗೆ ರಾಜನು ಚಿಂತಿಸುತ್ತಿರುವ ಸಮಯದಲ್ಲಿ ಅಲ್ಲಿಗೆ ನಾರದ ಮಹರ್ಷಿಗಳು ಬರುತ್ತಾರೆ. ಬಂದ ನಾರದರು ರಾಜನ ಚಿಂತೆಯ ಕಾರಣವನ್ನು ತಿಳಿದುಕೊಂಡರು, ''ರಾಜನೇ ಚಿಂತಿಸಬೇಡ. ದೀರ್ಘತಮ ಮಹರ್ಷಿಗೆ ಕಕ್ಷೀವಂತನೆಂಬ ಮಗನಿದ್ದಾನೆ. ಅವನು ಉದಂಕ ಮಹರ್ಷಿಯಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿ ತಪಸ್ಸನ್ನು ಆಚರಿಸುತ್ತಿದ್ದಾನೆ. ಉದಂಕ ಮಹರ್ಷಿಗಳ

ನಿರ್ದೇಶನದಂತೆ ನಾಲ್ಕು ದಂತಗಳಿರುವ ಬಿಳಿಯ ಆನೆಯನ್ನು ಪಡೆದು ಅದನ್ನು ಏರಿ ಕುಳಿತುಕೊಳ್ಳುವ ಸಿದ್ಧಿಗಾಗಿ ರಾಮಸೇತುವಿನ ಬಳಿಯಲ್ಲಿರುವ ಗಂಧಮಾದನ ಪರ್ವತದಲ್ಲಿ ತಪಸ್ಸನ್ನು ಆಚರಿಸುತ್ತಿದ್ದಾನೆ. ಮೂರು ವರ್ಷಗಳಿಂದ ತಪಸ್ಸನ್ನು ಆಚರಿಸುತ್ತಿರುವ ಕಕ್ಷೀವಂತನು ನಿನ್ನಲ್ಲಿಗೆ ಬರುವವನಿದ್ದಾನೆ'' ಎಂದು ಹೇಳಿ ರಾಜನನ್ನು ಆಶೀರ್ವದಿಸಿ ಹೊರಟು ಹೋದರು.

ಕೆಲವೇ ಸಮಯದಲ್ಲಿ ತಪಸ್ಸನ್ನು ಮಾಡುತ್ತಿದ್ದ ಕಕ್ಷೀವಂತನಿಗೆ ಸಿದ್ಧಿಯಾಯಿತು. ನಾಲ್ಕು ದಂತಗಳಿರುವ ಬಿಳಿಯ ಆನೆಯೊಂದು ಅವನಿಗೆ ದೊರೆಯಿತು. ಹೇಗೆಂದು ಕೇಳುವಿರಾ! ಒಂದುದಿನ ಕಕ್ಷೀವಂತನು ಸರೋವರದ ಸಮೀಪಕ್ಕೆ ಹೋಗಿ ಸ್ನಾನವನ್ನು ಪೂರೈಸಿ, ಜಪವನ್ನು ಮುಗಿಸಿದನು. ಆ ಕಾಲಕ್ಕೆ ಆ ಸರೋವರದ ಮಧ್ಯದಿಂದ ನಾಲ್ಕು ದಂತಗಳಿರುವ ಬಿಳಿಯದಾದ ಆನೆಯೊಂದು ಎದ್ದು ಬಂದು ಸರೋವರದ ಸಮೀಪದಲ್ಲಿದ್ದ ಕಕ್ಷೀವಂತನ ಸಮೀಪದಲ್ಲಿ ನಿಂತುಕೊಂಡಿತು. ತನಗೆ ವಿಧೇಯವಾಗಿ ನಿಂತುಕೊಂಡ ನಾಲ್ಕು ದಂತಗಳ ಬಿಳಿಯ ಆನೆಯು ತನ್ನ ಸಮೀಪದಲ್ಲಿ ಬಂದು ನಿಂತಿರುವುದನ್ನು ನೋಡಿ ಕಕ್ಷೀವಂತನಿಗೆ ಸಂತೋಷವಾಯಿತು. ಆನೆಯು ಕಕ್ಷೀವಂತನನ್ನು ತನ್ನ ಮೇಲೆ ಕುಳ್ಳಿರಿಸಿಕೊಂಡು ಸಂಚರಿಸುತ್ತ ಒಂದು ಕಾಡಿನ ಒಳಗೆ ಹೋಯಿತು. ಆ ಸಮಯದಲ್ಲಿ ಆ ಕಾಡಿಗೆ ಬೇಟೆಗಾಗಿ ಸ್ವನಯ ರಾಜನು ಬಂದಿದ್ದನು. ಅವರಿಬ್ಬರೂ ಭೇಟಿಯಾಗಿ ತಮ್ಮ ತಮ್ಮ ಪರಿಚಯವನ್ನು ಮಾಡಿಕೊಂಡರು. ತನ್ನ ಮಗಳು ಇಚ್ಛಿಸಿದ ಹಾಗೆ ಮತ್ತು ನಾರದರು ಹೇಳಿರುವ ಹಾಗೆ ನಾಲ್ಕು ದಂತಗಳಿರುವ ಬಿಳಿಯ ಆನೆಯಲ್ಲಿ ಕುಳಿತುಬಂದ ದೀರ್ಘತಮ ಮಹರ್ಸಿಗಳ ಮಗನಾದ ವಿದ್ಯಾವಂತನೂ ತಪಸ್ವಿಯೂ ಆಗಿರುವ ಕಕ್ಷೀವಂತನನ್ನು ಕಂಡು ಪರಿಚಯ ಮಾಡಿಕೊಂಡ ಸ್ವನಯ ರಾಜನಿಗೆ ಅತ್ಯಂತ ಸಂತೋಷವಾಯಿತು. ಅವನನ್ನು ತನ್ನ ಅರಮನೆಗೆ ಆದರದಿಂದ ಬರಮಾಡಿಕೊಂಡನು. ಚತುರ್ದಂತ ಶ್ವೇತ ಗಜಾರೂಢನಾಗಿರುವ ಕಕ್ಷೀವಂತನನ್ನು ತನ್ನ ಮಗಳಿಗೆ ತೋರಿಸಿದನು.

ಆಗ ಮತ್ತೊಂದು ವಿಷಯವೂ ನಡೆಯಿತು. ಅಲ್ಲಿಗೆ ಕಕ್ಷೀವಂತನ ಗುರುಗಳಾಗಿರುವ ಉದಂಕ ಮಹರ್ಷಿಗಳೂ ಆಗಮಿಸಿದರು. ಉದಂಕ

ಮಹರ್ಷಿಗಳ ಸಮಕ್ಷಮದಲ್ಲಿ ರಾಜಾಸ್ವನಯನು ತನ್ನ ಮಗಳನ್ನು ಕಕ್ಷೀವಂತನಿಗೆ ಧಾರೆಯೆರೆದು ವಿವಾಹ ಮಾಡಿಕೊಟ್ಟನು. ಎಲ್ಲರಿಗೂ ಸಂತಸವಾಯಿತು. ಉದಂಕ ಮಹರ್ಷಿಗಳು ತಮ್ಮ ಆಶ್ರಮಕ್ಕೆ ತೆರಳಿದರು. ಕೆಲಕಾಲ ಅರಮನೆಯಲ್ಲಿದ್ದ ಕಕ್ಷೀವಂತನು ತಪಶ್ಚರ್ಯೆಗಾಗಿ ತನ್ನ ಹೆಂಡತಿಯೊಡನೆ ಅರಣ್ಯಕ್ಕೆ ತೆರಳಿ ಆಶ್ರಮವನ್ನು ಕಟ್ಟಿಕೊಂಡು ತಪಸ್ಸನ್ನು ಮಾಡುವುದಕ್ಕೆ ತೊಡಗಿದನು. ಮುಂದೆ ಅಗ್ನಿ, ಇಂದ್ರ ಮತ್ತು ವರುಣರ ತೇಜಸ್ಸನ್ನು ಸಂಪಾದಿಸಿಕೊಂಡನು.

★ ★ ★ ★

# ಕೌತ್ಸ

ವಿಶ್ವಾಮಿತ್ರ ಮಹರ್ಷಿಗಳಿಗೆ ಅನೇಕ ಮಂದಿ ಶಿಷ್ಯರಿದ್ದರು. ಅವರಲ್ಲಿ ಕೌತ್ಸನೂ ಒಬ್ಬ. ಒಮ್ಮೆ ವಿಶ್ವಾಮಿತ್ರ ಮಹರ್ಷಿಗಳ ಆಶ್ರಮಕ್ಕೆ ಮಹರ್ಷಿ ದೂರ್ವಾಸರು ಬಂದಿದ್ದರು. ಅವರು ಬಂದಾಗ ವಿಶ್ವಾಮಿತ್ರರು ಕಠಿಣವಾದ ತಪಸ್ಸನ್ನು ಆಚರಿಸುತ್ತಿದ್ದರು. ಆಶ್ರಮಕ್ಕೆ ಬಂದ ದೂರ್ವಾಸರನ್ನು ವಿಶ್ವಾಮಿತ್ರರ ಶಿಷ್ಯನಾದ ಕೌತ್ಸನು ಎದುರುಗೊಂಡು ಯಥಾಯೋಗ್ಯವಾಗಿ ಉಪಚರಿಸಿದನು.

ದೂರ್ವಾಸರು ವಿಲಕ್ಷಣ ಮನೋಸ್ಥಿತಿಯವರಲ್ಲವೆ? ಆಶ್ರಮದ ಯಜಮಾನ ತನ್ನನ್ನು ಸತ್ಕರಿಸಲಿಲ್ಲವೆಂದು ಅವರಿಗೆ ಅಸಮಾಧಾನವಾಗಿರಬೇಕು. ಕೌತ್ಸನ ಉಪಚಾರದಿಂದ ದೂರ್ವಾಸರು ಸಂತೋಷಗೊಳ್ಳಲಿಲ್ಲ. ''ನನಗೆ ನಿನ್ನ ಉಪಚಾರ ಬೇಕಾಗಿಲ್ಲ. ವಿಶ್ವಾಮಿತ್ರರಿಂದಲೇ ಉಪಚಾರವನ್ನು ಸ್ವೀಕರಿಸುವ ನಿರ್ಧಾರವನ್ನು ಮಾಡಿ ಇಲ್ಲಿಗೆ ಬಂದವನಿದ್ದೇನೆ'' ಎಂದನು.

ಅಲ್ಲಿಯೇ ಸನಿಹದಲ್ಲಿ ವಿಶ್ವಾಮಿತ್ರರು ತಪಸ್ಸಿನಲ್ಲಿ ತೊಡಗಿದ್ದರು. ಅವರತ್ತ ನೋಡಿದ ದೂರ್ವಾಸರು, ''ಎಲೈ ಮಹರ್ಷಿಯೇ, ನನಗೆ ತುಂಬಾ ಹಸಿವಾಗುತ್ತಿದೆ. ತಕ್ಷಣ ಬಿಸಿಬಿಸಿಯಾದ ಮೃಷ್ಟಾನ್ನ ಭೋಜನವನ್ನು ಮಾಡಿಸು'' ಎಂದರು. ಮುನಿಯ ಧ್ವನಿ ಮತ್ತೊಬ್ಬ ಮುನಿಯನ್ನು ತಟ್ಟದಿರುತ್ತದೆಯೇ? ತಪಸ್ಸನ್ನು ಆಚರಿಸುತ್ತಿದ್ದ ವಿಶ್ವಾಮಿತ್ರರು ದೂರ್ವಾಸಮುನಿಗಳ ಧ್ವನಿಯನ್ನು ಕೇಳಿ ತಪಸ್ಸನ್ನು ಬಿಟ್ಟು ಬಂದರು.

ತತ್‌ಕ್ಷಣವೇ ತನ್ನತಪಸ್ಸಿನ ಮಹಿಮೆಯಿಂದ ಮೃಷ್ಟಾನ್ನ ಭೋಜನವನ್ನುಸಿದ್ಧ ಮಾಡಿಸಿ ದುರ್ವಾಸರಿಗೆ ಕೊಡಲು ಮುಂದೆ ಬಂದರು. ಆಗ ದುರ್ವಾಸರು, ''ಅಯ್ಯಾ ಸ್ವಲ್ಪ ಹೊತ್ತು ನಿಲ್ಲು, ನಾನು ಸ್ನಾನ ಮಾಡಿ ಬರುತ್ತೇನೆ'' ಎಂದರು. ಅದಕ್ಕೊಪ್ಪಿದ ವಿಶ್ವಾಮಿತ್ರರು ಹಾಗೆಯೇ ನಿಂತರು. ಕೆಲವು ದಿನಗಳು ಕಳೆಯಿತು. ಸಿದ್ಧ ಮಾಡಿದ ಭಕ್ಷ್ಯ-ಭೋಜ್ಯ-ಪಾಯಸಗಳು ಪಾತ್ರೆಗಳಲ್ಲಿದ್ದವು. ಅವುಗಳ ಎದುರು ವಿಶ್ವಾಮಿತ್ರರು ಹಾಗೆಯೇ ನಿಂತಿದ್ದರು. ತಪಸ್ಸಿನ ಪ್ರಭಾವದಿಂದ ಭೋಜನದ ಬಿಸಿ ಆರಲೇ ಇಲ್ಲ!

ಕೆಲವು ದಿನಗಳು ಕಳೆದ ಮೇಲೆ ದೂರ್ವಾಸರು ಅಲ್ಲಿಗೆ ಬಂದರು. ಬಂದವರನ್ನು ಉಪಚರಿಸಿದ ವಿಶ್ವಾಮಿತ್ರರು ಅವರಿಗೆ ತೃಪ್ತಿಯಾಗುವಷ್ಟು ಬಡಿಸಿದರು. ದೂರ್ವಾಸರು ಊಟವನ್ನು ಮಾಡಿ ಸಂತೃಪ್ತರಾದರು. 'ಶುಭವಾಗಲಿ' ಎಂದು ವಿಶ್ವಾಮಿತ್ರರಿಗೆ ಹೇಳಿ ಹೊರಟುಹೋದರು. ಈ ಸಂದರ್ಭದಲ್ಲಿ ವಿಶ್ವಾಮಿತ್ರರ ಸೇವೆಯನ್ನುಮಾಡುತ್ತಿದ್ದವನು ಕೌತ್ಸ. ದೂರ್ವಾಸರ ಉಪಚಾರದಿಂದ ತೊಡಗಿ, ಬಹಳ ಕಾಲ ನಿಂತೇ ಇದ್ದ ವಿಶ್ವಾಮಿತ್ರರ ಮತ್ತು ದೂರ್ವಾಸರ ಸೇವೆಯನ್ನುಕೌತ್ಸನು ಸ್ವಲ್ಪವೂ ಬೇಸರಿಸದೆ ಮಾಡಿದನು. ಅನಂತರ ಪುನಃ ತಪಸ್ಸಿಗೆ ತೊಡಗುವ ಮುನ್ನ ವಿಶ್ವಾಮಿತ್ರರು ಕೌತ್ಸನನ್ನು ಕರೆದು, ''ನಿನ್ನ ಗುರುಭಕ್ತಿಗೆ ಮೆಚ್ಚಿದ್ದೇನೆ. ನಿನಗೆ ಸಕಲ ವಿದ್ಯೆಗಳೂ ಫಲಿಸುತ್ತವೆ. ಇಂದಿಗೆ ನಿನ್ನ ವಿದ್ಯಾಭ್ಯಾಸವು ಮುಗಿದುಹೋಯಿತು. ಆದುದರಿಂದ ನೀನಿನ್ನು ಮನೆಗೆ ಹೋಗಬಹುದು'' ಎಂದರು.

ವಿನೀತನಾಗಿರುವ ಕೌತ್ಸನು ಗುರುಗಳಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿ ''ಗುರುಗಳೇ, ಗುರುದಕ್ಷಿಣೆಯ ವಿಚಾರವು ಅಪ್ಪಣೆಯಾಗಲಿ'' ಎಂದನು. ''ಗುರುಸೇವೆಯೇ ಗುರುದಕ್ಷಿಣೆಯಾಗಿದೆ. ನಿನ್ನಿಂದ ಪ್ರತ್ಯೇಕ ಗುರುದಕ್ಷಿಣೆ ಬೇಕಾಗಿಲ್ಲ'' ಎಂದರು ವಿಶ್ವಾಮಿತ್ರರು. ಆದರೆ ಕೌತ್ಸನಿಗೆ ಗುರುದಕ್ಷಿಣೆಯನ್ನು ಸಮರ್ಪಿಸದೆ ಹೊರಟು ಹೋಗಲು ಮನಸ್ಸು ಬರಲಿಲ್ಲ. ಆದುದರಿಂದ ಪದೇ ಪದೇ ಗುರುದಕ್ಷಿಣೆಯ ವಿಚಾರವಾಗಿ ವಿಶ್ವಾಮಿತ್ರರಲ್ಲಿ ಕೇಳತೊಡಗಿದ. ಇದರಿಂದ ಅವರಿಗೆ ಕೋಪ ಬಂತು. ''ನಾನು ನಿನಗೆ ೧೪ ವಿದ್ಯೆಗಳನ್ನು ಅನುಗ್ರಹಿಸಿದ್ದೇನೆ.

(ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದಗಳೆಂಬ ೪ ವೇದಗಳು, ಶಿಕ್ಷಾ, ವ್ಯಾಕರಣ, ಕಲ್ಪ, ನಿರುಕ್ತ, ಜ್ಯೋತಿಷ್ಯ ಮತ್ತು ಛಂದಸ್ಸುಗಳೆಂದು ೬ ವೇದಾಂಗಗಳು, ಮೀಮಾಂಸಶಾಸ್ತ್ರ, ನ್ಯಾಯಶಾಸ್ತ್ರ, ಪುರಾಣಗಳು ಮತ್ತು ಧರ್ಮಶಾಸ್ತ್ರ ಇವೇ ೧೪ ವಿದ್ಯೆಗಳು) ಗುರುದಕ್ಷಿಣೆ ಬೇಡವೆಂದರೆ ನೀನು ಕೇಳುವುದಿಲ್ಲ. ಆದ್ದರಿಂದ ಒಂದೊಂದು ವಿದ್ಯೆಗೂ ಒಂದು ಕೋಟಿ ಸುವರ್ಣ ನಾಣ್ಯಗಳಂತೆ ಒಟ್ಟು ೧೪ ಕೋಟಿ ಸುವರ್ಣ ನಾಣ್ಯಗಳನ್ನು ಗುರುದಕ್ಷಿಣೆಯಾಗಿ ತಂದೊಪ್ಪಿಸು'' ಎಂದರು.

ಅದಕೊಪ್ಪಿದ ಕೌತ್ಸನು ನೇರವಾಗಿ ಅಯೋಧ್ಯೆಗೆ ತೆರಳಿ ಅಲ್ಲಿಯ ಅರಸನಾಗಿದ್ದ ರಘು ಮಹಾರಾಜನಲ್ಲಿಗೆ ಹೋಗಿ ೧೪ ಕೋಟಿ ಸುವರ್ಣ ನಾಣ್ಯಗಳನ್ನು ಕೇಳಿದ. ರಘು ಮಹಾರಾಜನಲ್ಲಿ ಧನವಿರಲಿಲ್ಲ. ಅವನು ಸಕಲವನ್ನು ದಾನ ಮಾಡಿ ಬರಿಗೈಯಲ್ಲಿದ್ದನು. ಮುನಿಯ ಅಪೇಕ್ಷೆಯನ್ನು ತೀರಿಸುವುದಕ್ಕಾಗಿ ಅವನು ಕುಬೇರನ ಲೋಕಕ್ಕೆ ದಾಳಿ ಇಟ್ಟು ಅಲ್ಲಿಂದ ಧನವನ್ನು ತರಿಸಿಕೊಂಡು ಕೊಟ್ಟನು! ಅದನ್ನು ಕೌತ್ಸನು ಒಯ್ದು ವಿಶ್ವಾಮಿತ್ರರಿಗೆ ನೀಡಿದನು. ವಿಶ್ವಾಮಿತ್ರರು ಅದನ್ನು ಇಟ್ಟುಕೊಳ್ಳದೆ, ಅವರೂ ದಾನ ಮಾಡಿದರು!



## ದೀರ್ಘತಮಸ್

ಉಚಥ್ಯನೆಂಬ ಮಹಾಜ್ಞಾನಿಯಾದ ಋಷಿಯೊಬ್ಬನಿದ್ದನು. ಆತನಿಗೆ ಮಮತೆಯೆಂಬ ಪತ್ನಿಯಿದ್ದಳು. ಆ ಋಷಿಯು ಆಕೆಯಲ್ಲಿ ವಿಶೇಷ ಪ್ರೀತಿಯಿಟ್ಟಿದ್ದನು. ಉಚಥ್ಯನ ಕಿರಿಯ ತಮ್ಮನೂ, ದೇವಪುರೋಹಿತನೂ, ಮಹಾತೇಜಸ್ವಿಯೂ ಆದ ಬೃಹಸ್ಪತಿಯು ಒಮ್ಮೆ ಆಕೆಯನ್ನು ಸಂಗಮಿಸಲು ಬಂದನು. ಮಮತೆಯು ಆಗ ತನ್ನ ಮೈದುನನನ್ನು ಕುರಿತು ''ನಾನು ನಿನ್ನ ಜ್ಯೇಷ್ಠಭ್ರಾತೃವಿನಿಂದ ಗರ್ಭವನ್ನು ಧರಿಸಿರುವೆನು. ಈಗ ನಿನ್ನ ಆಶೆಯನ್ನು ಬಿಡು. ಬೃಹಸ್ಪತೀ! ನೀನು ಮಹಾಮಹಿಮನು. ಈಗ ಉಚಥ್ಯಪುತ್ರನು ನನ್ನ ಹೊಟ್ಟೆಯಲ್ಲಿರುವಾಗಲೇ ಷಡಂಗಗಳಿಂದ ಕೂಡಿದ ವೇದವನ್ನು ಅಧ್ಯಯನ

ತತ್‌ಕ್ಷಣವೇ ತನ್ನ ತಪಸ್ಸಿನ ಮಹಿಮೆಯಿಂದ ಮೃಷ್ಟಾನ್ನ ಭೋಜನವನ್ನು ಸಿದ್ಧ ಮಾಡಿಸಿ ದುರ್ವಾಸರಿಗೆ ಕೊಡಲು ಮುಂದೆ ಬಂದರು. ಆಗ ದುರ್ವಾಸರು, ''ಅಯ್ಯಾ ಸ್ವಲ್ಪ ಹೊತ್ತು ನಿಲ್ಲು, ನಾನು ಸ್ನಾನ ಮಾಡಿ ಬರುತ್ತೇನೆ'' ಎಂದರು. ಅದಕ್ಕೊಪ್ಪಿದ ವಿಶ್ವಾಮಿತ್ರರು ಹಾಗೆಯೇ ನಿಂತರು. ಕೆಲವು ದಿನಗಳು ಕಳೆಯಿತು. ಸಿದ್ಧ ಮಾಡಿದ ಭಕ್ಷ್ಯ-ಭೋಜ್ಯ-ಪಾಯಸಗಳು ಪಾತ್ರೆಗಳಲ್ಲಿದ್ದವು. ಅವುಗಳ ಎದುರು ವಿಶ್ವಾಮಿತ್ರರು ಹಾಗೆಯೇ ನಿಂತಿದ್ದರು. ತಪಸ್ಸಿನ ಪ್ರಭಾವದಿಂದ ಭೋಜನದ ಬಿಸಿ ಆರಲೇ ಇಲ್ಲ!

ಕೆಲವು ದಿನಗಳು ಕಳೆದ ಮೇಲೆ ದೂರ್ವಾಸರು ಅಲ್ಲಿಗೆ ಬಂದರು. ಬಂದವರನ್ನು ಉಪಚರಿಸಿದ ವಿಶ್ವಾಮಿತ್ರರು ಅವರಿಗೆ ತೃಪ್ತಿಯಾಗುವಷ್ಟು ಬಡಿಸಿದರು. ದೂರ್ವಾಸರು ಊಟವನ್ನು ಮಾಡಿ ಸಂತೃಪ್ತರಾದರು. 'ಶುಭವಾಗಲಿ' ಎಂದು ವಿಶ್ವಾಮಿತ್ರರಿಗೆ ಹೇಳಿ ಹೊರಟುಹೋದರು. ಈ ಸಂದರ್ಭದಲ್ಲಿ ವಿಶ್ವಾಮಿತ್ರರ ಸೇವೆಯನ್ನು ಮಾಡುತ್ತಿದ್ದವನು ಕೌತ್ಸ. ದೂರ್ವಾಸರ ಉಪಚಾರದಿಂದ ತೊಡಗಿ, ಬಹಳ ಕಾಲ ನಿಂತೇ ಇದ್ದ ವಿಶ್ವಾಮಿತ್ರರ ಮತ್ತು ದೂರ್ವಾಸರ ಸೇವೆಯನ್ನು ಕೌತ್ಸನು ಸ್ವಲ್ಪವೂ ಬೇಸರಿಸದೆ ಮಾಡಿದನು. ಅನಂತರ ಪುನಃ ತಪಸ್ಸಿಗೆ ತೊಡಗುವ ಮುನ್ನ ವಿಶ್ವಾಮಿತ್ರರು ಕೌತ್ಸನನ್ನು ಕರೆದು, ''ನಿನ್ನ ಗುರುಭಕ್ತಿಗೆ ಮೆಚ್ಚಿದ್ದೇನೆ. ನಿನಗೆ ಸಕಲ ವಿದ್ಯೆಗಳೂ ಫಲಿಸುತ್ತವೆ. ಇಂದಿಗೆ ನಿನ್ನ ವಿದ್ಯಾಭ್ಯಾಸವು ಮುಗಿದುಹೋಯಿತು. ಆದುದರಿಂದ ನೀನಿನ್ನು ಮನೆಗೆ ಹೋಗಬಹುದು'' ಎಂದರು.

ವಿನೀತನಾಗಿರುವ ಕೌತ್ಸನು ಗುರುಗಳಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿ ''ಗುರುಗಳೇ, ಗುರುದಕ್ಷಿಣೆಯ ವಿಚಾರವು ಅಪ್ಪಣೆಯಾಗಲಿ'' ಎಂದನು. ''ಗುರುಸೇವೆಯೇ ಗುರುದಕ್ಷಿಣೆಯಾಗಿದೆ. ನಿನ್ನಿಂದ ಪ್ರತ್ಯೇಕ ಗುರುದಕ್ಷಿಣೆ ಬೇಕಾಗಿಲ್ಲ'' ಎಂದರು ವಿಶ್ವಾಮಿತ್ರರು. ಆದರೆ ಕೌತ್ಸನಿಗೆ ಗುರುದಕ್ಷಿಣೆಯನ್ನು ಸಮರ್ಪಿಸದೆ ಹೊರಟು ಹೋಗಲು ಮನಸ್ಸು ಬರಲಿಲ್ಲ. ಆದುದರಿಂದ ಪದೇ ಪದೇ ಗುರುದಕ್ಷಿಣೆಯ ವಿಚಾರವಾಗಿ ವಿಶ್ವಾಮಿತ್ರರಲ್ಲಿ ಕೇಳತೊಡಗಿದ. ಇದರಿಂದ ಅವರಿಗೆ ಕೋಪ ಬಂತು. ''ನಾನು ನಿನಗೆ ೧೪ ವಿದ್ಯೆಗಳನ್ನು ಅನುಗ್ರಹಿಸಿದ್ದೇನೆ.

(ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದಗಳೆಂಬ ೪ ವೇದಗಳು, ಶಿಕ್ಷಾ, ವ್ಯಾಕರಣ, ಕಲ್ಪ, ನಿರುಕ್ತ, ಜ್ಯೋತಿಷ್ಯ ಮತ್ತು ಛಂದಸ್ಸುಗಳೆಂದು ೬ ವೇದಾಂಗಗಳು, ಮೀಮಾಂಸಶಾಸ್ತ್ರ, ನ್ಯಾಯಶಾಸ್ತ್ರ, ಪುರಾಣಗಳು ಮತ್ತು ಧರ್ಮಶಾಸ್ತ್ರ ಇವೇ ೧೪ ವಿದ್ಯೆಗಳು) ಗುರುದಕ್ಷಿಣೆ ಬೇಡವೆಂದರೆ ನೀನು ಕೇಳುವುದಿಲ್ಲ. ಆದ್ದರಿಂದ ಒಂದೊಂದು ವಿದ್ಯೆಗೂ ಒಂದು ಕೋಟಿ ಸುವರ್ಣ ನಾಣ್ಯಗಳಂತೆ ಒಟ್ಟು ೧೪ ಕೋಟಿ ಸುವರ್ಣ ನಾಣ್ಯಗಳನ್ನು ಗುರುದಕ್ಷಿಣೆಯಾಗಿ ತಂದೊಪ್ಪಿಸು'' ಎಂದರು.

ಅದಕೊಪ್ಪಿದ ಕೌತ್ಸನು ನೇರವಾಗಿ ಅಯೋಧ್ಯೆಗೆ ತೆರಳಿ ಅಲ್ಲಿಯ ಅರಸನಾಗಿದ್ದ ರಘು ಮಹಾರಾಜನಲ್ಲಿಗೆ ಹೋಗಿ ೧೪ ಕೋಟಿ ಸುವರ್ಣ ನಾಣ್ಯಗಳನ್ನು ಕೇಳಿದ. ರಘು ಮಹಾರಾಜನಲ್ಲಿ ಧನವಿರಲಿಲ್ಲ. ಅವನು ಸಕಲವನ್ನು ದಾನ ಮಾಡಿ ಬರಿಗೈಯಲ್ಲಿದ್ದನು. ಮುನಿಯ ಅಪೇಕ್ಷೆಯನ್ನು ತೀರಿಸುವುದಕ್ಕಾಗಿ ಅವನು ಕುಬೇರನ ಲೋಕಕ್ಕೆ ದಾಳಿ ಇಟ್ಟು ಅಲ್ಲಿಂದ ಧನವನ್ನು ತರಿಸಿಕೊಂಡು ಕೊಟ್ಟನು! ಅದನ್ನು ಕೌತ್ಸನು ಒಯ್ದು ವಿಶ್ವಾಮಿತ್ರರಿಗೆ ನೀಡಿದನು. ವಿಶ್ವಾಮಿತ್ರರು ಅದನ್ನು ಇಟ್ಟುಕೊಳ್ಳದೆ, ಅವರೂ ದಾನ ಮಾಡಿದರು!



## ದೀರ್ಘತಮಸ್

ಉಚಥ್ಯನೆಂಬ ಮಹಾಜ್ಞಾನಿಯಾದ ಋಷಿಯೊಬ್ಬನಿದ್ದನು. ಆತನಿಗೆ ಮಮತೆಯೆಂಬ ಪತ್ನಿಯಿದ್ದಳು. ಆ ಋಷಿಯು ಆಕೆಯಲ್ಲಿ ವಿಶೇಷ ಪ್ರೀತಿಯಿಟ್ಟಿದ್ದನು. ಉಚಥ್ಯನ ಕಿರಿಯ ತಮ್ಮನೂ, ದೇವಪುರೋಹಿತನೂ, ಮಹಾತೇಜಸ್ವಿಯೂ ಆದ ಬೃಹಸ್ಪತಿಯು ಒಮ್ಮೆ ಆಕೆಯನ್ನು ಸಂಗಮಿಸಲು ಬಂದನು. ಮಮತೆಯು ಆಗ ತನ್ನ ಮೈದುನನನ್ನು ಕುರಿತು ''ನಾನು ನಿನ್ನ ಜ್ಯೇಷ್ಠಭ್ರಾತೃವಿನಿಂದ ಗರ್ಭವನ್ನು ಧರಿಸಿರುವೆನು. ಈಗ ನಿನ್ನ ಆಶೆಯನ್ನು ಬಿಡು. ಬೃಹಸ್ಪತೀ! ನೀನು ಮಹಾಮಹಿಮನು. ಈಗ ಉಚಥ್ಯಪುತ್ರನು ನನ್ನ ಹೊಟ್ಟೆಯಲ್ಲಿರುವಾಗಲೇ ಷಡಂಗಗಳಿಂದ ಕೂಡಿದ ವೇದವನ್ನು ಅಧ್ಯಯನ

ಮಾಡಿರುವನು. ನಿನ್ನ ವೀರ್ಯವು ವ್ಯರ್ಥವಾಗಬಾರದು. ಈ ಗರ್ಭದಲ್ಲಿ ಒಂದೇ ಸಲಕ್ಕೆ ಇಬ್ಬರಿಗೆ ಸ್ಥಳವಿಲ್ಲ. ಆದುದರಿಂದ ಇಂತಹ ಕಾಲದಲ್ಲಿ ನಿನ್ನ ಉದ್ದೇಶವನ್ನು ನೆರವೇರಿಸಲು ಅಭಿಲಾಷೆಪಡುವುದು ಯೋಗ್ಯವಲ್ಲ'' ಎಂದು ಹೇಳಿದಳು. ಆಕೆಯು ಹೀಗೆ ಒತ್ತಿ ಹೇಳುತ್ತಿರುವಾಗಲೂ, ಬೃಹಸ್ಪತಿಯು ವಿಶೇಷ ಬುದ್ಧಿ ಸಂಪನ್ನನಾಗಿದ್ದರೂ, ತನ್ನ ಮನಸ್ಸನ್ನು ನಿಗ್ರಹಿಸಲಾರದೆ ಹೋದನು. ಆಗ ಆತನು, ತನ್ನನ್ನು ಪ್ರೀತಿಸದಿದ್ದಾಗಲೂ ತನ್ನ ಅಣ್ಣನ ಹೆಂಡತಿಯೊಡನೆ ಕಾಮೇಚ್ಛೆಯಿಂದ ಬಲಾತ್ಕರಿಸಿ ಸೇರಿದನು. ಈ ಸಂದರ್ಭದಲ್ಲಿ ಒಳಗಿದ್ದ ಗರ್ಭವು ''ಅಪ್ಪಾ! ಈ ರತಿಕ್ರೀಡೆಯನ್ನು ನಿಲ್ಲಿಸು. ಇಲ್ಲಿ ಇಬ್ಬರಿರಲು ಸ್ಥಳವಿಲ್ಲ. ನಾನು ಮೊದಲೇ ಇಲ್ಲಿರುವೆನು. ನಿನ್ನ ವೀರ್ಯವು ವ್ಯರ್ಥವಾಗಬಾರದು. ನೀನು ನನ್ನನ್ನು ಬಾಧೆಪಡಿಸಬೇಡ!' ಎಂದಿತು. ಬೃಹಸ್ಪತಿಯು ಗರ್ಭದಲ್ಲಿರುವ ಆ ಶಿಶುವಿನ ಮಾತುಗಳನ್ನೂ ಗಮನಿಸದೆ, ಆ ಸ್ತ್ರೀಯೊಡನೆ ರತಿಸುಖವನ್ನನುಭವಿಸಲು ಹೋದನು. ಆಗ ಆ ಸ್ತ್ರೀಯ ಗರ್ಭದಲ್ಲಿದ್ದ ಶಿಶುವು ಬೃಹಸ್ಪತಿಯ ವೀರ್ಯವು ಬರುವ ದಾರಿಯನ್ನು ಕಾಲಿನಿಂದ ಮುಚ್ಚಿ ತಡೆಯಿತು. ಮಹಾಮಹಿಮನಾದ ಬೃಹಸ್ಪತಿಯು ಕೆಳಗೆ ಬಿದ್ದ ತನ್ನ ವೀರ್ಯವನ್ನು ನೋಡಿ ಕೋಪಿಸಿಕೊಂಡು, ಗರ್ಭದಲ್ಲಿರುವ ಉಚಥ್ಯಪುತ್ರನನ್ನು ಕುರಿತು ''ಸಮಸ್ತ ಪ್ರಾಣಿಗಳೂ ಆಸೆಪಡತಕ್ಕ ಇಂತಹ ಸಮಯವು ಪ್ರಾಪ್ತವಾದಾಗ, ನೀನು ನನ್ನನ್ನು ನೋಡಿ ಹೀಗೆ ಮಾತನಾಡಿದೆ! ಆದುದರಿಂದ ನೀನು ದೀರ್ಘವಾದ ತಮಸ್ಸನ್ನು ಹೊಂದು'' ಎಂದು ಶಪಿಸಿದನು. ಆತನು, ಬೃಹಸ್ಪತಿಯ ಶಾಪದಿಂದ ದೀರ್ಘತಮಸ್ಸೆಂಬ ಹೆಸರಿನಿಂದ ಹುಟ್ಟು ಕುರುಡನಾದನು. ವೇದಪಾರಂಗತನೂ, ಬುದ್ಧಿಶಾಲಿಯೂ ಆದ ದೀರ್ಘತಮಸ್ಸು ಹುಟ್ಟು ಕುರುಡನಾಗಿದ್ದರೂ, ತನ್ನ ವಿದ್ಯಾಪ್ರಭಾವದಿಂದ ಸುಂದರಿಯೂ, ತರುಣಿಯೂ ಆದ ಪ್ರದ್ವೇಷಿಯೆಂಬ ಬ್ರಾಹ್ಮಣಕನ್ಯೆಯನ್ನು ವಿವಾಹವಾದನು. ಉಚಥ್ಯ ವಂಶಾಭಿವರ್ಧಕರಾದ ಗೌತಮನೇ ಮೊದಲಾದ ಪುತ್ರರನ್ನು ಪಡೆದನು. ಧರ್ಮಾತ್ಮನೂ, ಮಹಾತ್ಮನೂ, ವೇದವೇದಾಂಗಪಾರಂಗತನೂ ಆದ ಆ ಮಹರ್ಷಿಯು, ಕಾಮಧೇನುವಿನ ಕುಮಾರನಿಂದ, ಪಶುಗಳ ಸಂಭೋಗಕ್ರಮವನ್ನು ಸಂಪೂರ್ಣವಾಗಿ ತಿಳಿದು, ನಾಚಿಕೆಯಿಲ್ಲದೆ ಅದರಂತೆ ಅಭ್ಯಾಸಮಾಡಲು

ಪ್ರಯತ್ನಿಸಿದನು. ಆತನು ಹಾಗೆ ಮರ್ಯಾದೆಯನ್ನು ಬಿಟ್ಟು ಪ್ರವರ್ತಿಸುತ್ತಿರುವುದನ್ನು ಆ ಆಶ್ರಮದಲ್ಲಿ ವಾಸಮಾಡುವ ಋಷಿಗಳೆಲ್ಲರೂ ನೋಡಿ, ಆತನು ಮಾಡುವುದು ಪಾಪವೆಂಬ ಭ್ರಮೆಗೀಡಾಗಿ ''ಆಹಾ! ಏನಿದು! ಈತನು ಆಶ್ರಮದಲ್ಲಿ ವಾಸಮಾಡಲು ಯೋಗ್ಯನಲ್ಲ. ಆದುದರಿಂದ ಪಾಪಚಿತ್ತನಾದ ಈತನ ಸಹವಾಸವನ್ನು ನಾವೆಲ್ಲರೂ ಬಿಟ್ಟುಬಿಡಬೇಕು'' ಎಂದು ಒಬ್ಬರೊಡನೊಬ್ಬರು ಮಾತನಾಡಿಕೊಳ್ಳುತ್ತಾ ಕೋಪಿಸಿ ಕೊಂಡರು. ದೀರ್ಘತಮನ ಪತ್ನಿಯೂ ಆತನ ಚರ್ಯೆಗೆ ಒಪ್ಪಲಿಲ್ಲ. ಹಾಗೆ ತನ್ನನ್ನು ತಿರಸ್ಕರಿಸುತ್ತಿರುವ ತನ್ನ ಪತ್ನಿಯನ್ನು ನೋಡಿ ''ನೀನೂ ನನ್ನನ್ನು ದ್ವೇಷಿಸುತ್ತಿರುವುದೇಕೆ?'' ಎಂದು ಕೇಳಿದನು. ಅದಕ್ಕೆ ಆಕೆಯು ''ಭಾರ್ಯೆಯನ್ನು ಪೋಷಿಸುವುದರಿಂದ ಭರ್ತನೆಂದೂ, ಪಾಲಿಸುವುದರಿಂದ ಪತಿಯೆಂದೂ ಹೇಳುವರು. ನೀನು ನನಗೆ (ಇವೆರಡರಲ್ಲಿ ಒಂದೂ ಅಲ್ಲ) ಭರ್ತನೂ ಅಲ್ಲ! ಪತಿಯೂ ಅಲ್ಲ. ನೀನೋ, ಹುಟ್ಟಿದಂದಿನಿಂದ ಕುರುಡನಾಗಿರುವೆ. ಆದುದರಿಂದ ನಾನೇ ಇದುವರೆಗೂ ನಿನ್ನನ್ನೂ, ನಿನ್ನ ಮಕ್ಕಳನ್ನೂ ಪೋಷಿಸಿರುವೆನು. ಇನ್ನು ನಾನು ನಿಮ್ಮನ್ನು ಪೋಷಿಸಲಾರೆನು'' ಎಂದಳು.

ಈ ಮಾತನ್ನು ಕೇಳಿ ಆ ಋಷಿಯು ಕೋಪಿಸಿಕೊಂಡು, ಆಕೆಯನ್ನೂ, ಆಕೆಯ ಮಕ್ಕಳನ್ನೂ ನೋಡಿ ''ನೀನು ನನ್ನನ್ನು ರಾಜಗೃಹಕ್ಕ ಕರೆದುಕೊಂಡು ಹೋದರೆ ನಿನಗೆ ಹಣವು ದೊರೆಯುವುದು'' ಎಂದನು. ಪ್ರದ್ವೇಷಿಯು ಮತ್ತೆ ಆತನನ್ನು ಕುರಿತು ''ನಿನ್ನಿಂದ ಒದಗುವ ಧನವೂ ದುಃಖಕಾರಣವಾದುದರಿಂದ, ಅದೂ ನನಗೆ ಬೇಡ. ಬ್ರಾಹ್ಮಣೋತ್ತಮಾ! ನಿನ್ನ ಇಷ್ಟಾನುಸಾರವಾಗಿ ಹೋಗು. ಹಿದಿನಂತೆ ನಾನು ನಿನ್ನನ್ನು ಪೋಷಿಸಲಾರೆನು'' ಎಂದಳು. ಆಗ ದೀರ್ಘತಮಸ್ಸು ''ಇದು ಮೊದಲು ಲೋಕದಲ್ಲಿ ಒಬ್ಬ ಸ್ತ್ರೀಗೆ ಆಕೆಯ ಪ್ರಾಣವಿರುವವರೆಗೂ ಒಬ್ಬ ಪತಿಯೇ ಗತಿ'' ಯೆಂಬ ನಿಯಮವನ್ನು ಮಾಡಿಟ್ಟನು. ''ಪತಿಯು ಮೃತನಾದರೂ, ಬದುಕಿದ್ದರೂ ಆ ಸ್ತ್ರೀಯು ಮತ್ತೊಬ್ಬ ಪುರುಷನನ್ನು ವಿವಾಹವಾಗಕೂಡದು. ಇನ್ನೊಬ್ಬ ಪತಿಯನ್ನು ವರಿಸಿದಲ್ಲಿ ಆಕೆಯು ಪತಿತಳಾಗುವಳು. ಇದು ನಿಶ್ಚಯವು. ಇದು ಮೊದಲು ಪುರುಷರನ್ನು ಬಿಟ್ಟು ಸ್ತ್ರೀಯರು ಅವರಿಗೆ ಸಮಸ್ತ ಧನಸಂಪತ್ತು ಇದ್ದರೂ ಅವರು

ವಾಸ್ತವದಲ್ಲಿ ಅದನ್ನು ಅನುಭವಿಸಲಾರರು. ಅವರು ರತಿಭೋಗದಿಂದ ಅಪಕೀರ್ತಿಗೂ, ಲೋಕನಿಂದೆಗೂ ಗುರಿಯಾಗುವರು'' ಎಂದು ಶಪಿಸಿದನು.

ಪತಿಯ ಶಾಪವನ್ನು ಕೇಳಿದ ಮೇಲೆ ಪ್ರದ್ವೇಷಿಗೆ ಕೋಪವು ಬಂದು ''ಪುತ್ರರೇ! ಈತನನ್ನು ಗಂಗೆಯಲ್ಲಿ ತಳ್ಳಿರಿ'' ಎಂದಳು. ತಾಯಿಯ ಅಪ್ಪಣೆಯ ಮೇರೆಗೆ ಲೋಭಕ್ಕೂ, ಅಜ್ಞಾನಕ್ಕೂ ಒಳಗಾದ ಗೌತಮನೇ ಮುಂತಾದ ಆಕೆಯ ಮಕ್ಕಳು ''ನಾವೇಕೆ ಈ ಮುದುಕನನ್ನು ಕಾಪಾಡಬೇಕು?'' ಎಂದು ಹೇಳುತ್ತಾ ಆತನನ್ನು ಕಟ್ಟಿ, ಒಂದು ತೆಪ್ಪದಲ್ಲಿ ಹಾಕಿ, ಅದನ್ನು ಗಂಗೆಯಲ್ಲಿ ಬಿಟ್ಟು ಮನೆಗೆ ಬಂದರು.

ಕುರುಡನಾದ ಆ ಋಷಿಯು ಆ ತೆಪ್ಪದೊಡನೆಯೇ ಪ್ರವಾಹಮಾರ್ಗದಲ್ಲಿ ಸಿಕ್ಕಿ ತೇಲುತ್ತ, ಅನೇಕ ರಾಜ್ಯಗಳನ್ನು ದಾಟಿ ಹೋದನು. ಧಾರ್ಮಿಕರಲ್ಲಿ ಶ್ರೇಷ್ಠನಾದ ಬಲಿಯೆಂಬ ರಾಜನೊಬ್ಬನು ಸ್ನಾನಕ್ಕಾಗಿ ಗಂಗಾನದಿಗೆ ಹೋಗಿರಲು, ಆಗ ಪ್ರವಾಹಮಾರ್ಗದಲ್ಲಿ ತನ್ನ ಸಮೀಪಕ್ಕೆ ಕೊಚ್ಚಿಕೊಂಡು ಬಂದ ಆ ಋಷಿಯನ್ನು ನೋಡಿ ಆ ರಾಜನು ಅವನನ್ನು ಮೇಲಕ್ಕೆತ್ತಿದನು. ಆತನು ಯಾರೆಂದು ತಿಳಿದಮೇಲೆ ಆ ರಾಜಋಷಿಯು ಮುನಿವರನನ್ನು ಪೂಜಿಸಿ, ''ಮಹಾತ್ಮಾ! ನನಗೆ ಸಂತಾನ ಪ್ರಾಪ್ತಿಗಾಗಿ ಧರ್ಮಾರ್ಥಕುಶಲರಾದ ಪುತ್ರರನ್ನು ಹುಟ್ಟಿಸಲು ನೀನು ಅರ್ಹನು'' ಎಂದನು. ಆ ಋಷಿಯೂ ಅದಕ್ಕೆ ಒಪ್ಪಿದನು. ಆಗ ರಾಜನು ಸುಧೇಷ್ಣೆಯೆಂಬ ತನ್ನ ಪತ್ನಿಯನ್ನು ಆ ಋಷಿಯ ಬಳಿಗೆ ಕಳುಹಿಸಿದನು. ಆ ಋಷಿಯು ಕುರುಡನೆಂದೂ, ಮುದುಕನೆಂದೂ ತಿಳಿದು, ರಾಣಿಯು ಆತನೊಡನೆ ಸೇರಲು ಸಮ್ಮತಿಸಲಿಲ್ಲ. ತನಗೆ ಪ್ರತಿಯಾಗಿ ತನ್ನ ದಾದಿಯ ಮಗಳನ್ನು ಆತನ ಬಳಿಗೆ ಕಳುಹಿಸಿದಳು. ಋಷಿಯು ಆ ಶೂದ್ರ ಸ್ತ್ರೀಯ ಗರ್ಭದಲ್ಲಿ ಕಕ್ಷೀವಂತನೇ ಮೊದಲಾದ ಹನ್ನೊಂದು ಮಂದಿ ಮಕ್ಕಳನ್ನು ಪಡೆದನು. ಆ ಮಕ್ಕಳೆಲ್ಲರೂ ವೇದಾಧ್ಯಯನ ಮಾಡುವುದನ್ನು ಕೇಳಿ, ಬಲಿರಾಜನು ಆ ಋಷಿಯನ್ನು ನೋಡಿ ''ಇವರು ನನ್ನ ಮಕ್ಕಳು ತಾನೇ?'' ಎಂದನು. ಮಹರ್ಷಿಯು ''ಅಲ್ಲ! ನನ್ನ ಮಕ್ಕಳು! ನಿನ್ನ ಪಟ್ಟದ ರಾಣಿಯಾದ ಸುಧೇಷ್ಣೆಯು ಅಜ್ಞತೆಯಿಂದ, ಅಂಧನೂ, ವೃದ್ಧನೂ ಆದ ನನ್ನನ್ನು ನೋಡಿ ಅಸಹ್ಯಪಟ್ಟವಳಾಗಿ, ತನ್ನ ದಾದಿಯ ಮಗಳಾದ ಶೂದ್ರಕನ್ಯೆಯನ್ನು ನನ್ನ ಬಳಿಗೆ ಕಳುಹಿಸಿದಳು. ಕಕ್ಷೀವಂತನೇ ಮೊದಲಾದ ಈ ಮಕ್ಕಳು ಶೂದ್ರಸ್ತ್ರೀಯ ಗರ್ಭದಲ್ಲಿ ನನಗೆ

ಹುಟ್ಟಿದವರಾದುದರಿಂದ, ಅವರು ನನ್ನ ಮಕ್ಕಳೇ ಹೊರತು ನಿನ್ನ ಮಕ್ಕಳಲ್ಲ'' ಎಂದನು. ಆಗ ರಾಜನಾದ ಆ ಬಲಿಯು, ಆ ಋಷಿಶ್ರೇಷ್ಠನನ್ನು ಬಹಳವಾಗಿ ಬೇಡಿಕೊಂಡು, ಮತ್ತೆ ತನ್ನ ಭಾರ್ಯೆಯಾದ ಸುಧೇಷ್ಣೆಯನ್ನು ಆತನ ಬಳಿಗೆ ಕಳುಹಿಸಿದನು. ಆ ಋಷಿಯು ರಾಣಿಯ ದೇಹವನ್ನು ಮುಟ್ಟಿ ''ನಿನ್ನ ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳ ಅಂಗ, ವಂಗ, ಕಳಿಂಗ, ಪುಂಡ್ರ, ಸುಹ್ಮರೆಂಬ ಐದುಮಂದಿ ಮಕ್ಕಳು ಹುಟ್ಟುವರು. ಅವರ ಹೆಸರಿನಿಂದಲೇ ಭೂಮಿಯಲ್ಲಿ ಐದು ರಾಜ್ಯಗಳೂ ಪ್ರಸಿದ್ಧವಾಗುವುವು'' ಎಂದನು. ಅದರಂತೆ ಆ ಕುಮಾರರ ಹೆಸರಿನಿಂದ ಐದು ರಾಜ್ಯಗಳು ಪ್ರಖ್ಯಾತಿಗೊಂಡವು. ಪರಮಧರ್ಮಜ್ಞರೂ, ವೀರ್ಯವಂತರೂ, ಮಹಾಬಲಶಾಲಿಗಳೂ ಆದ ರಾಜರನೇಕರು ಹೀಗೆ ಭೂಮಿಯಲ್ಲಿ ಬ್ರಾಹ್ಮಣರಿಂದ ಹುಟ್ಟಿರುವರು.

★ ★ ★ ★

## ಕಣ್ವ

ಕಣ್ವ ಮಹರ್ಷಿಗಳು ಕಶ್ಯಪನ ವಂಶದವರು. ಇವರ ತಂದೆ ಮೇಧಾತಿಥಿ ಎಂಬ ಮಹರ್ಷಿಗಳು. ಕಣ್ವ ಋಷಿಗಳ ಕಥೆಯು ಮಹಾಭಾರತದ ಅನುಶಾಸನ ಪರ್ವದಲ್ಲಿದೆ. ರಾಜಾ ಭರತನು ನಡೆಸಿದ 'ಗೋವಿತತ' ವೆಂಬ ಯಜ್ಞದಲ್ಲಿ ಕಣ್ವರು ಮುಖ್ಯ ಪುರೋಹಿತರಾಗಿದ್ದರು. ಇವರು ಕೌರವನಿಗೆ ಪಾಂಡವರಲ್ಲಿ ಸಂಧಿ ಮಾಡಿಕೊಳ್ಳುವಂತೆ ಉಪದೇಶಿಸಿದವರಲ್ಲಿ ಓರ್ವರು. ಇವರ ಆಶ್ರಮಕ್ಕೆ 'ಕಣ್ವಾಶ್ರಮ'ವೆಂದು ಹೆಸರು. ಸಾವಿರಾರು ವಿದ್ಯಾರ್ಥಿಗಳಿಗೆ ಅನ್ನ, ಆಹಾರ, ವಸ್ತ್ರಗಳನ್ನು ಕೊಟ್ಟು ವಿದ್ಯೆಯನ್ನು ಅನುಗ್ರಹಿಸುವ ಕುಲಪತಿಯಾಗಿದ್ದರು.

ವಿಶ್ವಾಮಿತ್ರರು ಮತ್ತು ಮೇನಕೆ ಎಂಬ ಅಪ್ಸರ ಸ್ತ್ರೀಗೆ ಮಗಳಾಗಿ ಜನಿಸಿದವಳು ಶಕುಂತಲೆ. ಆದರೆ, ವಿಶ್ವಾಮಿತ್ರರು ಮಗುವನ್ನು ಕಾಡಿನಲ್ಲಿ ತೊರೆದು ತಪಸ್ಸಿಗಾಗಿ ತೆರಳುತ್ತಾರೆ. ಮೇನಕೆಯು ಸ್ವರ್ಗಲೋಕದ ಅಪ್ಸರ ಸ್ತ್ರೀ. ಹಾಗಾಗಿ, ಮಗುವನ್ನು ಅವಳು ಕೂಡ ಅಲ್ಲಿಯೇ ಬಿಟ್ಟು ಹೋಗುತ್ತಾಳೆ. ಆ ಶಿಶುವು ಅನಾಥವಾಗಿ ಕಾಡಿನ ಮಧ್ಯೆ ಅಳುತ್ತಿರುತ್ತದೆ.

ಆಗ ಕೆಲವು ಶಕುಂತ ಪಕ್ಷಿಗಳು ಸುತ್ತಲೂ ಸೇರಿ ನೀರನ್ನು ಇತ್ತು ತಮ್ಮ ಧಾಟಿಯ ಕೂಗುಗಳಿಂದ ಆ ಮಗುವನ್ನು ಸಂತಸಪಡಿಸುತ್ತಿದ್ದವು. ಶಕುಂತಗಳೆಂದರೆ ಒಂದು ಜಾತಿಯ ಪಕ್ಷಿಗಳು. ಈ ಕಾರಣದಿಂದ ಆ ಶಿಶುವಿಗೆ ಶಕುಂತಲಾ ಎಂದು ಹೆಸರಾಯಿತು.

ಕಾಡಿನಲ್ಲಿ ಮಗು ಅಳುತ್ತಿತ್ತು. ಕಣ್ವರು ಆ ದಾರಿಯಾಗಿ ಬರುತ್ತಿದ್ದರು. ಮಗುವಿನ ಆರ್ತನಾದ ಕೇಳಿ ಅವರಿಗೆ ಆಶ್ಚರ್ಯವಾಯಿತು. ಜ್ಞಾನದೃಷ್ಟಿಯಿಂದ ನೋಡಿದಾಗ ಅದು ತಪಸ್ವಿ ವಿಶ್ವಾಮಿತ್ರರ ಮಗುವೆಂದು ತಿಳಿಯಿತು. ಅವರು ಅದನ್ನು ಕಕ್ಕುಲಾತಿಯಿಂದ ಎತ್ತಿಕೊಂಡು ಆಶ್ರಮಕ್ಕೆ ಬಂದರು.

ಆಶ್ರಮದಲ್ಲಿರುವ ಉಳಿದ ಹೆಣ್ಣು ಮಕ್ಕಳೊಂದಿಗೆ ಆ ಮಗುವನ್ನೂ ಸಾಕಿದರು. ವಿದ್ಯೆ ಬುದ್ಧಿಯನ್ನು ಕಲಿಸಿದರು. ಕಣ್ವರ ಆಶ್ರಮದಲ್ಲಿ ಶಕುಂತಳೆ ಬಹಳ ಬುದ್ಧಿವಂತೆಯಾಗಿ ಬೆಳೆದಳು. ಮೇನಕೆಯ ಮಗಳಾದ ಕಾರಣ ನೋಡಲು ಸುಂದರವಾಗಿಯೂ ಇದ್ದಳು.

ಒಮ್ಮೆ ಹಸ್ತಿನಾವತಿಯ ಅರಸನಾದ ದುಷ್ಯಂತನು ಆ ಕಾಡಿಗೆ ಬೇಟೆಗೆ ಬಂದಿದ್ದ. ಅವನು ಕಣ್ವ ಮಹರ್ಷಿಗಳ ಆಶೀರ್ವಾದ ಪಡೆಯಲು ಅವರ ಆಶ್ರಮಕ್ಕೆ ಬಂದ. ಅಲ್ಲಿ ಶಕುಂತಲೆಯನ್ನು ನೋಡಿದ. ಅವಳ ರೂಪವನ್ನು ನೋಡಿ ಅನುರಕ್ತನಾದ. ಅವಳ ಗುಣವೂ ಹಿಡಿಸಿತು. ಶಕುಂತಲೆಯೂ ರಾಜನನ್ನು ತುಂಬ ಇಷ್ಟಪಟ್ಟಳು.

ಆಗ ಮದುವೆಯಾಗುವುದಕ್ಕೆ ಹಲವು ವಿಧಿಗಳಿದ್ದವು. ಗಾಂಧರ್ವ ವಿಧಿ ಅಂಥವುಗಳಲ್ಲೊಂದು. ಅಂದರೆ, ಗಂಡು ಹೆಣ್ಣು ಪರಸ್ಪರ ಮೆಚ್ಚಿ ಹೂಮಾಲೆಗಳನ್ನು ವಿನಿಮಯ ಮಾಡಿಕೊಳ್ಳುವುದು. ರಾಜ ಶಕುಂತಲೆಯನ್ನು ಗಾಂಧರ್ವ ವಿಧಿಯ ಮೂಲಕ ಮದುವೆಯಾದನು. ಮುಂದೊಂದು ದಿನ ಅರಮನೆಗೆ ಕರೆದೊಯ್ಯುವೆನೆಂದು ತೆರಳಿದನು.

ಕಣ್ವ ಮಹರ್ಷಿಗಳಿಗೆ ಈ ವಿಷಯವು ಶಕುಂತಲೆಯಿಂದ ತಿಳಿಯಿತು. ತನ್ನ ಸಾಕು ಮಗಳನ್ನು ಅರಸನೊಬ್ಬ ವರಿಸುತ್ತಾನೆ ಎಂದು ತಿಳಿದು ಅವರಿಗೆ

ಸಂತೋಷವಾಯಿತು.

ಕೆಲವು ಸಮಯದ ಬಳಿಕ ಶಕುಂತಲೆಯು ಮಗನೋರ್ವನನ್ನು ಹಡೆದಳು. ಕಣ್ವರು ಅವನಿಗೆ ಸಂಸ್ಕಾರಗಳನ್ನು ಮಾಡಿ ಭರತನೆಂದು ಹೆಸರಿಟ್ಟರು. ಪ್ರಾಣಿಗಳನ್ನೆಲ್ಲ ಅವನು ನಿಯಂತ್ರಿಸುತ್ತಿದ್ದುದರಿಂದ ಅವನಿಗೆ 'ಸರ್ವದಮನ' ನೆಂಬ ಹೆಸರೂ ಬಂತು. ಕಣ್ವರು ತಾಯಿ ಮಗನನ್ನು ಅರಸನಲ್ಲಿಗೆ ಕಳುಹಿಸಿಕೊಡಲು ಸಿದ್ಧರಾದರು. ಹೆಣ್ಣುಮಗಳು ತವರನ್ನು ತೊರೆದು ಪತಿಯ ಮನೆಯನ್ನು ಪ್ರವೇಶಿಸುವಾಗ ಹೇಗಿರಬೇಕು ಎಂಬುದನ್ನು ಕಣ್ವರು ಬೋಧಿಸಿದರು.

ಶಕುಂತಲೆಯು ತನ್ನ ಮಗನೊಂದಿಗೆ ದುಷ್ಯಂತನ ಅರಮನೆಗೆ ಬಂದಳು. ದುಷ್ಯಂತನು ಇವರನ್ನು ಸ್ವೀಕರಿಸಲು ಸಿದ್ಧನಾಗಲಿಲ್ಲ. ಅವನು ಶಕುಂತಲೆಯನ್ನು ತನ್ನ ಪತ್ನಿಯೆಂದು ಒಪ್ಪಿಕೊಳ್ಳಲಿಲ್ಲ. ಆದರೆ, ಅಶರೀರವಾಣಿಯೊಂದು ದುಷ್ಯಂತನು ಶಕುಂತಲೆಯನ್ನು ಸ್ವೀಕರಿಸಬೇಕೆಂದು ನುಡಿಯಿತು. ಅದರಂತೆ ದುಷ್ಯಂತನು ಶಕುಂತಲೆಯನ್ನೂ ತನ್ನ ಮಗನನ್ನೂ ಸ್ವೀಕರಿಸಿದನು.

ಆ ಭರತನಿಂದಾಗಿಯೇ ನಮ್ಮೀ ಭೂಭಾಗಕ್ಕೆ ಭರತಖಂಡವೆಂದು ಹೆಸರಾಗಿದೆ. ಭರತನು ಚಕ್ರವರ್ತಿಯಾಗಿ ಭರತಖಂಡವನ್ನು ಆಳಿದನು. ಅವನು ಕೂಡ ಕಣ್ವರ ಆಶ್ರಮದಲ್ಲಿ ಬಾಲ್ಯವನ್ನು ಕಳೆದುದರಿಂದ ಸತ್‌ಸಂಸ್ಕಾರಗಳು ಅವನಿಗೆ ಸಹಜವಾಗಿಯೇ ಬಂದಿದ್ದವು.

ಮಹಾಕವಿ ಕಾಳಿದಾಸನು ಇದೇ ಕಥೆಯನ್ನು ಬಳಸಿಕೊಂಡು 'ಅಭಿಜ್ಞಾನ ಶಾಕುಂತಲ' ವೆಂಬ ನಾಟಕವನ್ನು ಸಂಸ್ಕೃತ ಭಾಷೆಯಲ್ಲಿ ರಚಿಸಿದ್ದಾನೆ.

★ ★ ★ ★

## ಮುದ್ಗಲ

ಮುದ್ಗಲ ಮಹರ್ಷಿಗಳು ಭರ್ಮ್ಯಾಶ್ವರೆಂಬ ಮಹರ್ಷಿಗಳ ಪುತ್ರರು. ಇವರಿಗೆ ವ್ರೀಹಿದ್ರೋಣರೆಂದೂ ಮತ್ತೊಂದು ಹೆಸರಿದೆ. ಇವರು ಕುರುಕ್ಷೇತ್ರದಲ್ಲಿ ವಾಸ ಮಾಡುತ್ತಿದ್ದರೆಂದು ಮಹಾಭಾರತದ ವನಪರ್ವದಲ್ಲಿ ಉಲ್ಲೇಖಿಸಿದೆ. ಮುದ್ಗಲರಿಗೆ

ದಿವೋದಾಸನೆಂಬ ಮಗನೂ ಅಹಲ್ಯೆಯೆಂಬ ಮಗಳೂ ಇದ್ದರು. ಮುದ್ಗಲರು ಮಹಾ ತಪಸ್ವಿಗಳು. ಇವರ ಮಗಳಾದ ಅಹಲ್ಯೆಯು ಗೌತಮ ಮಹರ್ಷಿಗಳ ಪತ್ನಿಯಾಗಿದ್ದಳು. ಅಹಲ್ಯಾ-ಗೌತಮರ ಕಥೆಯು ರಾಮಾಯಣದಲ್ಲಿ ಪ್ರಸ್ತಾಪಿಸಲ್ಪಟ್ಟಿದೆ. ಅಹಲ್ಯಾ-ಗೌತಮರ ಪುತ್ರರಾದ ಶತಾನಂದರು ವಿದೇಹ ವಂಶದ ಅರಸರ ಪುರೋಹಿತರಾಗಿದ್ದರು. ವಿದೇಹ ವಂಶದ ಪ್ರಸಿದ್ಧ ಅರಸನಾದ ಜನಕಮಹಾರಾಜನ ಪುರೋಹಿತರಾಗಿದ್ದ ಶತಾನಂದರು ಮಿಥಿಲಾ ನಗರದಲ್ಲಿ ಶ್ರೀರಾಮಲಕ್ಷ್ಮಣರಿಗೆ ವಿಶ್ವಾಮಿತ್ರ ಮಹರ್ಷಿಗಳ ಕಥೆಯನ್ನು ಹೇಳಿರುವ ಬಗ್ಗೆ ರಾಮಾಯಣದಲ್ಲಿ ಉಲ್ಲೇಖವಿದೆ.

ಮಹಾತಪಸ್ವಿಗಳಾದ ಮುದ್ಗಲರನ್ನು ದುರ್ವಾಸ ಮುನಿಗಳು ಪರೀಕ್ಷಿಸಿದ ಕಥೆಯೊಂದಿದೆ. ಮುದ್ಗಲರು ಗದ್ದೆಗಳಲ್ಲಿ ಸಂಚರಿಸಿ ಅಲ್ಲಿ ಬಿದ್ದಿರುವ ಧಾನ್ಯದ ಕಾಳುಗಳನ್ನುಸಂಗ್ರಹಿಸಿ, ಅವುಗಳಿಂದ ಆಶ್ರಮಕ್ಕೆ ಬಂದ ಅತಿಥಿಗಳಿಗೆ ಅನ್ನದಾನವನ್ನು ಸಂತೋಷದಿಂದ ಮಾಡುತ್ತಿದ್ದರು. ಇವರ ಅನುಷ್ಠಾನವನ್ನು ಮತ್ತು ಮಾನಸಿಕ ಸ್ಥೈರ್ಯವನ್ನು ಪರೀಕ್ಷಿಸಬೇಕೆಂದು ಆವಾಗಾವಾಗ ದುರ್ವಾಸರು ಅತಿಥಿಗಳಾಗಿ ಬರುತ್ತಿದ್ದರು. ಹೀಗೆ, ಸುಮಾರು ಆರು ಸಲ ಮುದ್ಗಲರ ಆಶ್ರಮಕ್ಕೆ ದುರ್ವಾಸರು ಆಗಮಿಸಿ ನಾನಾ ವಿಧವಾಗಿ ಪೀಡೆಯನ್ನು ಕೊಟ್ಟರು. ಇವೆಲ್ಲವನ್ನೂ ಸಹಿಸಿಕೊಂಡ ಮುದ್ಗಲರು ಸಂತೋಷದಿಂದ ದುರ್ವಾಸರನ್ನು ಸತ್ಕರಿಸಿದರು. ಇದರಿಂದ ಸಂತೋಷಗೊಂಡ ದುರ್ವಾಸರು ಮುದ್ಗಲರಿಗೆ ಆಶೀರ್ವಾದವನ್ನಿತ್ತು ಅವರಿಗೆ ಸ್ವರ್ಗಸುಖವನ್ನು ಅನುಭವಿಸುವ ಅವಕಾಶವನ್ನು ನೀಡುವೆನೆಂದು ಹೇಳಿದರು.

ಋಷಿ ವಾಕ್ಯದಂತೆ ದೇವತೆಗಳು ಮುದ್ಗಲರನ್ನು ದೇವಲೋಕಕ್ಕೆ ಕರೆದುಕೊಂಡು ಬರುವುದಕ್ಕಾಗಿ ವಿಮಾನದೊಂದಿಗೆ ದೇವದೂತರನ್ನು ಮುದ್ಗಲರ ಆಶ್ರಮಕ್ಕೆ ಕಳುಹಿಸಿದರು. ಹಾಗೆ ಬಂದ ದೇವದೂತರಲ್ಲಿ ಮುದ್ಗಲರು, ಸ್ವರ್ಗದ ಕುರಿತು ಅನೇಕ ಪ್ರಶ್ನೆಗಳನ್ನು ಕೇಳಿದರು. ಅವುಗಳಿಗೆ ಉತ್ತರವಾಗಿ ಪುಣ್ಯವಂತರಿಗೆ ಸ್ವರ್ಗಸುಖಗಳು ದೊರೆಯುವುದನ್ನು ದೇವದೂತರು ಮುದ್ಗಲರಿಗೆ ಹೇಳಿದರು. ಆಗ ಪುಣ್ಯಕ್ಕೆ ಅನುಸಾರವಾಗಿ ಸ್ವರ್ಗಸುಖಗಳನ್ನು ಅನುಭವಿಸಿದ ಅನಂತರ ಏನಾಗುವುದೆಂದು

ಮುದ್ಗಲರು ಮರುಪ್ರಶ್ನಿಸಿದರು. ಅದಕ್ಕೆ ಉತ್ತರವಾಗಿ ಪುಣ್ಯವು ಅನುಭವಿಸಿ ಮುಗಿದ ಅನಂತರ ಅವರು ಮತ್ತೆ ಭೂಲೋಕದಲ್ಲಿ ಜನ್ಮ ತಳೆಯುವರು ಎಂದು ದೇವದೂತರು ಉತ್ತರಿಸಿದರು. ಹಾಗಿದ್ದರೆ ಸ್ವರ್ಗಸುಖ ಶಾಶ್ವತವಲ್ಲವೆಂಬ ನಿರ್ಣಯಕ್ಕೆ ಬಂದ ಮುದ್ಗಲರು ಅಂತಹ ಕ್ಷಣಿಕ ಸುಖವು ನನಗೆ ಬೇಡವೆಂದೂ, ಶಾಶ್ವತವಲ್ಲದೇ ಇರುವ ಸುಖಕ್ಕಾಗಿ ನಾನು ದೇವಲೋಕಕ್ಕೆ ಬರುವುದಿಲ್ಲವೆಂದು ಹೇಳಿ ಅವರನ್ನು ಕಳುಹಿಸಿದರು. ಶಾಶ್ವತವಾದ ಸುಖಪ್ರಾಪ್ತಿಗಾಗಿ ದೀರ್ಘಕಾಲ ತಪಸ್ಸನ್ನು ಮುಂದುವರಿಸಿದರು.

ಮಹಾವಿಷ್ಣುವನ್ನು ಪ್ರತ್ಯಕ್ಷೀಕರಿಸಿಕೊಳ್ಳುವುದಕ್ಕಾಗಿ ಮುದ್ಗಲರು ಮುಂದೊಂದು ದಿನ ರಾಮೇಶ್ವರದ ರಾಮಸೇತುವಿನ ಬಳಿ ಯಜ್ಞವೊಂದನ್ನು ಕೈಗೊಂಡರು. ಯಜ್ಞಕ್ಕೋಸ್ಕರ ಯಜ್ಞಶಾಲೆಯನ್ನು ನಿರ್ಮಾಣ ಮಾಡುವ ಸಂದರ್ಭದಲ್ಲಿ ಮಹಾವಿಷ್ಣುವು ಪ್ರತ್ಯಕ್ಷನಾಗಿ ಬೇಕಾದ ವರಗಳನ್ನು ಕೇಳುವಂತೆ ಹೇಳಿದನು. ಆಗ ಮುದ್ಗಲರು ''ನಾನು ನಿನ್ನ ಅನುಗ್ರಹದ ಸಲುವಾಗಿಯೇ ಈ ಯಜ್ಞವನ್ನು ಮಾಡಲಿದ್ದೇನೆ. ಈ ಯಜ್ಞವನ್ನು ಕಾಮಧೇನುವಿನ ಹಾಲಿನಿಂದಲೇ ಮಾಡಬೇಕೆಂದು ಸಂಕಲ್ಪಿಸಿದ್ದೇನೆ. ಆದುದರಿಂದ ಈ ಯಜ್ಞಕ್ಕೆ ಬೇಕಾದಷ್ಟು ಕಾಮಧೇನುವಿನ ಹಾಲನ್ನು ನನಗೆ ದೊರಕಿಸಿಕೊಡು'' ಎಂದಷ್ಟೇ ವಿನಂತಿಸಿದರು. ಸಂತೋಷಗೊಂಡ ಮಹಾವಿಷ್ಣುವು ವಿಶ್ವಕರ್ಮನ ಮೂಲಕ ಮುದ್ಗಲರ ಯಜ್ಞಶಾಲೆಯ ಬದಿಯಲ್ಲಿ ಸುಂದರವೂ ಶುದ್ಧವೂ ಆಗಿರುವ ಕೊಳವೊಂದನ್ನು ನಿರ್ಮಿಸಿ ಅದರಲ್ಲಿ ಯಜ್ಞಕ್ಕೆ ಬೇಕಾದಷ್ಟು ಹಾಲನ್ನು ಸುರಿಸುವಂತೆ ಕಾಮಧೇನುವಿಗೆ ಅಪ್ಪಣೆಯನ್ನಿತ್ತನು. ತಾನು ಸಂಕಲ್ಪಿಸಿದಂತೆ ಮುದ್ಗಲರು ಯಜ್ಞವನ್ನು ಪೂರ್ಣಗೊಳಿಸಿ ಮಹಾವಿಷ್ಣುವಿನ ಅನುಗ್ರಹಕ್ಕೆ ಪಾತ್ರರಾದರು. ಕಾಮಧೇನುವು ಹಾಲನ್ನು ಸುರಿಸಿದ ಕೊಳವು ಕ್ಷೀರಕುಂಡತೀರ್ಥವೆಂದು ಪ್ರಸಿದ್ಧವಾಯಿತು. ಇದು ರಾಮೇಶ್ವರದ ಬಳಿಯಲ್ಲಿ ಈಗಲೂ ಇದೆ.

★ ★ ★ ★

# ಚ್ಯವನ

ಹಿಂದೆ ವರುಣನು ಯಜ್ಞಮಾಡಿದಾಗ ಬ್ರಹ್ಮದೇವರು ಅಲ್ಲಿಗೆ ಬಂದು ಆ ಯಜ್ಞಾಗ್ನಿಯಿಂದ ಭೃಗು ಎಂಬ ಋಷಿಯನ್ನು ಉತ್ಪಾದಿಸಿದರು. ಆ ಭೃಗುಋಷಿಗೆ ಪುಲೋಮಾ ಎಂಬ ಪತ್ನಿಯಿದ್ದಳು. ಅವಳು ಭೃಗುಋಷಿಯ ಸೇವೆ ಮಾಡಿ ಗರ್ಭಧಾರಣ ಮಾಡಿದಳು. ಒಂದುದಿನ ಭೃಗುವು ಸ್ನಾನಕ್ಕೆ ನದಿಗೆ ಹೋದಾಗ ಪುಲೋಮ ಎಂಬ ದೈತ್ಯನು ಆಶ್ರಮದೊಳಗೆ ಬಂದನು. ಅತಿಥಿಯಾಗಿ ಬಂದ ಅವನಿಗೆ ಸಾಧ್ವಿ ಪುಲೋಮೆಯು ಹಾಲು ಹಣ್ಣುಗಳನ್ನಿತ್ತು ಉಪಚರಿಸಿದಳು. ಪುಲೋಮೆಯ ಅನಿಂದ್ಯವಾದ ಸೌಂದರ್ಯವನ್ನು ಕಂಡು ಆ ಪುಲೋಮ ದೈತ್ಯನು ಕಾಮಾಂಧನಾದ. ಮೊದಲೇ ಚೆಲುವಿನ ಪುತ್ಥಳಿಯಂತಿದ್ದ ಪುಲೋಮೆ ತುಂಬ ಗರ್ಭಿಣಿಯಿದ್ದುದರಿಂದ ಆ ದೈತ್ಯನ ಕಣ್ಣಿಗೆ ರತಿಯಂತೆಯೇ ತೋರಿದಳು.

ಪುಲೋಮೆಯು ಚಿಕ್ಕ ಮಗುವಿದ್ದಾಗ ಒಮ್ಮೆ ಹಟಮಾಡಿದಾಗ ಅವಳ ತಾಯಿ ತಂದೆಗಳು ಅವಳನ್ನು ಹೆದರಿಸಲಿಕ್ಕಾಗಿ ನಿನ್ನನ್ನು ಪುಲೋಮ ದೈತ್ಯನಿಗೆ ಕೊಟ್ಟುಬಿಡುತ್ತೇನೆ. ''ಏ ಪುಲೋಮ, ಬಾರೋ ಇವಳನ್ನು ಹಿಡಿದುಕೊಂಡು ಹೋಗು'' ಎಂದು ಸಹಜವಾಗಿಯೇ ನುಡಿದಿದ್ದರು.

ಆಗಲೇ ಪುಲೋಮನು ''ಇವಳ ತಾಯಿತಂದೆಗಳು ಇವಳನ್ನು ನನಗೆ ಕೊಟ್ಟುಬಿಟ್ಟಿದ್ದಾರೆ. ಆದ್ದರಿಂದ ಇವಳು ನನ್ನ ಪತ್ನಿಯೇ'' ಎಂದು ತಾನೇ ಮನಸ್ಸಿನಲ್ಲಿ ನಿರ್ಧರಿಸಿಕೊಂಡಿದ್ದ. ಈಗ ಸ್ವತಃ ಪುಲೋಮೆಯು ತನಗೆ ಫಲಮೂಲಗಳನ್ನಿತ್ತು ಆದರದಿಂದ ಉಪಚರಿಸುತ್ತಿರುವುದನ್ನು ಕಂಡು ಅವನಿಗೆ ತನ್ನ ಕೆಲಸವು ಆಗೇ ಹೋಯಿತು ಎನಿಸಿತು.

ಅವಳನ್ನು ಅಲ್ಲಿಂದ ಅಪಹರಿಸಿಕೊಂಡು ಹೋಗಬೇಕೆಂದು ಅವನು ನಿರ್ಧರಿಸಿ ಅತ್ತಿತ್ತ ನೋಡಿದ. ಯಾರೂ ಇರಲಿಲ್ಲ. ಆದರೆ ಅಲ್ಲಿಯೇ ಹೋಮಕುಂಡದಲ್ಲಿ ಅಗ್ನಿಯು ಉರಿಯುತ್ತಿತ್ತು. ಆಗ ಆ ದೈತ್ಯನು ಆ ಅಗ್ನಿಗೆ ''ಇವಳು ಯಾರ ಹೆಂಡತಿ ನಿಜ ಹೇಳು. ನೀನು ದೇವತೆಗಳ ಮುಖವಿದ್ದು ಸುಳ್ಳಾಡಬೇಡ. ಚಿಕ್ಕವಳಿದ್ದಾಗ ಈ ಭೃಗುಋಷಿಗಿಂತ ಮೊದಲೇ ನಾವಿವಳನ್ನು ವರಿಸಿರಲಿಲ್ಲವೇ! ಇವಳ ತಂದೆ

ತಾಯಿಗಳು ಇವಳನ್ನು ಮೊದಲೇ ನನಗೇ ಕೊಡಮಾಡಿರಲಿಲ್ಲವೇ! ಮೊದಲು ನನಗೆ ಇವಳು ವಾಚಾ ದತ್ತಳು. ನನ್ನಿಂದ ಮನಸಾ ಸ್ವೀಕೃತಳು. ಅಂದಬಳಿಕ ಇವಳ ಮೇಲೆ ನನ್ನದೇ ಹಕ್ಕಿದೆ. ನನ್ನ ಪತ್ನಿಯಾದ ಇವಳನ್ನು ಭೃಗು ಅನ್ಯಾಯದಿಂದ ಅಪಹರಿಸಿದ್ದಾನೆ. ನಾನೀಗ ಇವಳನ್ನು ಮರಳಿ ಅಪಹರಿಸುತ್ತೇನೆ. ನನಗೆ ಮೊದಲು ಕೊಡಮಾಡಿದ ಪುಲೋಮೆಯು ಇವಳೇ ಅಹುದೋ ಅಲ್ಲವೋ ನೀನೇ ಸಾಕ್ಷಿಹೇಳು'' ಎಂದು ಕೇಳಿದನು.

ಅದಕ್ಕೆ ಆ ಅಗ್ನಿಯು ''ಪುಲೋಮ, ನೀನು ಮೊದಲು ವರಿಸಿದ ಪುಲೋಮೆಯು ಇವಳೇ. ಆದರೆ ಇವಳನ್ನು ಅವಳ ತಂದೆಯು ನಿನಗೆ ಬರೀಮಾತಿನಿಂದ ಕೊಟ್ಟಿದ್ದರೂ ಮಂತ್ರದಿಂದ ಕೊಟ್ಟಿದ್ದಿಲ್ಲ. ನಿನಗಿಂತ ಶ್ರೇಷ್ಠವರನಾದ ಭೃಗುಋಷಿಗೆ ವೇದೋಕ್ತವಾದ ವಿಧಿಪೂರ್ವಕವಾಗಿ ಮಂತ್ರೋಚ್ಚಾರಣೆ ಮಾಡಿ ಧಾರೆಯೆರೆದು ಕೊಟ್ಟಿದ್ದಾನೆ. ಆದುದರಿಂದ ಇವಳಿಗೆ ಭೃಗುಋಷಿಯ ಧರ್ಮಪತ್ನಿ ಇವಳ ಮೇಲೆ ನಿನ್ನ ಹಕ್ಕಿಲ್ಲ'' ಎಂದು ಸ್ಪಷ್ಟವಾಗಿ ಹೇಳಿದರು.

ಆದರೆ ಕಾಮಾಂಧನಾದ ಆ ದೈತ್ಯನು ಅಗ್ನಿಯ ಮಾತನ್ನು ಕೇಳದೇ ವರಾಹರೂಪವನ್ನು ಸ್ವೀಕರಿಸಿ ಆ ಪುಲೋಮೆಯನ್ನು ಅಪಹರಿಸಿ-ಕೊಂಡೊಯ್ಯಹತ್ತಿದನು. ಆಗ ಆ ಪುಲೋಮೆಯ ಗರ್ಭದಲ್ಲಿದ್ದ ಭೃಗುಮುನಿಯ ಮಗುವು ಸಿಟ್ಟಿನಿಂದ ತಾಯಿಯ ಗರ್ಭದಿಂದ ಉಚ್ಚಿ ಕೆಳಗೆ ಬಿದ್ದುಬಿಟ್ಟಿತು. ಆದುದರಿಂದಲೇ ಅದಕ್ಕೆ ಚ್ಯವನ ಎಂದು ಹೆಸರಾಯಿತು.

ಸೂರ್ಯನಂತೆ ಅತ್ಯಂತ ತೀಕ್ಷ್ಣಪ್ರಕಾಶವುಳ್ಳ ಆ ಋಷಿಕುಮಾರನು ಜನಿಸಿದ ಕೂಡಲೇ ಆ ಮಗುವಿನ ಪ್ರಖರ ತೇಜಸ್ಸಿನಿಂದ ಆ ಪುಲೋಮ ದೈತ್ಯ ಸುಟ್ಟು ಬೂದಿಯಾಗಿ ಹೋದನು.

ಆಗ ಪುಲೋಮೆಯು ದುಃಖದಿಂದ ಆ ಮಗುವನ್ನು ಕರೆದುಕೊಂಡು ಅಳುತ್ತ ಕುಳಿತಿರುವದನ್ನು ಬ್ರಹ್ಮದೇವರು ಕಂಡು ಅವಳನ್ನು ಸಂತೈಸಿದರು. ಬ್ರಹ್ಮದೇವರಿಗೆ ಪುಲೋಮೆಯು ಸೊಸೆ-ಪುತ್ರವಧು-ಆದ್ದರಿಂದ ಅವಳ ದುಃಖವನ್ನು ಕಂಡು ಆ ಚತುರಾನನಿಗೂ ಹೃದಯ ತುಂಬಿಬಂದಿತು. ಆಗ ಪುಲೋಮೆಯ ಕಣ್ಣೀರು

ಕೋಡಿಯೊಡೆದು ಹರಿದು ಒಂದು ನದಿಯೇ ಆಯಿತು. ಅದಕ್ಕೆ ಬ್ರಹ್ಮದೇವರು 'ವಧೂಸರಾ' ಎಂದು ಹೆಸರಿಟ್ಟು ಸತ್ಯಲೋಕಕ್ಕೆ ತೆರಳಿದರು. ಈ ನದಿಯು ಚ್ಯವನಾಶ್ರಮದ ಸುತ್ತಲೂ ಹರಿಯುತ್ತದೆ.

ಆ ಮಗುವನ್ನು ಕರೆದುಕೊಂಡು ಪುಲೋಮೆಯು ಆಶ್ರಮಕ್ಕೆ ಬಂದು ಎಲ್ಲ ಸಮಾಚಾರವನ್ನು ಪತಿಗೆ ತಿಳಿಸಿದಳು. ಆಗ ಭೃಗುಋಷಿಯು ಕುಪಿತನಾಗಿ ''ನೀನು ಇಲ್ಲಿ ಇದ್ದುದನ್ನೂ ನೀನೇ ಆ ಪುಲೋಮೆಯು ಎಂಬ ಸಂಗತಿಯನ್ನೂ ಆ ದೈತ್ಯನಿಗೆ ಯಾರು ತಿಳಿಸಿಕೊಟ್ಟರು?'' ಎಂದು ಕೇಳಿದರು.

''ಅಗ್ನಿಯು'' ಎಂದು ಪುಲೋಮೆಯು ಅಂಜುತ್ತ ನುಡಿದಳು.

ಅದನ್ನು ಕೇಳಿ ಭೃಗುಋಷಿಗೆ ಪಿತ್ತ ನೆತ್ತಿಗೇರಿ ಅಗ್ನಿಗೆ ''ನೀನು ಸರ್ವಭಕ್ಷಕನಾಗು'' ಎಂದು ಶಾಪವನ್ನಿತ್ತನು. ಆಗ ಅಗ್ನಿದೇವನು ಭೃಗುಋಷಿಗೆ ''ಮುನಿಯೇ ಇದರಲ್ಲಿ ನನ್ನದೇನು ತಪ್ಪಿದೆ? ಸಾಕ್ಷಿಗೆ ಕರೆದ ಬಳಿಕ ಸತ್ಯ ಹೇಳುವುದು ಧರ್ಮವಲ್ಲವೇ? ಇವಳೇ ಪುಲೋಮೆಯೆಂದು ನಾನು ಹೇಳಿದರೂ ಇವಳು ಭೃಗುವಿನ ಪತ್ನಿ. ನಿನಗೆ ಇವಳನ್ನು ಅಪಹರಿಸಲಿಕ್ಕೆ ಅಧಿಕಾರವಿಲ್ಲ. ಅಪಹರಿಸಬೇಡ'' ಎಂದು ಸ್ಪಷ್ಟವಾಗಿಯೇ ಹೇಳಿದ್ದೇನೆ. ಇದರಲ್ಲಿ ನನ್ನದೇನೂ ತಪ್ಪಿಲ್ಲ. ತಪ್ಪಿಲ್ಲದೇ ನೀನು ನನಗೆ ಶಾಪಕೊಟ್ಟೆ. ನನಗೂ ತಿರುಗಿ ನಿನಗೆ ಶಾಪಕೊಡುವ ಶಕ್ತಿ ಇದೆ. ಆದರೆ ಬ್ರಾಹ್ಮಣರು ನನಗೆ ಯಾವಾಗಲೂ ಮಾನ್ಯರಾದುದರಿಂದ ನಿನಗೆ ಪ್ರತಿಶಾಪವನ್ನು ಕೊಡುವುದಿಲ್ಲ. ಆದರೆ ನನಗೆ ನೀನು ಇದೇನು ಶಾಪವನ್ನು ಕೊಟ್ಟೆ! ನಾನು ಇಂದಿನವರೆಗೆ ಯೋಗ ಬಲದಿಂದ ಗಾರ್ಹಪತ್ಯ, ಆಹವನೀಯ, ದಕ್ಷಿಣಾಗ್ನಿ ಮುಂತಾದ ಕಡೆಗಳಲ್ಲಿ ಬೇರೆ ಬೇರೆ ರೂಪದಿಂದ ಇದ್ದು ಯಜ್ಞಯಾಗ, ಹವ್ಯ, ಕವ್ಯ ಮುಂತಾದ ಎಲ್ಲ ದೇವಪಿತೃ ಕಾರ್ಯಗಳಲ್ಲಿ ಪಿತೃದೇವತೆಗಳ ಮುಖವಾಗಿ ಇದ್ದೆ. ಅವರವರ ಆಹುತಿಗಳನ್ನು ಅವರಿಗೆ ಸರಿಯಾಗಿ ತಲುಪಿಸುತ್ತಿದ್ದೆ. ಆದರೆ ಈಗ ನಾನು ಸರ್ವಭಕ್ಷನಾಗಿ ಎಲ್ಲವನ್ನೂ ಕಬಳಿಸ ಹತ್ತಿದರೆ ಪಾವಿತ್ರ್ಯಕ್ಕೇ ಭಂಗ ಬಂದು ನಾನು ದೇವತೆಗಳಿಗೆ ಮುಖವಾಗುವದೆಂತು?'' ಎಂದಂದು ಅಗ್ನಿದೇವನು ಅದೃಶ್ಯನಾಗಿಬಿಟ್ಟನು. ಆಗ ಜಗತ್ತಿನಲ್ಲಿಯ ದೇವಪಿತೃಕಾರ್ಯಗಳೆಲ್ಲ ಒಮ್ಮೆಲೇ ನಿಂತುಹೋದವು. ಯಜ್ಞ,

ಯಾಗ, ಅಗ್ನಿಹೋತ್ರಾದಿಗಳೆಲ್ಲ ನಿಂತುಹೋಗಿ ಋಷಿಗಳು ದೇವತೆಗಳಿಗೂ, ದೇವತೆಗಳು ಬ್ರಹ್ಮದೇವರಿಗೂ ಶರಣುಹೋದರು.

ಆಗ ಬ್ರಹ್ಮದೇವರು ಬಂದು ಅಗ್ನಿಗೆ ಸಮಾಧಾನ ಮಾಡಿ "ಅಗ್ನಿ, ನೀನು ಸರ್ವಭಕ್ಷನಾದರೂ ಅಪವಿತ್ರನೆಂದೂ ಆಗುವುದಿಲ್ಲ. ನಿನ್ನ ಸ್ಪರ್ಶದಿಂದಲೇ ಜಗತ್ತಿನಲ್ಲಿ ಎಲ್ಲ ವಸ್ತುಗಳಿಗೂ ಶುದ್ಧಿ ಪಾವಿತ್ರ್ಯಗಳು ಪ್ರಾಪ್ತವಾಗುವುವು. ಮತ್ತು ನೀನು ಸರ್ವಶರೀರದಿಂದ ಸರ್ವಭಕ್ಷನಾಗುವದೇ ಇಲ್ಲ. ನಿನ್ನ ಪೃಷ್ಠದ್ವಾರದಲ್ಲಿಯ ಜ್ವಾಲೆಗಳೂ ಮತ್ತು ಹೆಣಗಳನ್ನು ಸುಡುವ ನಿನ್ನ ಕ್ರವ್ಯಾದ ಮೂರ್ತಿಯೂ ಸರ್ವಭಕ್ಷವಾಗುವವು. ನಿನಗೆ ಅನೇಕ ರೂಪಗಳಿದ್ದು ನೀನು ಕ್ರವ್ಯಾದರೂಪದಿಂದ ಏನೆಲ್ಲವನ್ನು ಕಬಳಿಸಿಯೂ ಅಪವಿತ್ರನಾಗದೇ ದೇವತೆಗಳ ಮುಖನೂ ಆಗು. ಮತ್ತು ನಿನ್ನ ಮುಖದಲ್ಲಿ ಹೋಮ ಮಾಡಿದ್ದನ್ನು ದೇವತಾಪಿತೃಗಳಿಗೆ ಮುಟ್ಟಿಸು ಮತ್ತು ಆ ಮಹರ್ಷಿ ಭೃಗುಬ್ರಾಹ್ಮಣನ ಶಾಪವನ್ನು ಸತ್ಯಗೊಳಿಸು" ಎಂದು ಹೇಳಿ ಅದೃಶ್ಯರಾದರು. 'ಹಾಗೇ ಆಗಲಿ' ಎಂದು ಅಗ್ನಿಯು ಹೇಳಿ ಬ್ರಹ್ಮದೇವರ ಆಜ್ಞೆಯಂತೆ ಎಲ್ಲ ಹೋಮಕುಂಡಗಳಲ್ಲಿಯೂ ಪ್ರಾದುರ್ಭೂತನಾದನು. ಮತ್ತೆ ಪಿತೃದೇವತಾದಿ ಕಾರ್ಯಗಳು ಮೊದಲಿನಂತೆ ಸುರಕ್ಷಿತವಾಗಿ ನಡೆದವು.

ಚ್ಯವನರು ಅತ್ಯಂತ ಉಗ್ರವಾದ ತಪಸ್ಸನ್ನು ಕೈಕೊಂಡಿದ್ದರು. ಅವರ ಮೈಸುತ್ತೆಲ್ಲ ಹುತ್ತ ಬೆಳೆಯಿತು. ಅವರ ಮೇಲೆ ಎಲೆಬಳ್ಳಿ ಬೆಳೆದಿದ್ದವು. ಇರುವೆಗಳು ಸಾಲುಗಟ್ಟಿ ಸಂಚರಿಸುತ್ತಿದ್ದವು.

ಇಷ್ಟಾದರೂ ಆ ಮಹರ್ಷಿಗಳಿಗೆ ಇದಾವುದರದೂ ಎಚ್ಚರವೇ ಇರಲಿಲ್ಲ. ಮುಂದೊಂದು ದಿನ ಆ ದೇಶದ ದೊರೆಯಾದ ಶರ್ಯಾತಿ ಮಹಾರಾಜನು ತನ್ನ ಸೇನಾಪರಿವಾರ ಹಾಗೂ ರಾಣೀವಾಸದ ಜನರೊಂದಿಗೆ ವನವಿಹಾರಕ್ಕೆಂದು ಆ ಸ್ಥಳಕ್ಕೆ ಬಂದನು. ರಾಜರಾಣಿಯರ ಸಲುವಾಗಿ ದೊಡ್ಡ ತಂಬೂಗಳನ್ನು ಹೊಡೆದು ಉಳಿದ ಜನರೆಲ್ಲ ಗುಹಾಗಿಡಗಳ ನೆರಳುಗಳಲ್ಲಿ ಆಶ್ರಯ ಪಡೆದರು.

ರಾಜಕುಮಾರಿಯಾದ ಸುಕನ್ಯೆಯು ತನ್ನ ಗೆಳತಿಯರೊಂದಿಗೆ ಒಮ್ಮೆ ವನವೀಕ್ಷಣಕ್ಕೆ ತೆರಳಿದಳು. ನಿಸರ್ಗ ಸೌಂದರ್ಯದ ನೆಲವೀಡಾದ ಆ ಅರಣ್ಯದ

ಪ್ರಕೃತಿ ಸೌಂದರ್ಯವನ್ನು ಕಂಡು ಮುಗ್ಧರಾಗಿ ಹೂಗಳನ್ನು ಕೀಳಬೇಕೆಂದು ಗೆಳತಿಯರು ಆ ವಿಪಿನ ಗರ್ಭದಲ್ಲಿ ಪ್ರವೇಶ ಮಾಡಿದರು. ಬಣ್ಣದ ಚಿಟ್ಟೆಗಳಂತೆ ಆ ತರುಣ ಗೆಳತಿಯರೆಲ್ಲರೂ ವನಾಂತರದಲ್ಲಿ ಹೋದಾಗ ಅಲ್ಲಿ ಒಂದು ದೊಡ್ಡ ಹುತ್ತ ಬೆಳೆದಿತ್ತು.

ಆ ದೊಡ್ಡದಾದ ಹುತ್ತದ ನಟ್ಟನಡುವೆ ಎರಡು ಕಾಜಿನ ಗುಂಡುಗಳಂತೆ ಏನೋ ಲಕಲಕ ಹೊಳೆಯುತ್ತಿದ್ದವು. ಅದನ್ನು ನೋಡಿ ಚಪಲ ಚಿತ್ತರಾದ ಸುಕನ್ಯಾ ಮೊದಲಾದ ಎಲ್ಲ ಯುವತಿಯರ ವೃಂದಕ್ಕೆ ಕುತೂಹಲವೆನಿಸಿ ಅದರ ಸಮೀಪಕ್ಕೆ ಹೋದರು. ಅಲ್ಲಿ ಸುತ್ತಮುತ್ತು ಏನೂ ಇರಲಿಲ್ಲ. ಮೇಲೆಲ್ಲ ಹುತ್ತ ಹಬ್ಬಿದೆ. ಅದರ ಮೇಲೆ ಸಾಲುಗಟ್ಟಿ ಇರುವೆಗಳು ಓಡಾಡುತ್ತಲಿವೆ. ಆದರೆ ಆ ಹುತ್ತದ ನಡುವೆ ಎರಡು ತೇಜೋ ಗೋಲಕಗಳು ಮಿಣುಕು ಹುಳದಂತೆ ಮಿರಿಮಿರಿ ಮಿಂಚುತ್ತಲಿವೆ.

ಅದನ್ನು ನೋಡಿ ರಾಜಕುಮಾರಿಯು ಬಾಲಸಹಜವಾದ ಹುಡುಗಾಟಿಕೆಯ ಬುದ್ಧಿಯಿಂದ ಅಲ್ಲಿಯೇ ಬಿದ್ದ ಒಂದು ಮುಳ್ಳನ್ನು ತೆಗೆದುಕೊಂಡು ಆ ಎರಡೂ ಕಾಜಿನ ಗೋಲಕಗಳಲ್ಲಿ ಚುಚ್ಚಿಬಿಟ್ಟಳು.

ಆಗ ಒಮ್ಮೆಲೆ 'ಆಹ, ಅಯ್ಯೋ!' ಎಂದು ನರಳಿದ ಸಪ್ಪಳವಾಗಿ ಕಣ್ಣಿಂದ ರಕ್ತವು ಸೋರಹತ್ತಿತು. ಅದನ್ನು ನೋಡಿ ಆ ತರುಣ ತರಳೆಯರೆಲ್ಲರೂ ಗಾಬರಿಯಾಗಿ ಅಲ್ಲಿಂದ ಕಾಲ್ಕೆಗೆದು ತಾವಿಳಿದ ಸ್ಥಳಕ್ಕೆ ಮರಳಿ ಬಂದರು. ಆ ಹುತ್ತವು ಚ್ಯವನರ ಮೈಮೇಲಿನ ಹುತ್ತವೇ ಆಗಿದ್ದು ನಡುವೆ ಲಕಲಕ ಹೊಳೆಯುವ ಆ ಕಾಜಿನ ಗೋಲಕಗಳು ಚ್ಯವನರ ಕಣ್ಣೇ ಆಗಿದ್ದವು.

ಕಣ್ಣು ಯಾವಾಗಲೂ ಸೂಕ್ಷ್ಮವಾದ ಇಂದ್ರಿಯ. ಅದರಲ್ಲಿ ಚೂಪಾದ ಮುಳ್ಳನ್ನು ಜೋರಾಗಿ ಚುಚ್ಚಿದ ಕೂಡಲೇ ಭಯಂಕರ ನೋವಾಗಿ ಬಳಬಳ ರಕ್ತವು ಸುರಿಯಹತ್ತಿತು.

ಆಗ ಮುನಿಗಳ ತಪೋಭಂಗವಾಯಿತು. ಕಣ್ಣಿಗೆ ಬಹಳ ವೇದನೆಯೂ ಆಯಿತು. ಅವರಿಗೆ ಕೋಪವೂ ಬಂದಿತು, ತಾಪವೂ ಆಯಿತು. ಅಪರಾಧಿ ರಾಜಪರಿವಾರಕ್ಕೆಲ್ಲ ಶಾಪವನ್ನು ಚೆಲ್ಲಿದರು.

ಆದರಿಂದ ಇತ್ತ ಮಹಾರಾಜ ಶರ್ಯಾತಿಯ ಸೈನಿಕರಿಗೆಲ್ಲ ಒಮ್ಮೆಲೆ ಮಲಮೂತ್ರಗಳು ಕಟ್ಟಿಹೋದವು. ರಾಜಪರಿವಾರದಲ್ಲಿನಿಮಿಷಾರ್ಧದಲ್ಲಿಮಹಾ ಕೋಲಾಹಲವೆದ್ದು ಹೋಯಿತು. ಆದನ್ನು ತಿಳಿದ ಮಂತ್ರಿ ಮಹಾರಾಜ ಮುಂತಾದವರೆಲ್ಲರೂ ಹೆದರಿ ಹೌಹಾರಿ ಹೋದರು.

ಆಗ ಶರ್ಯಾತಿಯು ತಾನಾಗಿ ಎಲ್ಲ ಜನರನ್ನೂ ಒಂದೆಡೆಗೆ ಸೇರಿಸಿ ''ಸೈನಿಕರೇ ಹಾಗೂ ನನ್ನ ಪರಿವಾರದ ಜನರೇ, ನಾವೀಗ ವನವಿಹಾರಕ್ಕಾಗಿ ಬಂದ ಸ್ಥಳವು ಮಹರ್ಷಿ ಚ್ಯವನ ಮುನಿಗಳು ತಪಂಗೈಯುವ ಪುಣ್ಯಸ್ಥಳವಾಗಿದೆ. ಅವರು ತಪಃಸಮಾಧಿಗೆ ಕುಳಿತ ಸ್ಥಳವೂ ಇಲ್ಲಿಯೇ ಸಮೀಪದಲ್ಲಿದ್ದು, ಯಾರಾದರೂ ಅವರು ತಪೋಮಗ್ನರಾಗಿ ಧ್ಯಾನಾರೂಢ ಅವಸ್ಥೆಯಲ್ಲಿದ್ದ ತಪೋಭೂಮಿಗೆ ಹೋಗಿ ಮುನಿಗಳಿಗೇನಾದರೂ ಅಪಚಾರವನ್ನು ಮಾಡಿ ಬಂದಿದ್ದೀರಾ! ಒಮ್ಮೆಲೆ ಎಲ್ಲ ಸೈನಿಕರಿಗೂ ಹೀಗೆ ಏಕಾಏಕಿ ಮಲಮೂತ್ರಗಳು ಕಟ್ಟಾಬೇಕಾದರೆ ನಮ್ಮ ಜನರಿಂದ ಏನೋ ಬ್ರಹ್ಮದ್ರೋಹ ನಡೆದಿದೆ ಎಂದು ನನಗಂತೂ ತೋರುತ್ತಿದೆ.

ಆದ್ದರಿಂದ ನಿಮ್ಮಲ್ಲಿ ಯಾರು ಹೋಗಿ ಮಹರ್ಷಿಗಳಿಗೆ ಅಪಚಾರವನ್ನು ಬಗೆದಿದ್ದೀರಿ? ಹೇಳಿರಿ'' ಎಂದು ಕೇಳಿದನು. ಆ ಎಲ್ಲ ಸೈನಿಕರೂ ಈ ವಿಷಯದಲ್ಲಿ ವಸ್ತುತಃ ನಿರುಪದ್ರವಿಗಳೇ. ಆದುದರಿಂದ ಅವರೆಲ್ಲರೂ ''ನಮಗಾರಿಗೂ ಆ ವಿಷಯವೇ ತಿಳಿದಿಲ್ಲ. ನಾವಾರೂ ಅತ್ತ ಹೋಗಿಲ್ಲ, ಯಾವುದೇ ತರಹದ ಋಷಿದ್ರೋಹವನ್ನೂ ಕೂಡ ಮಾಡಿಲ್ಲ'' ಎಂದು ಸ್ಪಷ್ಟವಾಗಿಯೇ ಹೇಳಿದರು. ಅದರಂತೆ ಮಹಾರಾಜನು ತನ್ನ ಪರಿವಾರ ಜನರನ್ನೂ ವಿಚಾರಿಸಿದನು, ಅವರೂ ತಮಗೆ ಗೊತ್ತಿಲ್ಲವೆಂದು ತಿಳಿಸಿದರು.

ಹೀಗೆ ಸಾಮ ದಂಡ ಎರಡೂ ಉಪಾಯಗಳಿಂದ ವಿಚಾರಣೆ ಮಾಡಿದರೂ ನಿಜವಾದ ಅಪರಾಧಿಯು ದೊರಕದ್ದರಿಂದ ಮಹಾರಾಜನಿಗೆ ದೊಡ್ಡ ಚಿಂತೆಯೇ ಆಯಿತು. ಮತ್ತು ಸೇನಾಪರಿವಾರದ ಜನರೆಲ್ಲರೂ ಕ್ಷಣಕ್ಷಣಕ್ಕೂ ಮಲಮೂತ್ರ ಬಾಧೆಯಿಂದ ಬಾಯಿ ಬಿಡಹತ್ತಿದರು. ಅಳುವುದೂ ಒದರುವುದೂ ಚೀರುವುದೂ ನಡೆಯಿತು.

ಇದನ್ನೆಲ್ಲ ಕಂಡು ಮೊದಲೇ ಗಾಬರಿಯಾದ ಸುಕನ್ಯೆಯು ಅಂಜುತ್ತ ಅಂಜುತ್ತ ತಂದೆಯ ಹತ್ತಿರ ಬಂದು ತಾನು ಇಲ್ಲಿಂದ ಹತ್ತಿರದಲ್ಲಿಯೇ ಇರುವ ಒಂದು ಹುತ್ತದ ಎರಡು ಹೊಳೆಯುವ ಕಾಜಿನ ಗುಂಡುಗಳಂತಿದ್ದ ತೇಜೋಗೋಲಗಳಿಗೆ ಮುಳ್ಳು ಚುಚ್ಚಿದ್ದನ್ನೂ ಹಾಗೂ ಅದರಿಂದ ರಕ್ತ ಬಂದು ಯಾರೋ ಒಬ್ಬರು "ಅಯ್ಯೋ" ಎಂದು ಒರಲಿದ್ದನ್ನೂ ಕೂಡ ತಿಳಿಸಿದಳು.

ಇದನ್ನು ಕೇಳಿ ಶರ್ಯಾತಿಯು ಕೂಡಲೇ ಆ ಋಷಿಗಳಿದ್ದಲ್ಲಿಗೆ ಪತ್ನೀ ಹಾಗೂ ಮಗಳೊಂದಿಗೆ ತೆರಳಿದನು.

ಅದೇ ಆಗ ಮುನಿಗಳು ಕಣ್ಣಿಗಾದ ವೇದನೆಯಿಂದ ತಮ್ಮ ತಪಸ್ಸಮಾಧಿಯಿಂದ ಎದ್ದು ಆಶ್ರಮದಲ್ಲಿ ತಮ್ಮ ನೇತ್ರಗಳನ್ನು ಹಿಡಿದುಕೊಂಡೇ ಕುಳಿತಿದ್ದರು. ಮುಪ್ಪಿನಿಂದ ಮೊದಲೇ ಹಣ್ಣಾದ ಅವರಿಗೆ ಇಂಥ ಬೇನೆ ಬೇಸರಿಕೆ ಬಂದಾಗ ಪ್ರೀತಿಯಿಂದ ಉಪಚಾರ ಮಾಡುವವರೂ ಆಶ್ರಮದಲ್ಲಿ ಯಾರೂ ಇರಲಿಲ್ಲ. ಅವರಿಗೆ "ಇನ್ನು ತಮ್ಮ ಕಣ್ಣು ಹೋಗಿಬಿಟ್ಟು ತಾವು ಕುರುಡಾದರೆ ತಮಗೆ ಇನ್ನು ಮುಪ್ಪಿನಕಾಲದಲ್ಲಿ ಯಾರು ಸಹಾಯಮಾಡುವವರಿಲ್ಲದೇ ಎಂಥ ಗೋಳಾಗಬಹುದು?" ಎಂದು ಒಂದೊಂದೇ ಯೋಚನೆಗಳು ಬಂದು ಚಿತ್ತವನ್ನು ಕದಡಹತ್ತಿದವು. ಆಗ ಅವರಿಗೆ "ಈ ವಯಸ್ಸಿನಲ್ಲಿ ತಮ್ಮ ಯೋಗಕ್ಷೇಮವನ್ನು ನೋಡಿಕೊಳ್ಳುವ ಧರ್ಮಪತ್ನಿಯೊಬ್ಬಳಿದ್ದರೆ ಎಷ್ಟು ಒಳ್ಳೇದಾಗುತ್ತಿತ್ತು!" ಎಂದು ವಿಚಾರ ಬರಹತ್ತಿತು.

ಅದೇ ವೇಳೆಯಲ್ಲಿ ಶರ್ಯಾತಿ ಮಹಾರಾಜನು ಅಲ್ಲಿಗೆ ಬಂದು ಅವರ ಪಾದಕ್ಕೆ ಬಿದ್ದು "ಪೂಜ್ಯರು ಕ್ಷಮಿಸಬೇಕು. ನನ್ನ ಮಗಳಾದ ಸುಕನ್ಯೆಯು ತಿಳಿಯದೇ ಹುತ್ತದಲ್ಲಿ ಹೊಳೆಯುವ ತಮ್ಮ ಕಣ್ಣುಗಳನ್ನು ಮಿಣುಕು ಹುಳದಂತೆ ಕಂಡು ಹುಡುಗಾಟಿಕೆಯಿಂದ ಮುಳ್ಳು ಚುಚ್ಚಿದ್ದಾಳೆ. ಅವಳದು ತಪ್ಪಾಯಿತು. ತಾವು ಕ್ಷಮಿಸಬೇಕು" ಎಂದು ಬೇಡಿಕೊಂಡು ಸುಕನ್ಯೆಯನ್ನು ತಂದು ಅವರ ಪಾದದ ಮೇಲೆ ಹಾಕಿದನು. ಸುಕನ್ಯೆಯು ಮುನಿಗಳಿಗೆ ವಂದಿಸಿ ಭೀತಿಯಿಂದ ನಡುಗುತ್ತ ಅಲ್ಲಿಯೇ ಬಾಗಿ ನಿಂತಳು.

ಆಗ ಋಷಿಗಳು ತಮ್ಮ ನೋವಾದ ಕಣ್ಣನ್ನೆತುಸು ಪ್ರಯತ್ನಪೂರ್ವಕವಾಗಿ ತೆರೆದು ತನ್ನ ಕಣ್ಣಲ್ಲಿ ಮುಳ್ಳು ಚುಚ್ಚಿದ ಆ ಹೆಣ್ಣನ್ನು ಅರೆಕ್ಷಣ ನೋಡಿದರು. ಆಗ ಅವಳ ಮುಳ್ಳು ನೆಟ್ಟಂತೆ ಈಗ ಸುಕನ್ಯೆಯೇ ಆ ಋಷಿಗಳ ಕಣ್ಣಲ್ಲಿ ನೆಟ್ಟುಹೋದಳು.

ಮಹಾರಾಜನು ಮತ್ತೆ ಮತ್ತೆ ಮುನಿಗಳ ಕಾಲಿಗೆ ಬಿದ್ದು ಕೈಮುಗಿದು ಅಂಗಲಾಚಿ ಬೇಡಿಕೊಂಡು ಮಹರ್ಷಿಗಳಿಗೆ ಮಗಳ ಅಪರಾಧವನ್ನು ಕ್ಷಮಿಸಬೇಕೆಂದೂ ಮತ್ತು ತಮ್ಮ ಸೈನಿಕರ ಮಲಮೂತ್ರ ನಿರೋಧವಾದದ್ದು ಕೂಡಲೇ ಸರಿಯಾಗಲೆಂದು ಅನುಗ್ರಹಿಸಬೇಕೆಂದೂ ಕೇಳಿಕೊಂಡನು.

ಆಗ ಶೋಕ ಸಂತಾಪಗಳಿಂದ ಕೆರಳಿದ ಚ್ಯವನರು ರಕ್ತಬಸಿದು ಉರಿಯುತ್ತಿರುವ ತಮ್ಮ ಕಣ್ಣನ್ನು ಒದ್ದೆ ಬಟ್ಟೆಯಿಂದ ಒತ್ತಿ ಹಿಡಿದುಕೊಂಡು, ''ಮಹಾರಾಜ, ನಿನ್ನ ಮಗಳು ನನಗೆ ಅಕ್ಷಮ್ಯ ಅಪರಾಧವನ್ನು ಮಾಡಿದ್ದಾಳೆ. ಇದರಿಂದ ಈ ಮುಪ್ಪಿನ ಕಾಲದಲ್ಲಿ ಕಣ್ಣು ಹೋಗಿ ಬಿಟ್ಟರೆ ನಾನು ಪರಾಧೀನನಾಗಿ ಸ್ನಾನ, ಆಹ್ನಿಕ ದೇವಪೂಜೆ, ಯಾವುದನ್ನೂ ಮಾಡಲಾರದ ಪರಿಸ್ಥಿತಿ ಬಂದಿದೆ. ಈ ದುರವಸ್ಥೆಯಿಂದ ನಾನು ಸುಧಾರಿಸಿ ಮತ್ತೆ ಮೊದಲಿನಂತಾಗಬೇಕಾದರೆ ಬಹಳ ದಿನ ಬೇಕು. ಅಷ್ಟು ದಿನ ಪರಾಧೀನನಾದ ನನ್ನನ್ನು ಪ್ರೀತಿ ಅಂತಃಕರಣಗಳಿಂದ ಆರೈಕೆ ಮಾಡುವವರಾರು!

ಆದುದರಿಂದ ನನ್ನನ್ನು ಇಂಥ ಅವಸ್ಥೆಗೆ ತಂದಿಟ್ಟ ನಿನ್ನ ಮಗಳನ್ನೇ ನನಗೆ ಈಗ ಮದುವೆ ಮಾಡಿಕೊಡು. ಅವಳು ನನ್ನ ಧರ್ಮಪತ್ನಿಯಾಗಿ ನನ್ನ ಸೇವೆಮಾಡಲಿ. ಇದರಿಂದ ನನಗೂ ಆರೋಗ್ಯವಾಗುವದು. ಅವಳಿಗೂ ಕಲ್ಯಾಣವಾಗುವುದು. ನಿನಗೂ ಬ್ರಹ್ಮರ್ಷಿಯೋರ್ವನಿಗೆ ಕನ್ಯಾದಾನ ಮಾಡಿದ ಪುಣ್ಯ ಬರುವುದು'' ಎಂದು ಹೇಳಿದರು.

ಆಗ ರಾಜರಾಣಿಯರಿಬ್ಬರೂ ಅನುಮಾನಿಸ ಹತ್ತಿದರು. ಬಡತನದ ಬೆನ್ನೆಲಬಿನಂತಿರುವ ಈ ಗುಡಿಸಲಿನಲ್ಲಿರುವ ಇಂಥ ಮುದಿಮುನಿಗೆ ಬಂಗಾರದ ಗೊಂಬೆಯಂತಿರುವ ಆ ಎಳೆ ಮಗುವನ್ನು ಕೊಡುವದೆಂತು! ಅವರಿಗೆ ಭಾರೀ ಚಿಂತೆಯಾಯಿತು.

ಆಗ ಸುಕನ್ಯೆಯು ಅವರಿಬ್ಬರನ್ನೂ ಆಚೆಗೆ ಕರೆದುಕೊಂಡು ಹೋಗಿ "ಅಮ್ಮ, ನನಗಾಗಿ ನೀವು ಹಾಗೂ ನಮ್ಮ ಸೈನಿಕರೆಲ್ಲರೂ ಇಷ್ಟು ಕಷ್ಟ ಪಡುವುದನ್ನು ನಾನು ನೋಡಲಾರೆ. ನಾನು ಆ ಮುನಿಗಳಿಗೆ ಅಪರಾಧ ಮಾಡಿದ್ದೇನೆ. ಅವರ ಸೇವೆ ಮಾಡಿ ಆ ಪಾಪವನ್ನು ತೊಳೆದುಕೊಳ್ಳಲಿಕ್ಕೆ ಇದೊಂದು ಒಳ್ಳೆಯ ಸುಪ್ರಸಂಗ ಬಂದಿದೆ. ಸಾಯುವವರೆಗೂ ಮದುವೆಯನ್ನೇ ಮಾಡಿಕೊಳ್ಳದೆ ನೈಷ್ಠಿಕ ಬ್ರಹ್ಮಚರ್ಯ ವ್ರತದಿಂದಲೇ ಇರುತ್ತೇನೆಂದು ಪಣತೊಟ್ಟು ಈ ವಯಸ್ಸಿನವರೆಗೂ ಹಾಗೆ ಇದ್ದ ಈ ಮಹರ್ಷಿಗಳು ಈಗ ನನ್ನನ್ನು ಮದುವೆಯಾಗುತ್ತೇನೆ ಎಂದು ಒಪ್ಪಿದ್ದು ನನ್ನ ಸುದೈವವೇ ಸರಿ. ಅಂಥ ಪುಣ್ಯರಾಶಿಯ ಕೈಹಿಡಿಯಬೇಕಾದರೆ ನನ್ನ ಪೂರ್ವಜನ್ಮದ ಪುಣ್ಯರಾಶಿಯೆಲ್ಲ ಈಗ ಒದಗಿ ಬಂದಿದೆಯೆಂದೇ ನಾನು ಭಾವಿಸಿದ್ದೇನೆ. ನಿಮಗಾದರೂ ಇಂಥ ಸತ್ಪಾತ್ರನಲ್ಲಿ ಕನ್ಯಾದಾನ ಮಾಡಿಕೊಟ್ಟರೆ ಮಹಾಪುಣ್ಯ ಉಂಟು, ಆದುದರಿಂದ ನೀವೀಗ ಯಾವ ವಿಚಾರವನ್ನೂ ಮಾಡದೇ ನನ್ನನ್ನು ಚ್ಯವನರಿಗೆ ಮದುವೆ ಮಾಡಿಕೊಡಿರಿ. ಅವರು ನನ್ನನ್ನು ಅಪೇಕ್ಷೆ ಮಾಡಿದ ಕೂಡಲೇ ಮನಸ್ಸಿನಿಂದ ನಾನು ಅವರನ್ನೆ ಪತಿಯೆಂದು ಒರಿಸಿ ಬಿಟ್ಟಿದ್ದೇನೆ. ಬೇಗ ಮುಂದಿನಕಾರ್ಯ ಮುಗಿಸಿರಿ" ಎಂದು ಹೇಳಿದಳು.

ಆಗ ಅದರಂತೆ ಆ ರಾಜದಂಪತಿಗಳು ಅಲ್ಲಿಯೇ ಸುಕನ್ಯೆಯನ್ನು ಆ ಮಹರ್ಷಿ ಚ್ಯವನರಿಗೆ ವಿಧಿಪೂರ್ವಕವಾಗಿ ಮದುವೆ ಮಾಡಿಕೊಟ್ಟರು. ಸುಕನ್ಯೆಯು ಅತ್ಯಂತ ಆನಂದದಿಂದ ಆ ತಪೋನಿಧಿಯ ಕೈಹಿಡಿದು ದುಃಖ ತುಂಬಿದ ತನ್ನ ತಾಯಿತಂದೆಗಳಿಗೆ "ನನ್ನ ವಿಷಯದಲ್ಲಿ ನೀವೇನೂ ಯೋಚಿಸುವ ಕಾರಣವಿಲ್ಲ. ನಾನಿಲ್ಲಿ ಈ ಸತ್ಪುರುಷರ ಸೇವೆಯಲ್ಲಿ ನಿಮ್ಮ ಮನೆಗಿಂತ ಸುಖವಾಗಿಯೇ ಇರುತ್ತೇನೆ" ಎಂದು ಹೇಳಿ ಸಮಾಧಾನ ಮಾಡಿ ರಾಜಧಾನಿಗೆ ಅವರೆಲ್ಲರನ್ನು ಕೊಟ್ಟು ಕಳಿಸಿದಳು.

ರಾಜಪರಿವಾರದವರೆಲ್ಲರೂ ಹೊರಟು ಹೋದ ಬಳಿಕ ಸುಕನ್ಯೆಯು ಕಾಯೇನ ವಾಚಾ ಮನಸಾ ತ್ರಿಕರಣ ಶುದ್ಧಿಪೂರ್ವಕವಾಗಿ ಅತ್ಯಂತ ಭಕ್ತಿಯಿಂದ ಚ್ಯವನರ ಸೇವೆ ಮಾಡಹತ್ತಿದಳು.

ಅವಳ ನಿರಂತರ ಸೇವಾಶುಶ್ರೂಷೆಯ ಫಲವಾಗಿ ಕೆಲವೇ ದಿನಗಳಲ್ಲಿ ಮಹರ್ಷಿಗಳ ಕಣ್ಣುಗಳು ಗುಣವಾದವು. ಹೊತ್ತು ಹೊತ್ತಿಗೆ ಊಟ, ಉಪಚಾರ, ಸೇವೆ, ಶುಶ್ರೂಷೆಗಳಿಂದ ಮಹರ್ಷಿಗಳ ಒಣಗಿ ಕಟ್ಟಿಗೆಯಂತಾದ ಶರೀರವೂ ಕೂಡ ಮಾಂಸತುಂಬಿ ಪುಷ್ಟವೂ ಆರೋಗ್ಯಪೂರ್ಣವೂ ಆಯಿತು.

ಸುಕನ್ಯೆಯ ಸೇವೆ ಹಾಗೂ ಪ್ರೀತಿಪೂರ್ಣವಾದ ಉಪಚಾರದಿಂದ ಮಹರ್ಷಿಗಳಿಗೆ ಹೊಸಬಲವೇ ಬಂದಂತಾಯಿತು. ತಾರುಣ್ಯದ ತೇಜ ಅವರ ಮುಖಮಂಡಲದ ಮೇಲೆ ಮತ್ತೊಮ್ಮೆ ಮಿಂಚಾಡಹತ್ತಿತ್ತು. ಅವರ ಸೇವೆಯಲ್ಲಿ ಸುಕನ್ಯೆಯು ಯಾವುದಕ್ಕೂ ಕೊರತೆ ಮಾಡಗೊಡುತ್ತಿದ್ದಿಲ್ಲ. ಅವಳು ತನ್ನ ದೇಹದ ಪರಿವೆಬಿಟ್ಟು ಹಗಲಿರುಳೂ ಅವರ ಸೇವೆಯನ್ನೇ ಒಂದು ಕ್ಷಣವೂ ವಿರಾಮವಿಲ್ಲದೇ ಮಾಡುತ್ತಿದ್ದಳು. ಈ ನಿರಂತರ ಪರಿಶ್ರಮದಿಂದ ಅವಳ ಸುಂದರ ದೇಹ ಸೊರಗಿ ಕಡ್ಡಿಯಂತಾಗಿತ್ತು. ಆದರೂ ಅವಳು ಪತಿಯೇ ಪರದೇವತೆಯೆಂದ ಭಾವಿಸಿ ಆ ತನ್ನ ದೇವನ ಆರಾಧನೆಗೇ ತನ್ನ ದೇಹ, ಮನಸ್ಸು, ಇಡೀ ಜನ್ಮವನ್ನೇ ಮೀಸಲಾಗಿ ಇರಿಸಿದಳು. ಧನ್ಯೆ ಸುಕನ್ಯೆ !

ಈ ರೀತಿಯಿಂದ ಆ ಋಷಿದಂಪತಿಗಳೀರ್ವರೂ ನಿರಾತಂಕವಾಗಿ ಗೃಹಸ್ಥ ಧರ್ಮವನ್ನು ಪಾಲನ ಮಾಡಿಕೊಂಡು ಸುಖದಿಂದ ಇದ್ದರು. ಸುಕನ್ಯೆಗೆ ತನ್ನ ಪತಿ ಮುದುಕ ಅಥವಾ ಬಡವ ಎಂಬ ಭಾವನೆ ಎಂದೂ ಮನಸ್ಸಿನಲ್ಲಿಯೂ ಸುಳಿಯಲಿಲ್ಲ. ಮತ್ತು ತಮ್ಮ ಆಶ್ರಮಕ್ಕೆ ಬರುವ ಅತಿಥಿ ಅಭ್ಯಾಗತರನ್ನೆಲ್ಲ ನಗುಮುಖದಿಂದಲೇ ಸ್ವಾಗತಿಸಿ ಸತ್ಕರಿಸಿ ಆತಿಥ್ಯ ಉಪಚಾರಗಳನ್ನು ಅವಳು ನೀಡುತ್ತಲಿದ್ದಳು. ತಪೋಧನನಾದ ಆ ವೃದ್ಧ ಪತಿಯೇ ತನ್ನ ಭಾಗ್ಯದೇವತೆಯೆಂದು ಬಗೆದು ಭಕ್ತಿಯಿಂದಲೂ ಪ್ರೀತಿಯಿಂದಲೂ ಸಂತಸದಿಂದಲೂ ನಿಯಮಬದ್ಧಳಾಗಿ ಅವರ ಸೇವೆಯನ್ನು ಗೈಯ್ಯುತ್ತಿದ್ದಳು.

ಒಂದು ದಿನ ಅವರ ಆಶ್ರಮಕ್ಕೆ ದೇವಧನ್ವಂತರಿಗಳೆಂದು ಹೆಸರಾದ ಅಶ್ವಿನೀಕುಮಾರರು ಬಂದರು. ಚ್ಯವನರು ಆಗ ಆಶ್ರಮದಲ್ಲಿ ಇರಲಿಲ್ಲ. ಸುಕನ್ಯೆಯು ಹೊರಗೆ ಬಂದು ಬಂದ ಅತಿಥಿಗಳನ್ನು ಆದರಿಸಿ ಆಸನದ ಮೇಲೆ ಕೂಡಿಸಿ

ಉಪಚರಿಸಿದಳು. ಅಶ್ವಿನಿಗಳು ಸುಕನ್ಯೆಯ ಅದ್ಭುತ ಸೌಂದರ್ಯವನ್ನು ಕಂಡು ಆಶ್ಚರ್ಯಪಟ್ಟರು. ಅವರು ಇಂದ್ರನ ಅಮರಾವತಿಯಲ್ಲಿಯೂ ಇಂಥ ಅಪರೂಪವಾದ ಚೆಲುವಿಕೆಯನ್ನು ಸಂದರ್ಶಿಸಿದ್ದೇ ಇದ್ದಿಲ್ಲ.

ಇಡೀ ಆಶ್ರಮವನ್ನೇ ತನ್ನ ಕಾಯಕಾಂತಿಯಿಂದ ಬೆಳಗುತ್ತಲಿರುವ ಆ ರೂಪಸಿಯನ್ನು ನೋಡಿ ಆ ಸ್ವರ್ಗ ವೈದ್ಯರಿಗೆ ಆಶ್ಚರ್ಯವಾಗಿ ಅವರು ಅವಳಿಗೆ "ಕಾಂತಿಮತಿ, ನೀನಾರು! ನಿರ್ಜನವಾದ ಈ ಕಾಡಿನಲ್ಲಿಯ ಚ್ಯವನರ ಗುಡಿಸಲಿನಲ್ಲಿ ಇಂಥ ಸ್ಫುರದ್ರೂಪಿಯಾದ ನೀನು ಹೇಗೆ ಬಂದೆ, ಏಕೆ ಬಂದೆ? ನಾವು ದೇವಲೋಕದ ವೈದ್ಯರಾದ ಅಶ್ವಿನೀಕುಮಾರರು" ಎಂದು ತಮ್ಮ ಪರಿಚಯ ಹೇಳಿ ಪ್ರಶ್ನೆ ಕೇಳಿದರು.

ಆಗ ಸುಕನ್ಯೆಯು ನಸುನಕ್ಕು, "ಪೂಜ್ಯರೇ, ನಾನು ಶರ್ಯಾತಿ ಮಹಾರಾಜನ ಮಗಳು ಸುಕನ್ಯೆ. ಬ್ರಹ್ಮರ್ಷಿ ಚ್ಯವನರಿಗೆ ನಮ್ಮ ತಂದೆ ನನ್ನನ್ನು ಮದುವೆಮಾಡಿ ಕೊಟ್ಟಿದ್ದರಿಂದ ನಾನೀಗ ಆ ಮಹರ್ಷಿಗಳ ಧರ್ಮಪತ್ನಿಯಾಗಿ ಅವರ ಸೇವೆಯನ್ನು ಮಾಡುತ್ತ ಈ ಆಶ್ರಮದಲ್ಲಿದ್ದೇನೆ. ಮುನಿಗಳು ಪೂಜೆಗೆ ಹೂತುಳಸಿ ತರಲು ವನಾಂತರಕ್ಕೆ ಹೋಗಿದ್ದಾರೆ. ಈಗ ಬರುವರು. ತಾವೇನು ಬಹಳ ಹೊತ್ತು ಕಾಯಬೇಕಾಗಿಲ್ಲ" ಎಂದು ಮಧುರವಾಗಿ ಮಾತನಾಡಿದಳು.

ಅವಳ ರೂಪಕ್ಕೆ ಮುಗ್ಧರಾದ ಅಶ್ವಿನಿಗಳು ನಕ್ಕು ಅವಳಿಗೆ "ಸುಂದರಿ, ನಿಮ್ಮ ತಂದೆಯು ನಿನ್ನಂಥ ಎಳೆ ಎಸಳನ್ನು ಈ ತಲೆ ನಡುಗುವ ಮುದುಕನಿಗೆ ಹೇಗೆ ಮದುವೆ ಮಾಡಿಕೊಟ್ಟನು! ಮುಗಿಲಲ್ಲಿಯ ಮಿಂಚೇ ಮಹಿಳೆಯಾಗಿ ಮೈದಾಳಿದಂತಿರುವ ನಿನ್ನಂಥ ಚೆಲುವು ಚಾರಿಮೆಗಳನ್ನು ಇಂದ್ರಲೋಕದ ದೇವತಾ ಸುಂದರಿಯರಲ್ಲಿಯೂ ಗಂಧರ್ವ ರಮಣಿಯರಲ್ಲಿಯೂ ನಾವು ಕಾಣೆವು.

ಭದ್ರೆ, ನೀನೀಗ ಪೀತಾಂಬರ ಉಟ್ಟಿಲ್ಲ. ಆಭರಣಗಳನ್ನು ತೊಟ್ಟಿಲ್ಲ. ಆದರೂ ಅವ್ಯಾಜ ಮನೋಹರವಾದ ನಿನ್ನ ಶರೀರ ಸೌಂದರ್ಯದಿಂದ ಈ ಬೀಳುಬನ ನಂದನದಂತೆ ಶೋಭಿಸುತ್ತಲಿದೆ. ಇಂಥ ಈ ನಿನ್ನ ನಿರಾಭರಣ ಸುಂದರವಾದ ಶರೀರಕ್ಕೆ ಮುತ್ತಿನ ಹಾರ ಹಾಕಿ ಬಂಗಾರದ ಒಡವೆಗಳನ್ನು ಇಡಿಸಿ ದಿವ್ಯ ಪೀತಾಂಬರವನ್ನು ಉಡಿಸಿ ಎಲ್ಲ ಅಲಂಕಾರಗಳನ್ನು ತೊಡಿಸಿದರೆ ನೀನು ಎಷ್ಟು ಸುಂದರವಾಗಿ

ಕಾಣಬೇಡ! ಇಂಥ ಚೆಲುವಿನ ಬುಗ್ಗೆಯನ್ನು ಬೆನ್ನಿಗೆ ಕಟ್ಟಿಕೊಂಡೇ ಹುಟ್ಟಿಬಂದಿರುವ ನೀನು ಈ ಮುಪ್ಪನ್ನು ಅಪ್ಪಿ, ಯಮದೇವರ ಕಣ್ಣಿನಿಂದ ಹೇಗೋ ತಪ್ಪಿ ಕೆಲ ದಿನ ಇಲ್ಲಿ ಉಳಿದ ಈ ಮುದಿ ಮುನಿಯನ್ನೇಕೆ ಮದುವೆಯಾದೆ! ಅವನಲ್ಲಿ ಕಾಮ ಕಮರಿಹೋಗಿದೆ. ಪ್ರೇಮ ಸುಟ್ಟುಹೋಗಿದೆ. ಅವನಲ್ಲಿಯ ಎಲ್ಲತ್ರಾಣವೂ ಹೋಗಿ ಅವನ ಪ್ರಾಣಕ್ಕೇ ಸಂಚಕಾರ ಬಂದಾಗ ಎಳೆ ಚಿಗುರಿನಂತಿರುವ ನಿನ್ನಂಥ ಚಿಗರಿಗಂಗಳ ಚೆಲುವಿಗೆ ಅವನೇನು ಸುಖಕೊಟ್ಟಾನು! ಉಳಿದುದೆಲ್ಲ ಇರಲಿ. ಕಡುಬಡನಾದ ಈ ಮುನಿ ನಿನಗೆ ಹೊಟ್ಟೆ ಬಟ್ಟೆಗೂ ಕೊಡಲಾರ. ಆದುದರಿಂದ ಸುಕನ್ಯೆ, ನೀನು ನಮ್ಮಿಬ್ಬರಲ್ಲಿ ಬೇಕಾದವರನ್ನು ಒರಿಸು. ನಾವು ನಿನಗೆ ದೇವಲೋಕದ ಸುಖವಿಲಾಸಗಳನ್ನೆಲ್ಲ ನಿಂತ ನೆಲದಲ್ಲಿಯೇ ಒದಗಿಸುತ್ತೇವೆ. ನಮ್ಮಲ್ಲಿ ನಿನಗೆ ಅನುರೂಪವಾದ ರೂಪ, ಸಂಪತ್ತು, ಶಕ್ತಿ, ರಸಿಕತೆ ಎಲ್ಲವೂ ಇದೆ. ವ್ಯರ್ಥವಾಗಿ ಈ ಮುದಿ ಗಂಡನ ಸಲುವಾಗಿ ನಿನ್ನ ಸೌಂದರ್ಯವನ್ನು ಹಾಳು ಮಾಡಬೇಡ. ನಿನ್ನ ತಾರುಣ್ಯವನ್ನು ವ್ಯರ್ಥಮಾಡಬೇಡ. ನಿನ್ನ ಜನ್ಮವನ್ನು ನಿರರ್ಥಕ ಮಾಡಬೇಡ''.

ಅಶ್ವಿನಿಗಳ ಈ ಮಾತನ್ನು ಕೇಳಿ ಸುಕನ್ಯೆಯು ಕಿವಿಯ ಮೇಲೆ ಬೆರಳಿಟ್ಟು ''ಪೂಜ್ಯರೇ, ತಾವು ಇಂಥ ಮಾತನ್ನು ಸರ್ವಥಾ ಆಡಬಾರದು. ನಮ್ಮಂಥ ಮಾನವಿಯರು ತಪ್ಪು ದಾರಿ ಹಿಡಿದರೆ ನಮಗೆ ನೀತಿಬೋಧೆಯನ್ನು ಮಾಡಿ ಸರಿಯಾದ ಮಾರ್ಗಕ್ಕೆ ಹಚ್ಚುವುದು ನಿಮ್ಮಂಥ ದೇವತಾ ಪುರುಷರ ಕರ್ತವ್ಯವಾಗಿದೆ. ಪತಿ ಹೇಗೇ ಇದ್ದರೂ ಧರ್ಮಪತ್ನಿಗೆ ಪೂಜ್ಯನೇ ಅಲ್ಲವೇ! ಇಂಥ ಬ್ರಹ್ಮರ್ಷಿಗಳ ಕೈ ಹಿಡಿದು ನನ್ನ ಜನ್ಮ ಪಾವನವಾಗಿದೆ. ಬರೀ ಭೋಗವಿಲಾಸಗಳ ಅನುಭವವೇ ಜೀವನದ ಗುರಿಯೇ! ಅಶಾಶ್ವತವಾದ ಈ ವಿಷಯ ಸುಖಕ್ಕಿಂತ ಅಧ್ಯಾತ್ಮಸಾಧನೆಯೇ ಮನುಷ್ಯದೇಹದ ಮುಖ್ಯ ಕರ್ತವ್ಯವಾಗಿದೆ. ಅದನ್ನು ನಿರಂತರ ಮಾಡುತ್ತಲೇ ಬಂದ ಇಂಥ ಬ್ರಹ್ಮರ್ಷಿಗಳು ನನ್ನನ್ನು ಮದುವೆಯಾಗಿ ತಮ್ಮ ಸೇವೆಗೆ ಅನುವು ಮಾಡಿಕೊಟ್ಟದ್ದು ನನ್ನ ದೊಡ್ಡ ಸೌಭಾಗ್ಯ. ನನಗೆ ಅವರಿಂದ ಪೂರ್ಣ ತೃಪ್ತಿಯಿದೆ. ಅವರ ಸೇವೆಯಲ್ಲಿಯೇ ನನ್ನ ಜನ್ಮದ ಸಾರ್ಥಕತೆ ಇದೆ. ಅವರೇ ನನ್ನ ಪಾಲಿನ ದೇವರು. ತಾವು ನನಗೆ ಅವರಲ್ಲಿ ಇನ್ನೂ ನೂರು ಪಟ್ಟು ಪ್ರೀತ್ಯಾದಾರಗಳು ಹೆಚ್ಚುವಂತೆ ಅನುಗ್ರಹಿಸಬೇಕು'' ಎಂದು ಪ್ರಾರ್ಥಿಸಿದಳು.

ಆಗ ಅಶ್ವಿನೀ ದೇವತೆಗಳು ಅವಳ ಪತಿಭಕ್ತಿಯನ್ನು ನೋಡಿ ಅತ್ಯಂತ ಸಂತುಷ್ಟರಾಗಿ ''ಸುಕನ್ಯೆ, ನಿನ್ನಮನೋದಾರ್ಢ್ಯ ಹಾಗೂ ಪತಿನಿಷ್ಠೆಯನ್ನು ನೋಡಿ ನಮ್ಮ ಮನಸ್ಸು ಪ್ರಸನ್ನವಾಗಿದೆ'' ಎಂದು ಹೇಳಿ ಅವಳಿಗೆ ಆಶೀರ್ವಾದ ಮಾಡಿದರು.

ಅಷ್ಟರಲ್ಲಿ ಮಹರ್ಷಿಗಳು ಬಂದು ಅಶ್ವಿನೀ ದೇವತೆಗಳನ್ನು ಕಂಡು ಹರ್ಷದಿಂದ ಸ್ವಾಗತಮಾಡಿ ಅವರಿಗೆ ಸುಕನ್ಯೆಯ ಸಹಾಯದಿಂದ ಒಳ್ಳೇ ಆತಿಥ್ಯವನ್ನು ನೀಡಿದರು. ಆ ಮುನಿ ದಂಪತಿಗಳ ಆದರಾತಿಶಯದ ಆತಿಥ್ಯದಿಂದ ಸುಪ್ರೀತರಾಗಿ ಅಶ್ವಿನೀ ದೇವತೆಗಳು ''ನಿಮಗೆ ಬೇಕಾದ ವರ ಬೇಡಿರಿ, ಕೊಡುತ್ತೇನೆ'' ಎಂದು ಹೇಳಿದಾಗ ಚ್ಯವನರು ನಗುತ್ತ ''ಅಶ್ವಿನಿಗಳೇ ನಾನು ಮುಪ್ಪಿನ ಕಾಲದಲ್ಲಿ ಸುರಸುಂದರಿಯಂತಿರುವ ಸುಕನ್ಯೆಯನ್ನು ಮದುವೆಯಾಗಿದ್ದೇನೆ. ಅವಳೋ ಹಗಲು ರಾತ್ರಿ ನನ್ನ ಸೇವೆಯನ್ನು ಮಾಡುತ್ತಲಿರುವಳು. ನನಗಿಂತಲೂ ಅವಳು ವಿರಕ್ತಳಾಗಿ ಅಧ್ಯಾತ್ಮಸಾಧನೆಯಲ್ಲಿ ಮುಂಧೋರಣೆಯಿಂದಲೇ ಇರುತ್ತಾಳೆ. ಆದರೆ ಅಂಥ ಸುಕುಮಾರಿಯನ್ನು ಈ ಮುದಿತನದಲ್ಲಿ ಮದುವೆಯಾಗಿ ನಾನೇನೂ ಅವಳಿಗೆ ಸುಖವನ್ನು ಕೊಡಲಾರೆನಲ್ಲ, ಎಂದು ಮನಸ್ಸಿಗೆ ವ್ಯಥೆಯಾಗಿದೆ. ನಾನೀಗ ನನ್ನ ತಪಸ್ಸಿನ ಮಹಿಮೆಯಿಂದ ತರುಣನಾಗಿ ಬೇಕಾದಂಥ ಭೋಗವಿಲಾಸ ಸಾಮಗ್ರಿಗಳನ್ನು ಅವಳಿಗೆ ಒದಗಿಸಬಲ್ಲೆ.

ಆದರೆ ಶಾಶ್ವತವಾದ ಆ ಪುಣ್ಯವನ್ನು ಸವೆಯಿಸಿ ಈ ಅಶಾಶ್ವತವಾದ ಕ್ಷುದ್ರ ಸುಖಗಳನ್ನು ಭೋಗುಸುವುದೇಕೆ? ಎಂದು ಅವಳು ನನ್ನ ತಪಃಪುಣ್ಯವನ್ನು ವಿನಿಯೋಗಿಸಲಿಕ್ಕೇ ಪ್ರತಿಬಂಧಿಸುತ್ತಾಳೆ. ನನಗೂ ಕೂಡ ನಾನು ಇಷ್ಟು ದಿನ ಕಷ್ಟಪಟ್ಟು ಜಪತಪೋನುಷ್ಠಾನದಿಂದ ಸಂಪಾದಿಸಿದ ಪುಣ್ಯವನ್ನೆಲ್ಲ ವಿಷಯ ಸುಖಕ್ಕಾಗಿ ಕಳೆದುಕೊಳ್ಳಲಿಕ್ಕೆ ಇಷ್ಟವಿಲ್ಲ. ಆದುದರಿಂದ ನೀವು ಹೇಗೂ ದೇವವೈದ್ಯರು. ದೇವ ಧನ್ವಂತರಿಯ ಪೂರ್ಣಾನುಗ್ರಹಕ್ಕೆ ಪೂರ್ಣಪಾತ್ರರು. ಆದುದರಿಂದ ನೀವು ಈಗ ನನ್ನನ್ನು ತರುಣನನ್ನಾಗಿ ಮಾಡಬೇಕು. ನಿಮಗೆ ಈಗ ದೇವತಾಗಣದವರ ಜೊತೆಗೆ ಯಜ್ಞಗಳಲ್ಲಿ ಆಹುತಿ ಇಲ್ಲ. ಆದರೆ ನಾನು ನಿಮಗೆ ಇಂದಿನಿಂದ ಯಜ್ಞದಲ್ಲಿ ಆಹುತಿ ಕೊಡುವಂತೆ ಏರ್ಪಾಡು ಮಾಡುತ್ತೇನೆ. ಇದರಿಂದ ನಿಮಗೂ ಉಪಕಾರವಾದಂತಾಗುವುದು'' ಎಂದು ಹೇಳಿದರು.

ಅದನ್ನು ಕೇಳಿ ಅಶ್ವಿನಿಗಳಿಗೂ ಆನಂದವಾಯಿತು. ಯಜ್ಞದಲ್ಲಿ ಅವರಿಗೆ ಹವಿರ್ಭಾಗವಿಲ್ಲದೇ ಬಹಳ ಅವಮಾನವೆನಿಸಿತ್ತು. ಚ್ಯವನರು ಯಜ್ಞಕಾಂಡದಲ್ಲಿ ಅಂದು ಅಪ್ರತಿಮರೆಂದು ಪ್ರಖ್ಯಾತರಾಗಿದ್ದರು. ವೈದಿಕ ಪ್ರಪಂಚದಲ್ಲಿ ಚ್ಯವನರ ಮಾತೆಂದರೆ ವೇದವಾಕ್ಯ. ಅವರು ಮನಸ್ಸು ಮಾಡಿದರೆ ತಮಗೂ ಯಜ್ಞದಲ್ಲಿ ಭಾಗಸಿಗುವುದು ನಿಶ್ಚಿತವೆಂದು ತಿಳಿದ, ಆ ದೇವವೈದ್ಯರು ಚ್ಯವನಋಷಿಗಳ ಬಿನ್ನಹಕ್ಕೆ ಕೂಡಲೇ ಒಪ್ಪಿದರು. ಮತ್ತು ಆ ಚ್ಯವನರನ್ನು ಕೈಹಿಡಿದು ಒಂದು ಸಿದ್ಧರಸದ ಸರೋವರಕ್ಕೆ ಕರೆತಂದು ಇದರಲ್ಲಿ ಸ್ನಾನಮಾಡಿರಿ ಎಂದು ಹೇಳಿದರು. ಅವರ ಜೊತೆಗೆ ತಾವೂ ಆ ಸಿದ್ಧ ಸರೋವರದಲ್ಲಿ ಮುಳುಗು ಹಾಕಿದರು.

ಸುಕನ್ಯೆಯು ಅವರ ಜೊತೆಗೆ ಬಂದು ಅಲ್ಲಿಯೇ ಸರೋವರದ ದಂಡೆಯ ಮೇಲೆಯೇ ನಿಂತಿದ್ದಳು. ಆಗ ಆ ಸರೋವರದಿಂದ ಮೂವರು ದಿವ್ಯದೇಹಗಳನ್ನು ಧರಿಸಿದ ತರುಣ ತೇಜಸ್ವಿ ದೇವತಾ ಪುರುಷರು ಎದ್ದು ನಿಂತರು. ಆ ಮೂವರದೂ ರೂಪ, ಕಾಂತಿ, ಬಣ್ಣ, ಕಣ್ಣು, ಮೂಗು ಎಲ್ಲವೂ ಒಂದೇ ರೀತಿ ಇದ್ದವು. ಅವರಲ್ಲಿ ಚ್ಯವನನಾರು, ಅಶ್ವಿನಿಕುಮಾರರು ಯಾರು, ಗುರುತಿಸುವುದೇ ಸುಕನ್ಯೆಗೆ ಕಠಿಣವಾಯಿತು.

ಆಗ ಅವಳು ಅಶ್ವಿನೀ ಕುಮಾರರಿಗೆ ''ದೇವೋತ್ತಮರೆ, ನನಗೆ ನನ್ನ ಪತಿಯ ಪ್ರಸಾದವಾಗುವಂತೆ ನೀವೇ ಅನುಗ್ರಹಿಸಿರಿ'' ಎಂದು ಬೇಡಿಕೊಂಡಿದಳು. ಆಗ ಆ ನಾಕ ವೈದ್ಯರು ಪ್ರಸನ್ನರಾಗಿ ಅವಳಿಗೆ ಚ್ಯವನರನ್ನು ತೋರಿಸಿದರು.

ಚೆಲುವಿನ ಚಂದ್ರಮನಂತೆ ಕಂಗೊಳಿಸುವ ಚ್ಯವನರ ದಿವ್ಯದೇಹವನ್ನು ಕಂಡು ಸುಕನ್ಯೆಗೆ ಅತ್ಯಂತ ಸಂತೋಷವಾಗಿ ಅವಳು ನಾಚಿಕೆಯಿಂದ ಬಾಗಿ ತನ್ನ ಪತಿಯ ಪಾದಗಳಿಗೆ ನಮಿಸಿದಳು. ಮತ್ತು ಅಶ್ವಿನಿಗಳ ಚರಣಗಳಿಗೂ ಭಕ್ತಿಯಿಂದ ವಂದಿಸಿ ಅವರ ಅನುಗ್ರಹಕ್ಕಾಗಿ ಕೃತಜ್ಞತೆಯನ್ನು ವ್ಯಕ್ತಮಾಡಿ ಅಭಿನಂದನೆಗೈದು ಪ್ರಾರ್ಥಿಸಿದಳು. ಆ ನವದಂಪತಿಗಳಿಬ್ಬರಿಗೂ ಆಶೀರ್ವಾದ ಮಾಡಿ ಆ ದೇವಧನ್ವಂತರಿಗಳು ಸ್ವರ್ಗಾರೋಹಣ ಮಾಡಿದರು.

ಹರೆಮರಳಿ ಹೊಸ ಜೀವವೇ ಬಂದಂತಾದ ಚ್ಯವನರು ಲಾವಣ್ಯಲಕ್ಷ್ಮೀಯಂತಿರುವ ಸುಕನ್ಯೆಯ ರೂಪಸಿರಿಯನ್ನು ಆರಳಿಸಿ ಉಲ್ಲಾಸಗೊಳಿಸಿದರು. ಅವಳ ಅನುಪಮ ಸೌಂದರ್ಯದ ಶೃಂಗಾರ ತೀರ್ಥದಲ್ಲಿ ಮಿಂದು ಆನಂದಪಟ್ಟರು.

ಒಂದುದಿನ ಆಶ್ರಮದ ಅಂಗಳದಲ್ಲಿ ಅಶ್ವತ್ಥ ಗಿಡದ ನೆರಳಿನಲ್ಲಿ ಸುಕನ್ಯಾ ಹಾಗೂ ಚ್ಯವನರು ಚಕ್ರವಾಕದಂಪತಿಗಳಂತೆ ಅಕ್ಕಪಕ್ಕದಲ್ಲಿ ಜೋಡಾಗಿಕುಳಿತು ಪ್ರೇಮಾಲಾಪದಲ್ಲಿ ಮಗ್ನರಾಗಿದ್ದರು.

ಅದೇ ವೇಳೆಯಲ್ಲಿ ಸುಕನ್ಯೆಯ ತಂದೆ ಶರ್ಯಾತಿ ಮಹಾರಾಜನ ಮಗಳನ್ನು ಕಂಡು ಹೋಗಬೇಕೆಂದು ಅಕಸ್ಮಾತ್ತಾಗಿ ಆ ಆಶ್ರಮಕ್ಕೆ ಬಂದನು. ಆಗ ಅವನು ತನ್ನ ಮಗಳು ಸುಕನ್ಯೆಯು ಯಾವನೋ ಒಬ್ಬತರುಣ ಪುರುಷನ ವಕ್ಷಸ್ಥಳದಲ್ಲಿ ತಲೆಯಿರಿಸಿ ಸರಸಾಲಾಪ ಮಾಡುತ್ತಿರುವುದನ್ನು ನೋಡಿ ಸಂತಪ್ತನಾಗಿ ಅವಳನ್ನು ಅಲ್ಲಿಯೇ ಕಡಿದು ಹಾಕಬೇಕೆಂದು ಖಡ್ಗವನ್ನೇ ಹಿರಿದನು.

ಅವನು ಸುಕನ್ಯೆಯನ್ನು ಮದುವೆ ಮಾಡಿಕೊಟ್ಟಾಗ ಚ್ಯವನರು ಹಣ್ಣು ಹಣ್ಣು ಮುದುಕ. ಅಂಥ ಮುಪ್ಪಿನ ಮುದುಕನನ್ನು ಕೈ ಹಿಡಿದ ಸುಕನ್ಯೆ ಇಂದು ಯಾವನೋ ಒಬ್ಬ ಸ್ಫುರದ್ರೂಪಿ ತರುಣನ ತೋಳ ಸೆರೆಯಲ್ಲಿ ಪ್ರೇಮದಿಂದಲೇ ಬಂದಿಯಾಗಿರುವುದನ್ನು ಕಂಡು ಅವನಿಗೆ ತನ್ನ ಮಗಳೇ ದಾರಿಬಿಟ್ಟು ಜಾರಿಣಿಯಾಗಿದ್ದಾಳೆ ಎನ್ನಿಸಿ, ಅವರಿಬ್ಬರನ್ನೂ ಅಲ್ಲಿಯೇ ಮುಗಿಸಿಯೇ ಬಿಡಬೇಕೆಂದು ಅವನು ಖಡ್ಗವನ್ನು ಎತ್ತಿದ.

ಆಗ ಸುಕನ್ಯೆಯು ಓಡಿ ಬಂದು ಅವನನ್ನು ತಡೆದು "ಅಪ್ಪ, ಇವರು ನನ್ನ ಪತಿ ಚ್ಯವನರು, ನಿನ್ನ ಅಳಿಯ" ಎಂದು ಹೇಳಿದಳು. ಅದಕ್ಕೆ ಮಹಾರಾಜನು ಕೆರಳಿ-

"ದುಷ್ಟೆ, ನಾನು ಚ್ಯವನರನ್ನು ನಿನ್ನ ಮದುವೆಯಾಗುವಾಗ ಕಂಡಿಲ್ಲವೇ! ಆ ಮುಪ್ಪಿನ ಮುದುಕರೆಲ್ಲಿ! ಈ ಹೊಸ ಹರೆಯ ಯುವಕನೆಲ್ಲಿ! ಇವನ ಸಂಗ ಮಾಡಿದೆಯಾ" ಎಂದು ಜರೆದನು.

''ಅಪ್ಪ, ನಿನ್ನಾಣೆಗೂ ಇವರು ನನ್ನ ಪತಿ. ತುಸು ಆ ಖಡ್ಗವನ್ನು ಕೆಳಗಿಳಿಸಿ ಮೊದಲು ವರೆಗಾಣಿಸು'' ಎಂದು ಆ ಮಹಾರಾಜನಿಗೆ ಎಲ್ಲ ತನ್ನ ಗಂಡನ ಕಾಯಕಲ್ಪದ ಸಮಾಚಾರವನ್ನು ತಿಳಿಸಿದಳು.

ಆಗ ಶರ್ಯಾತಿಯು ತನ್ನ ಕಣ್ಣನ್ನು ತಾನೇ ನಂಬದಾದ. ಆದರೂ ಚ್ಯವನರ ಹತ್ತಿರ ಬಂದು ಸೂಕ್ಷ್ಮವಾಗಿ ನೋಡಿದ. ದೇಹ ತುಸು ಮಾಂಸಲವಾಗಿದ್ದರೂ ಮುಖ ಅದೇ ಇತ್ತು. ಸುಕನ್ಯೆ ಮುಳ್ಳುಚುಚ್ಚಿದ ಕಣ್ಣಿನ ಗಾಯದ ಕಲೆಯೂ ಸೂಕ್ಷ್ಮವಾಗಿ ಎವೆಯ ಬಳಿಯಲ್ಲಿ ಕಾಣುತ್ತಿತ್ತು. ಧ್ವನಿಯೂ ಗುರುತು ಹತ್ತಿತು.

ಆಗ ಅವನ ಆನಂದಕ್ಕೆ ಪಾರವೇ ಇಲ್ಲವಾಯಿತು. ಅವನು ಆನಂದದಿಂದ ಮೊದಲು ತನ್ನ ಊರಿಗೆ ಹೋಗಿ ಹೆಂಡತಿ ಪರಿವಾರದವರನ್ನು ಕರೆದುಕೊಂಡು ಬಂದು ಮಗಳು ಅಳಿಯಂದಿರನ್ನು ತೋರಿಸಿದ. ಎಲ್ಲರೂ ಸುಕನ್ಯೆಯ ಪಾತಿವ್ರತ್ಯವನ್ನು ಕೊಂಡಾಡಿದರು. ಸಖಿಯರು ಅವಳನ್ನು ಬಿಗಿದಪ್ಪಿದರು.

ರಾಜರಾಣಿಯರು ಆ ನವದಂಪತಿಗಳಿಗೆ ಬೇಕಾದಷ್ಟು ವಸ್ತ್ರಾಭರಣ ಅಲಂಕಾರ ಧನಕನಕಗಳನ್ನಿತ್ತರು. ಮದುವೆಯ ಕಾಲದಲ್ಲಿ ತಂದೆತಾಯಂದಿರು ಬೇಕಾದಷ್ಟನ್ನು ಕೊಡುತ್ತೇವೆಂದರೂ ಸುಕನ್ಯೆಯು ವಸ್ತು ವಡವೆ ಬಟ್ಟೆ ಬರೆ ಯಾವದನ್ನೂ ಸ್ವೀಕರಿಸಿದ್ದಿಲ್ಲ. ''ತನ್ನ ಪತಿ ಮುಪ್ಪಿನ ಮುದುಕರಾಗಿ ಮನೆ ಹಿಡಿದು ಕುಳಿತಾಗ ತಾನು ಅಲಂಕಾರ ಮಾಡಿ ಮೆರೆಯುವುದು ಬೇಡ. ಮತ್ತು ಕಣ್ಣಿಗೆ ಬೇನೆಯಾಗಿ ಅವರಿಗೇ ಕಾಣದಿದ್ದಾಗ ತಾನು ಯಾರ ಸಲುವಾಗಿ ಅಲಂಕರಿಸಿಕೊಳ್ಳುವುದು?'' ಎಂದು ಮುಂತಾಗಿ ಯೋಚಿಸಿ ಅವಳು ತಂದೆಯ ಮನೆಯ ಆಭರಣಗಳನ್ನೆಲ್ಲ ಬಿಚ್ಚಿಕೊಟ್ಟು, ನಾರುಬಟ್ಟೆಯುಟ್ಟು ನಿರಾಭರಣ ಸುಂದರಿಯಾಗಿಯೇ ಆಶ್ರಮ ಜೀವನದಲ್ಲಿ ಪ್ರವೇಶಿಸಿದ್ದಳು. ಆದರೆ ಇಂದು ಅವಳ ತಂದೆತಾಯಂದಿರು ಅವಳು ಬೇಡವೆಂದರೂ ಕೇಳದೇ ಅವಳಿಗೆ ಪ್ರೀತಿಯಿಂದ ಬಟ್ಟೆ ಭೂಷಣಗಳನ್ನೂ ಕೊಟ್ಟು; ಇಡಿಸಿ ತೊಡಿಸಿ ನೋಡಿ ಆನಂದಪಟ್ಟರು. ಕೆಲದಿನವಿದ್ದು ರಾಜರಾಣಿಯರು ಮಗಳ ಭಾಗ್ಯವನ್ನು ಕೊಂಡಾಡುತ್ತ ತಮ್ಮ ಊರಿಗೆ ಸಂತೋಷದಿಂದ ತೆರಳಿದರು.

ಅನಂತರ ಶರ್ಯಾತಿಯು ಚ್ಯವನದಂಪತಿಗಳಿಬ್ಬರಿಗೂ ತಮ್ಮ ರಾಜಧಾನಿಗೆ ದೊಡ್ಡ ಯಜ್ಞವೊಂದನ್ನು ಮಾಡಿಸಲಿಕ್ಕೆ ಬರಬೇಕೆಂದು ಆಮಂತ್ರಣ ಕಳಿಸಿದನು.

ಚ್ಯವನರು ಆ ಯಜ್ಞಕ್ಕೆ ತಾವೇ ಬ್ರಹ್ಮಾಗಿ ಬಂದು ಪ್ರಾರಂಭಿಸಿ ಅವರಲ್ಲಿ ಅಶ್ವಿನೀ ದೇವತೆಗಳಿಗೆ ಆಹುತಿಯನ್ನು ಕೊಡಮಾಡಿದರು. ಆಗ ದೇವೇಂದ್ರನು ವೈದ್ಯರಾದ ಅವರಿಗೆ ಆಹುತಿ ಕೊಡುವುದನ್ನು ನೋಡಿ ಸಿಟ್ಟಿನಿಂದ ವಜ್ರವನ್ನು ಎತ್ತಿ ಯಜಮಾನನಾದ ಶರ್ಯಾತಿ ಮಹಾರಾಜನನ್ನೆ ಹೊಡೆಯ ಬಂದನು. ಅದನ್ನು ನೋಡಿ ಚ್ಯವನರು ತಮ್ಮ ಮಂತ್ರ ಸಾಮರ್ಥ್ಯದಿಂದ ಇಂದ್ರನ ವಜ್ರವನ್ನೆತ್ತಿದ ಆ ಕೈಯನ್ನು ಅತ್ತಿತ್ತ ಅಲುಗಾಡಿಸಲಿಕ್ಕೂ ಬಾರದಂತೆ ತಡೆಹಿಡಿದರು. ಆಗ ದೇವತೆಗಳೆಲ್ಲರೂ ಅಶ್ವಿನೀ ಕುಮಾರರಿಗೆ ಹವಿಸ್ಸನ್ನು ಕೊಡಲಿಕ್ಕೆ ಅನುಮತಿಯನ್ನಿತ್ತರು. ಸೋಮನಿಗೂ ಒಂದು ಆಹುತಿಯು ದೊರೆಯಿತು. ಹೀಗೆ ಚ್ಯವನರ ಪ್ರಭಾವದಿಂದ ಸೋಮಾಹುತಿ ದೊರೆತು ಸೋಮ ಹಾಗೂ ಅಶ್ವಿನೀ ದೇವತೆಗಳು ಚ್ಯವನರನ್ನೂ ಸುಕನ್ಯೆಯನ್ನೂ ಆಶೀರ್ವದಿಸಿದರು.

ಭಗವದನುಗ್ರಹದಿಂದ ದೇವೇಂದ್ರನನ್ನೂ ಕೂಡ ಒಂದು ಕ್ಷಣ ತಡೆಹಿಡಿದು ನಿಲ್ಲಿಸಿದ ಚ್ಯವನರ ಮಂತ್ರಶಕ್ತಿ, ವೇದ ಜ್ಞಾನ, ಹಾಗೂ ಕರ್ಮಕಾಂಡ ಪಾಂಡಿತ್ಯ, ಮತ್ತು ಮುನಿಮಹರ್ಷಿ ಮಂಡಲದಲ್ಲಿರುವ ಅವರ ವರ್ಚಸ್ಸನ್ನು ಕಂಡು ರಾಜದಂಪತಿಗಳಿಗೂ ಸುಕನ್ಯೆಗೂ ಅಭಿಮಾನದಿಂದ ಆನಂದೋದ್ರೇಕವಾಗಿತ್ತು. ಆ ಋಷಿ ದಂಪತಿಗಳಿಗೆ ಮಹಾರಾಜನು ವಿಪುಲವಾಗಿ ದಾನದಕ್ಷಿಣೆಗಳನ್ನಿತ್ತು ಆನಂದಪಡಿಸಿದನು.

ಸುಕನ್ಯೆಯು ತನ್ನ ಪಾತಿವ್ರತ್ಯ ಪ್ರಭಾವದಿಂದ ಒಳ್ಳೇ ಪತಿಯನ್ನೂ, ದೀರ್ಘ ಸುಮಂಗಲೀತನವನ್ನೂ, ಅಖಂಡ ಸೌಭಾಗ್ಯವನ್ನೂ ಪಡೆದು ಕೊಟ್ಟ ಕುಲವನ್ನೂ ಹುಟ್ಟಿದ ಮನೆಯನ್ನೂ ಎರಡನ್ನೂ ಬೆಳಗಿ ಪತಿವ್ರತಾ ಶಿಖಾಮಣಿಯೆಂದು ವಿಶ್ವವಂದ್ಯಳಾದಳು.

★ ★ ★ ★

# ಔರ್ವ

ಹಿಂದೆ ಕೃತವೀರ್ಯನೆಂಬ ರಾಜನೊಬ್ಬನಿದ್ದನು. ಅವನು ಸಕಲರಾಜರಲ್ಲಿ ಶ್ರೇಷ್ಠನು ಮತ್ತು ವೇದಜ್ಞರಾದ ಭೃಗುವಂಶದವರ ಸಹಾಯದಿಂದ ಅವನು ಹೆಚ್ಚು ಯಾಗಗಳನ್ನು ಮಾಡಿದನು. ಅಗ್ರ ಭೋಜನಕ್ಕೆ ಅರ್ಹರಾದ ಆ ಭಾರ್ಗವರಿಗೆಲ್ಲ, ರಾಜನು ಅವರಿಂದ ಸೋಮಪಾನ ಮಾಡಿದ ಮೇಲೆ ಸಮೃದ್ಧಿಯಾಗಿ ಧನಧಾನ್ಯಗಳನ್ನೊದಗಿಸಿ ಅವರನ್ನು ತೃಪ್ತಿಪಡಿಸಿದ. ಆ ರಾಜಶ್ರೇಷ್ಠನು ಸ್ವರ್ಗಸ್ಥನಾದ ಮೇಲೆ, ಒಂದಾನೊಂದು ಕಾಲದಲ್ಲಿ ಆತನ ವಂಶಸ್ಥರಿಗೆ ದ್ರವ್ಯದ ಅವಶ್ಯಕತೆಯು ಅತಿಕಠಿನವಾಗಿ ಸಂಭವಿಸಿತು. ಆ ರಾಜರೆಲ್ಲರೂ ಭಾರ್ಗವರ ಬಳಿಯಲ್ಲಿ ಧನವಿರುವುದನ್ನು ತಿಳಿದು, ಒಡನೆಯೇ ಅವರಿಂದ ಅದನ್ನು ಯಾಚಿಸಿ ತರಲು ಅವರಲ್ಲಿಗೆ ಹೋದರು, ಆಗ ಆ ಭೃಗುವಂಶಸ್ಥರಲ್ಲಿ ಕೆಲವರು ಧನವನ್ನು ಕೈಬಿಡಲಾರದೆ ಭೂಮಿಯಲ್ಲಿ ಹೂತಿಟ್ಟರು. ಮತ್ತೆ ಕೆಲವರು ತಮ್ಮ ಧನಕ್ಕೆ ರಾಜಭಯವು ಪ್ರಾಪ್ತವಾಗುವುದೆಂದು ತಿಳಿದು ಬ್ರಾಹ್ಮಣರಿಗೆ ದಾನಮಾಡಿಬಿಟ್ಟರು. ಇನ್ನೂ ಕೆಲವರು ಆ ಕ್ಷತ್ರಿಯರಿಗೆ ದ್ರವ್ಯವು ಅತ್ಯವಶ್ಯವಾಗಿರುವುದನ್ನು ತಿಳಿದು ತಾವಾಗಿಯೇ ಬೇಕಾದಷ್ಟು ಧನವನ್ನು ತಂದುಕೊಟ್ಟರು.

ಆಮೇಲೆ ಒಂದಾನೊಂದು ಸಮಯದಲ್ಲಿ, ಕ್ಷತ್ರಿಯನೊಬ್ಬನು ಆಕಸ್ಮಾತ್ತಾಗಿ ಒಬ್ಬ ಭಾರ್ಗವನ ಮನೆಯ ನೆಲವನ್ನು ಅಗೆಯುತ್ತಿರುವಾಗ, ಆತನಿಗೆ ಅಪಾರ ಧನವು ಕಾಣಿಸಿತು. ಅನೇಕ ಕ್ಷತ್ರಿಯರು ಬಂದು ಕೂಡಿ, ಆ ಧನವನ್ನು ನೋಡಿದರು. ಆಗ ಅವರಿಗೆ ಭಾರ್ಗವರ ಮೋಸದಿಂದ ನಮ್ಮ ಕುಲದ ಸಂಪತ್ತೆಲ್ಲವನ್ನೂ ಕೃತವೀರ್ಯನಿಂದ ಅಪಹರಿಸಿದ್ದಾರೆಂದು ವಿಪರೀತವಾದ ಕೋಪವುಂಟಾಯಿತು. ಆ ಕೋಪದಿಂದ ಭಾರ್ಗವರನ್ನೆಲ್ಲ ಭಂಗಿಸಿ, ಅವರು ಮರೆಹೊಕ್ಕರೂ ಬಿಡದೆ, ತಮ್ಮ ತೀಕ್ಷ್ಣ ಬಾಣಗಳಿಂದ ಅವರೆಲ್ಲರನ್ನೂ ಕೊಲ್ಲುವುದಕ್ಕೆ ತೊಡಗಿದರು. ಆ ಕ್ಷತ್ರಿಯರು ಮೇಲೆಮೇಲೆ ರೇಗಿ, ಭೃಗುವಂಶದ ಹೆಂಗಸರ ಹೊಟ್ಟೆಯಲ್ಲಿದ್ದ ಮಕ್ಕಳನ್ನೂ ಬಿಡದೆ ಸಂಹರಿಸುತ್ತಾ, ಭೂಮಂಡಲವನ್ನೆಲ್ಲ ಸುತ್ತಾಡಿದರು. ಹೀಗೆ ಅವರು ಭಾರ್ಗವರನ್ನು ನಾಶಮಾಡುತ್ತಿರುವಾಗ, ಅವರ ಪತ್ನಿಯರೆಲ್ಲ ಭಯದಿಂದ ದುರ್ಗಮವಾದ

ಹಿಮವತ್ಪರ್ವತಕ್ಕೆ ಓಡಿದರು. ಅವರಲ್ಲಿಸುಂದರಿಯಾದ ಒಬ್ಬಾಕೆಯು, ತನ್ನಪತಿಯ ವಂಶವು ಕೆಟ್ಟು ಹೋಗಬಾರದೆಂದು, ಮಹಾತೇಜಸ್ಸುಳ್ಳ ತನ್ನ ಗರ್ಭವನ್ನು ಭಯದಿಂದ ತನ್ನತೊಡೆಯಲ್ಲಿ ಬಚ್ಚಿಟ್ಟುಕೊಂಡಳು. ಅದನ್ನುತಿಳಿದ ಒಬ್ಬಬ್ರಾಹ್ಮಣ ಸ್ತ್ರೀಯು, ಭಯದಿಂದ ಒಡನೆಯೇ ಕ್ಷತ್ರಿಯರ ಬಳಿಗೆ ಹೋಗಿ, ಆ ರಹಸ್ಯವನ್ನು ತಿಳಿಸಿಬಿಟ್ಟಳು. ಆಗ ಆ ಕ್ಷತ್ರಿಯರು ಆ ಗರ್ಭವನ್ನೂ ಕೊಲ್ಲುಲುದ್ದೇಶಿಸಿ, ಅಲ್ಲಿಗೆ ಹೋಗಿ, ಅತಿ ತೇಜಸ್ವಿಯಾಗಿದ್ದ ಆ ಬ್ರಾಹ್ಮಣ ಸ್ತ್ರೀಯನ್ನು ಕಂಡರು. ಇಷ್ಟರಲ್ಲಿ ಆಕೆಯ ತೊಡೆಯಲ್ಲಿದ್ದ ಶಿಶುವು ತೊಡೆಯನ್ನು ಭೇದಿಸಿಕೊಂಡು ಹೊರಗೆ ಬಂದಿತು. ಮಧ್ಯಾಹ್ನದ ಸೂರ್ಯನಂತೆ ಜ್ವಲಿಸುತ್ತಿದ್ದ ಆ ಶಿಶುವನ್ನು ಕಂಡೊಡನೆ, ಆ ಕ್ಷತ್ರಿಯರ ದೃಷ್ಟಿಗಳೇ ಕೆಟ್ಟುಹೋದವು. ಅವರು ಕಣ್ಣುಗಳಿಲ್ಲದೆ ಕುರುಡರಾಗಿ ಆ ಪರ್ವತಗಳ ಮೇಲೆ ಸಂಚರಿಸುವುದಕ್ಕೆ ಪ್ರಾರಂಭಿಸಿದರು. ಆಗ ಆ ರಾಜರು ತಮ್ಮ ಉದ್ದೇಶವು ಭಗ್ನವಾದುದಲ್ಲದೆ, ತಮಗೆ ಕಣ್ಣುಗಳೂ ಹೋದುದನ್ನು ನೋಡಿ, ಭಯದಿಂದ, ತಿರುಗಿ ತಾವು ಕಣ್ಣುಗಳನ್ನಾದರೂ ಪಡೆಯಬೇಕೆಂದು ಕೋರಿ ಆ ಬ್ರಾಹ್ಮಣಿಯನ್ನೇ ಮರೆಹೊಕ್ಕರು. ಬುದ್ಧಿಗೆಟ್ಟ ಆ ರಾಜರು ದುಃಖದಿಂದ ಕೊರಗುತ್ತ ಉರಿಯಾರಿದ ಅಗ್ನಿಯಂತೆ ತೇಜೋಹೀನರಾಗಿ (ಅಂಧರಾಗಿ) ಮಹಾತ್ಮಳಾದ ಆ ಬ್ರಾಹ್ಮಣಸ್ತ್ರೀಯನ್ನು ಕುರಿತು ''ಅಮ್ಮಾ! ನಿನ್ನ ಅನುಗ್ರಹದಿಂದ ಕ್ಷತ್ರಜಾತಿಯು ಕ್ಷೇಮವನ್ನು ಪಡೆಯಬೇಕು. ನಾವು ಇಲ್ಲಿಗೆ ಉದ್ದೇಶಿಸಿ ಬಂದ ಪಾಪಕರ್ಮಗಳನ್ನು ಬಿಟ್ಟು ಬಂದ ದಾರಿಯಲ್ಲಿ ಹೋಗುವೆವು. ಓ ಶೋಭನಾಂಗೀ! ನೀನೂ, ನಿನ್ನ ಪುತ್ರನೂ, ನಮ್ಮಲ್ಲಿ ದಯೆಯನ್ನು ತೋರಿಸಿ, ನಮಗೆ ತಿರುಗಿ ಕಣ್ಣುಗಳನ್ನು ಕೊಟ್ಟು ಕ್ಷತ್ರಿಯರಾದ ನಮ್ಮನ್ನು ಕಾಪಾಡಬೇಕು'' ಎಂದು ಬೇಡಿದರು.

ಆ ಬ್ರಾಹ್ಮಣಸ್ತ್ರೀಯು ಅವರು ಹೇಳಿದುದನ್ನು ಕೇಳಿ, ''ಮಕ್ಕಳೇ! ನಾನಾಗಿ ನಿಮ್ಮಲ್ಲಿ ಕೋಪಗೊಂಡು ನಿಮ್ಮ ಕಣ್ಣುಗಳನ್ನು ಕೆಡಿಸಿದವಳಲ್ಲ. ಇದೋ! ಭೃಗುವಂಶೀಯನಾದ ಈ ಊರುಜನ (ತೊಡೆಯಲ್ಲಿ ಹುಟ್ಟಿದವನು) ನಿಮ್ಮಲ್ಲಿ ಕೋಪಿಸಿಕೊಂಡಿರುವನು. ಪುತ್ರರೇ! ಈ ಮಹಾತ್ಮನು ನಿಮ್ಮಿಂದಾದ ತನ್ನ ಜ್ಞಾತಿಪಿತೃಗಳ ವಧೆಯನ್ನು ಕೇಳಿ, ಕೋಪದಿಂದ ನಿಮ್ಮೆಲ್ಲರ ಕಣ್ಣುಗಳನ್ನು

ಕೆಡಿಸಿರುವರು. ಸಂದೇಹವಿಲ್ಲ. ಮಕ್ಕಳೇ! ಈಗಲೂ ನೀವು ಭೃಗುವಂಶದವರ ಗರ್ಭಪಿಂಡವನ್ನು ನಾಶಮಾಡಲು ಯತ್ನಿಸಿದಿರಿ. ಆಗಿನಿಂದ ನಾನು ಈ ಗರ್ಭವನ್ನು ನನ್ನ ತೊಡೆಯಲ್ಲಿಯೇ ಅಡಗಿಸಿಟ್ಟುಕೊಂಡಿದ್ದೆನು. ಈತನು ಗರ್ಭದಲ್ಲಿರುವಾಗಲೇ, ಷಡಂಗಗಳಿಂದ ಕೂಡಿದ ವೇದವೆಲ್ಲವೂ ಭೃಗುವಂಶದ ಮಹಿಮೆಯನ್ನು ನೆಲೆಗೊಳಿಸುವುದಕ್ಕಾಗಿ ಈತನಲ್ಲಿ ಪ್ರವೇಶಿಸಿತು. ಈತನು ಅಂತಹ ಮಹಾಮಹಿಮನಾದುದರಿಂದ ಪಿತೃವಧೆಯಿಂದಾದ ಕೋಪದಿಂದ ನಿಮ್ಮನ್ನೆಲ್ಲ ಕೊಲ್ಲುವ ಉದ್ದೇಶದಲ್ಲಿರುವುದು ನಿಶ್ಚಯವೇ! ಈತನ ದಿವ್ಯ ತೇಜಸ್ಸಿನಿಂದಲೇ ನಿಮ್ಮ ಕಣ್ಣುಗಳು ಅಪಹೃತವಾಗಿರುವುವು. ಈ ಔರ್ವನನ್ನೇ ಬೇಡಿಕೊಳ್ಳಿರಿ. ನಿಮ್ಮ ಪ್ರಾರ್ಥನೆಗಳಿಗೆ ಸಂತುಷ್ಟನಾಗಿ ಈತನು ನಿಮ್ಮ ಕಣ್ಣುಗಳನ್ನು ಕೊಡುವನು'' ಎಂದಳು. ಆಗ ಒಡನೆಯೇ ಆ ರಾಜರೆಲ್ಲರೂ ಆ ಊರುಜನ ನೋಡಿ ''ನಮ್ಮಲ್ಲಿ ಪ್ರಸನ್ನನಾಗು. ದಯೆಯನ್ನು ತೋರಿಸು'' ಎಂದು ಬೇಡಿಕೊಳ್ಳಲು, ಆತನು ಅವರಲ್ಲಿ ಪ್ರಸನ್ನನಾದನು. ಆ ಬ್ರಹ್ಮಋಷಿಶ್ರೇಷ್ಠನು ತೊಡೆಯನ್ನು ಭೇದಿಸಿಕೊಂಡು ತಾನು ಹುಟ್ಟಿದುದಕ್ಕಾಗಿ 'ಔರ್ವ'ನೆಂಬ ಹೆಸರಿನಿಂದಲೇ ಈ ಲೋಕದಲ್ಲಿ ಪ್ರಸಿದ್ಧನಾದನು. ಆಗ ರಾಜರು ಆತನಿಂದ ಕಣ್ಣುಗಳನ್ನು ಪಡೆದು ಹಿಂತಿರುಗಿ ಹೋದರು.

ಭೃಗುವಂಶೋತ್ಪನ್ನನಾದ ಆ ಮುನಿಯಾದರೋ ಸಮಸ್ತಲೋಕಗಳನ್ನೂ ನಾಶಮಾಡುವುದಾಗಿಯೇ ಉದ್ದೇಶಿಸಿದ್ದನು. ತನ್ನ ಮನಸ್ಸೆಲ್ಲವನ್ನೂ ಆ ವಿಷಯದಲ್ಲಿಯೇ ದೃಢವಾಗಿ ನಿಲ್ಲಿಸಿದ್ದನು. ಆ ಔರ್ವನು ಅಧಿಕತಪಸ್ಸಿನಿಂದ ಜ್ವಲಿಸುತ್ತ, ತನ್ನ ಪಿತೃಗಳನ್ನು ತೃಪ್ತಿಪಡಿಸುವುದಕ್ಕಾಗಿ ಭಾರ್ಗವರ ಶತ್ರುಗಳನ್ನೆಲ್ಲ ತೀರಿಸಿಬಿಡುವುದಾಗಿ ಉದ್ದೇಶಿಸಿದ್ದನು. ಉಗ್ರತಪಸ್ಸಿನಿಂದ ಆತನು ದೇವಾಸುರ ಮನುಷ್ಯಲೋಕಗಳನ್ನೆಲ್ಲ ತಾಪಗೊಳಿಸಿದನು. ವಂಶಾಭಿವೃದ್ಧಿಕರನಾದ ಆ ಪುತ್ರನನ್ನು ನೋಡಿ, ಆತನ ಪಿತೃಗಳೆಲ್ಲರೂ ಪಿತೃಲೋಕದಿಂದ ಬಂದು ಆತನನ್ನು ಕುರಿತು ''ಔರ್ವ! ಮಗೂ! ನಿನ್ನ ಉಗ್ರತಪಸ್ಸಿನ ಪ್ರಭಾವವನ್ನು ನೋಡಿದೆವು. ನಿನ್ನ ಕೋಪವನ್ನು ಅಡಗಿಸು. ಲೋಕವನ್ನು ಅನುಗ್ರಹಿಸು. ಹಿಂದೆ ಕ್ಷತ್ರಿಯರು ಹಿಂಸಿಸುತ್ತಿದ್ದಾಗಲೂ, ಭಾವಿತಾತ್ಮಕರಾದ ಭಾರ್ಗವರು ಆ ವಧೆಯ ವಿಷಯದಲ್ಲಿ

ಉದಾಸೀನರಾಗಿದ್ದುದು ಕೈಲಾಗದಿದ್ದುದರಿಂದಲ್ಲ. ನಮಗೆ ಆಯುಸ್ಸು ಹೆಚ್ಚಾಗಿದ್ದುದಕ್ಕಾಗಿ ಮನಸ್ಸಿನಲ್ಲಿ ಬಹಳ ಜಿಹಾಸೆ ಹುಟ್ಟಿ, ನಾವಾಗಿ ಕ್ಷತ್ರಿಯರಿಂದ ವಧೆಯನ್ನು ಕೋರಿ ಅದನ್ನು ತಂದುಕೊಂಡೆವು. ಹಿಂದೆ ಭಾರ್ಗವರು ತಮ್ಮ ಮನೆಯ ನೆಲದಲ್ಲಿ ಹಣವನ್ನು ಹೂತಿಟ್ಟುದು ಕೂಡ ಕ್ಷತ್ರಿಯರಿಗೆ ಕೋಪವನ್ನು ಹುಟ್ಟಿಸಿ, ಅವರ ಕೊಲೆಗೆ ಗುರಿಯಾಗುವುದಕ್ಕಾಗಿಯೇ ಹೊರತು ಹಣದಾಸೆಯಿಂದಲ್ಲ. ಧನಾಧ್ಯಕ್ಷನಾದ ಕುಬೇರನೇ ನಮಗೆ ಹೇರಳವಾಗಿ ಧನವನ್ನು ತಂದುಕೊಟ್ಟರೂ, ಸ್ವರ್ಗಾಪೇಕ್ಷಿಗಳಾದ ನಮಗೆ ಆ ಧನದಿಂದಾಗುವ ಲಾಭವೇನು? ನಮ್ಮನ್ನು ಯಾವ ವಿಧದಲ್ಲಿಯೂ ತೆಗೆದುಕೊಂಡು ಹೋಗಲು ಮೃತ್ಯುವಿಗೆ ಸಾಧ್ಯವಿಲ್ಲದುದನ್ನು ನೋಡಿ, ನಾವಾಗಿ ಇಷ್ಟಪಟ್ಟು ಕಂಡುಹಿಡಿದ ಉಪಾಯವೇ ಇದು. ಮಗೂ! ಆತ್ಮಹತ್ಯೆ ಮಾಡಿಕೊಳ್ಳುವ ಪುರುಷನು ಸದ್ಗತಿಯನ್ನು ಪಡೆಯಲಾರನು. ಇದನ್ನು ಯೋಚಿಸಿಯೇ ನಾವು ಆತ್ಮವಧೆಯನ್ನೂ ಮಾಡಿಕೊಳ್ಳಲಿಲ್ಲ. ಈಗ ನೀನು ಮಾಡಬೇಕೆಂದಿರುವ ಕಾರ್ಯವೂ ನಮಗೆ ಇಷ್ಟವಲ್ಲ. ಲೋಕನಾಶಕವಾದ ಮಹಾಪಾಪದಿಂದ ನಿನ್ನ ಮನಸ್ಸನ್ನು ದೂರಮಾಡು. ಈ ಕೊಲೆಯಿಂದ ನೀನು ಏಳೇಳು ಲೋಕಗಳನ್ನೂ ಹಾಳುಮಾಡಿಕೊಳ್ಳಬೇಡ. ಕೋಪವು ತಪೋವೀರ್ಯವನ್ನು ಕೊಲ್ಲುವುದು. ಆ ಕೋಪವನ್ನು ನೀನು ಕೊಲ್ಲಬೇಕು'' ಎಂದರು.

ಔರ್ವನು ಪಿತೃಗಳನ್ನು ನೋಡಿ ''ಪಿತೃಗಳೇ! ನಾನು ಕೋಪದಿಂದ ಸಮಸ್ತ ಲೋಕಗಳನ್ನೂ ನಾಶಮಾಡುವುದಾಗಿ ಮೊದಲೇ ಪ್ರತಿಜ್ಞೆ ಮಾಡಿಬಿಟ್ಟೆನು. ಅದು ಸುಳ್ಳಾಗಲಾರದು. ನನ್ನ ರೋಷವೂ, ನನ್ನ ಪ್ರತಿಜ್ಞೆಯೂ ವಿಫಲವಾದ ಪಕ್ಷದಲ್ಲಿ ನಾನು ಮೃತಪ್ರಾಯನೇ! ಈಗ ಈ ನನ್ನ ಕೋಪವನ್ನು ತೀರಿಸಿಕೊಳ್ಳದಿದ್ದರೆ, ಅಗ್ನಿಯು ಒಣಗಿದ ಮರಗಳನ್ನು ಹೇಗೋ ಹಾಗೆ ಅದು ನನ್ನನ್ನೇ ದಹಿಸಿಬಿಡುವುದು. ಉಚಿತ ಕಾರಣದಿಂದ ಹುಟ್ಟಿದ ಕೋಪವನ್ನು ಯಾರು ನಿಗ್ರಹಿಸುವುದಕ್ಕೆ ಪ್ರಯತ್ನಿಸುವರೋ, ಅವರು ಧರ್ಮಾರ್ಥಕಾಮಗಳು ಮೂರನ್ನೂ ಸರಿಯಾಗಿ ರಕ್ಷಿಸಲು ಶಕ್ತರಲ್ಲ. ಎಲ್ಲವನ್ನೂ ಜಯಿಸುವ ಅಪೇಕ್ಷೆಯುಳ್ಳ ರಾಜರು ದುಷ್ಟರನ್ನು ಶಿಕ್ಷಿಸುವುದಕ್ಕೂ,

ಶಿಷ್ಟರನ್ನು ರಕ್ಷಿಸುವುದಕ್ಕೂ ಕೋಪವನ್ನು ತಕ್ಕ ರೀತಿಯಲ್ಲಿ ಪ್ರಯೋಗಿಸಲೇಬೇಕು. ಕ್ಷತ್ರಿಯರು ಭೃಗುವಂಶದವರನ್ನು ವಧೆ ಮಾಡುತ್ತಿರುವಾಗ, ತಾಯಿಯ ಗರ್ಭಕೋಶದಲ್ಲಿದ್ದ ಹಾಗೆಯೇ ಅವಳ ತೊಡೆಯಲ್ಲಿ ಬಚ್ಚಿಡಲ್ಪಟ್ಟಿದ್ದ ನಾನು, ನನ್ನ ಮಾತೃವರ್ಗವೆಲ್ಲ ದುಃಖದಿಂದ 'ಗೊಳೋ' ಎಂದು ಅಳುವ ರೋದನ ಧ್ವನಿಯನ್ನು ಕೇಳಿದೆನು. ಆ ಕ್ಷತ್ರಿಯಾಧಮರು ಭೃಗುವಂಶದವರನ್ನು ಕೂಡ ಅದನ್ನು ನೋಡಿ ತಟಸ್ಥರಾಗಿದ್ದುದನ್ನು ಕಂಡು, ಒಡನೆಯೇ ನನ್ನನ್ನು ಕೋಪವು ಆವರಿಸಿತು. ನನ್ನ ತಾಯಿತಂದೆಗಳು ಭಯದಿಂದ ತಲೆಕೂದಲುಗಳನ್ನು ಕೆದರಿಕೊಂಡು ಓಡಾಡಿದರೂ, ಯಾವ ದೇಶದಲ್ಲಿಯೂ ರಕ್ಷಕರನ್ನು ಕಾಣದೆ ತಪಿಸುತ್ತಿದ್ದರೂ, ಆಗ ತಮ್ಮನ್ನು ಕಾಪಾಡುವವರು ಯಾರೂ ಇಲ್ಲದಿರುವುದನ್ನು ನೋಡಿ, ನನ್ನ ತಾಯಿಯು ನನ್ನನ್ನು ತನ್ನ ತೊಡೆಯಲ್ಲಿ ಬಚ್ಚಿಟ್ಟುಕೊಂಡಿದ್ದಳು. ಲೋಕದಲ್ಲಿ ಪಾಪಕಾರ್ಯಕ್ಕೆ ತಕ್ಕಂತೆ ದಂಡಿಸುವವರಿದ್ದರೆ, ಯಾರೂ ಧೈರ್ಯದಿಂದ ಪಾಪಮಾಡುತ್ತಿರಲಿಲ್ಲ. ಪಾಪಕ್ಕೆ ಶಿಕ್ಷಕನಿಲ್ಲದಿದ್ದರೆ, ಪಾಪಿಷ್ಠರ ಸಂಖ್ಯೆಯು ಹೆಚ್ಚುತ್ತಿರುವುದು ಸಹಜವೇ! ಯಾವನು ಸಮರ್ಥನಾಗಿಯೂ, ಜ್ಞಾನಿಯಾಗಿಯೂ ಇದ್ದರೂ, ತನ್ನ ಶಕ್ತಿಯಿಂದ ಪಾಪವನ್ನು ಇದಿರಿಸುವುದಿಲ್ಲವೋ ಆತನು ಪಾಪಿಷ್ಠನೆನಿಸುವನು. ರಾಜರೂ, ದೇವತೆಗಳೂ ರಕ್ಷಣಶಕ್ತಿಯುಳ್ಳವರಾದರೂ, ನನ್ನ ಪಿತೃಗಳನ್ನು ಈ ಲೋಕದಲ್ಲಿ ಬದುಕಿಸಲಾರದೆ ಹೋದರು. ಆದುದರಿಂದ ನಾನು ಈ ಕ್ಷತ್ರಿಯರ ಮೇಲೆ ಕೋಪವುಳ್ಳವನಾದೆನು. ಆದರೆ, ನಿಮ್ಮ ಮಾತನ್ನು ಮೀರಲು ಸಾಧ್ಯವಿಲ್ಲ. ಸಮರ್ಥನಾಗಿದ್ದ ನಾನು ಈಗ ಉಪೇಕ್ಷೆಮಾಡಿದರೆ, ಲೋಕಕ್ಕೆ ತಿರುಗಿ ಅದೇ ಪಾಪದಿಂದ ಭಯವು ಹುಟ್ಟುವುದು. ಲೋಕವನ್ನೇ ಭಕ್ಷಿಸುವಂತೆ ಕೋರುತ್ತಿರುವ ನನ್ನ ಕೋಪಾಗ್ನಿಯನ್ನು ಅಡಗಿಸಿಟ್ಟರೆ, ಅದು ತನ್ನ ತೇಜಸ್ಸಿನಿಂದ ನನ್ನನ್ನೇ ದಹಿಸಿಬಿಡುವುದು. ಪಿತೃದೇವತೆಗಳೇ? ನೀವು ಸಕಲಲೋಕಗಳಿಗೂ ಹಿತವನ್ನು ಕೋರತಕ್ಕವರೆಂದು ನಾನು ಬಲ್ಲೆನು. ಆದುದರಿಂದ ನಿಮಗೂ, ನನಗೂ ಹಿತವಾದುದು ಯಾವುದೋ ಅದನ್ನು ತಿಳಿಸಿರಿ'' ಎಂದನು. ಆದಕ್ಕೆ ಪಿತೃಗಳು ''ಲೋಕವನ್ನು ದಹಿಸುವಂತಿರುವ ಈ ನಿನ್ನ ಕೋಪಾಗ್ನಿಯನ್ನು ನೀರಿನಲ್ಲಿ ಬಿಟ್ಟುಬಿಡು. ನಿನಗೆ ಶುಭವಾಗಲಿ! ಲೋಕಗಳಿಗೆಲ್ಲ ಜಲವು ಆಧಾರವು. ಸಮಸ್ತ ರಸಗಳೂ ಜಲಮಯವು. ಜಗತ್ತೇ ಜಲಮಯವು. ಬ್ರಾಹ್ಮಣೋತ್ತಮಾ!

ಆದುದರಿಂದ ನೀನು ನೀರಿನಲ್ಲಿ ನಿನ್ನ ಕೋಪವನ್ನು ಬಿಟ್ಟರೆ, ನಿನ್ನ ಸಂಕಲ್ಪದಂತೆ ಲೋಕವನ್ನೆಲ್ಲ ಅದಕ್ಕೆ ಈಡುಮಾಡಿದಂತಾಗುವುದು. ನೀನು ಸಮ್ಮತಿಪಟ್ಟರೆ, ನಿನ್ನ ಕೋಪಾಗ್ನಿಯು ಸದಾ ಜಲವನ್ನು ದಹಿಸುತ್ತಾ ಸಮುದ್ರದಲ್ಲಿರಲಿ. ಲೋಕವೇ ಜಲಮಯವೆಂದು ಹೇಳಲ್ಪಡುತ್ತಿವೆ. ಪುಣ್ಯಾತ್ಮಾ! ಹೀಗೆ ನೀನು ಆಚರಿಸಿದರೆ, ನಿನ್ನ ಪ್ರತಿಜ್ಞೆಯು ಸತ್ಯವಾಗುವುದಲ್ಲದೆ, ಇದರಿಂದ ಯಾವ ಲೋಕಕ್ಕೂ ಅಪಾಯವೂ ಇರದು'' ಎಂದರು. ಆಮೇಲೆ ಔರ್ವನು ಕೋಪದಿಂದ ಹುಟ್ಟಿದ ಆ ಅಗ್ನಿಯನ್ನು ಸಮುದ್ರದಲ್ಲಿ ಬಿಟ್ಟನು. ಅದೊಂದು ದೊಡ್ಡಕುದುರೆಯ ತಲೆಯಂತಾಗಿ ಸಮುದ್ರಜಲದಲ್ಲಿ ನೆಲೆಸಿತು. ಅದನ್ನೇ ವೇದಜ್ಞರು ಬಡಬಾಗ್ನಿಯೆಂದು ಕರೆಯುವರು. ಆ ಅಶ್ವಮುಖದಿಂದ ಹೊರಟ ಅಗ್ನಿಯು ಸಮುದ್ರಜಲವನ್ನು ಸದಾ ಪಾನಮಾಡುತ್ತಿರುವುದು.

★ ★ ★ ★

## ಬೈದ

ಧೌಮ್ಯರ ಮತ್ತೊಬ್ಬ ಶಿಷ್ಯ ಬೈದ. ಇವನೂ ಕೂಡ ಅತ್ಯಂತ ಗುರುಭಕ್ತಿಯುಳ್ಳವನು ಆಗಿದ್ದನು.

ಒಮ್ಮೆ ಉಪಾಧ್ಯಾಯರು ಶಿಷ್ಯನಾದ ಬೈದನನ್ನು ಕರೆದು ಮಗು ! ನೀನು ಕೆಲವು ಸಮಯ ಗುರುಶುಶ್ರೂಷೆಯನ್ನು ಮಾಡಬೇಕು. ಇದರಿಂದ ನಿನಗೆ ಶ್ರೇಯಸ್ಸು ಉಂಟಾಗುವುದೆಂದು ಆದೇಶಿಸಿದರು. ಗುರುಗಳ ಆಜ್ಞೆಯಂತೆ ಬೈದನು ಗುರುಕುಲದಲ್ಲಿ ಅನನ್ಯವಾದ ಗುರುಶುಶ್ರೂಷೆಯಲ್ಲಿ ರತನಾಗಿದ್ದನು.

ಬಂಧುಜನರು ಎತ್ತುಗಳ ಬದಲಾಗಿ ಬೈದ ಎಂಬ ಶಿಷ್ಯನನ್ನು ನೇಗಿಲಿಗೆ ಹೂಡಿ ಹೊಲವನ್ನು ಉಳುತ್ತಿದ್ದರು. ಚಳಿ, ಗಾಳಿ, ಬಿಸಿಲು, ಬಾಯಾರಿಕೆ ಮೊದಲಾದ ಎಲ್ಲಾ ದುಃಖಗಳನ್ನು ಸಹಿಸಿಕೊಂಡು ಸರ್ವಕಾಲದಲ್ಲಿಯೂ ಗುರುಗಳಿಗೆ ಅನುಕೂಲನಾಗಿಯೇ ಇದ್ದನು. ತನ್ನ ಶಾರೀರಿಕ ಸಮಸ್ಯೆಯನ್ನು ಯಾರ ಬಳಿಯೂ ಹೇಳಿಕೊಳ್ಳಲಿಲ್ಲ. ಗುರುಪ್ರೀತಿ ಮಾತ್ರ ಅವನ ಮುಖ್ಯ ಉದ್ದೇಶವಾಗಿತ್ತು.

ಶಿಷ್ಯನಾದ ಬೈದನ ಗುರುಭಕ್ತಿಗೆ ಮೆಚ್ಚಿ ಗುರುಗಳಿಗೆ ಬಹಳ ಸಂತೋಷವಾಯಿತು. ಗುರುಗಳ ಸಂತೋಷದಿಂದ ಶ್ರೇಯಸ್ಸನ್ನು ಸರ್ವಜ್ಞತ್ವವನ್ನು ಪಡೆದನು. ಇದು ಬೈದನ ಗುರುಕುಲವಾಸ.

ಬೈದನು ಗುರುಕುಲವಾಸವನ್ನು ಮುಗಿಸಿ ಗುರುಗಳ ಅನುಮತಿ ಪಡೆದು ತನ್ನ ಮನೆಗೆ ಹಿಂದಿರುಗಿದನು. ಗೃಹಸ್ಥಾಶ್ರಮವನ್ನು ಸ್ವೀಕರಿಸಿ ಆದರ್ಶಜೀವನವನ್ನು ನಡೆಸಿದನು.

★ ★ ★ ★

# ಗೃತ್ಸಮದ

ಋಗ್ವೇದದ ದ್ವಿತೀಯ ಮಂಡಳವು ಗಾರ್ತ್ಸಮದ ಮಂಡಳ ಎಂದೇ ಗುರುತಿಸಲ್ಪಡುತ್ತದೆ. ಗೃತ್ಸಮದರು ಸ್ವಯಂ ಮಂತ್ರದ್ರಷ್ಟಾರರಾಗಿದ್ದಾರೆ. ಅವರ ವಂಶದ ಅನೇಕ ಋಷಿಗಳು ಮಂತ್ರದರ್ಶಿಗಳಾದದ್ದು ಎರಡನೇ ಮಂಡಳದಿಂದ ಕಂಡುಬರುತ್ತದೆ. ಗೃತ್ಸಮದರ ವೇದ ವೈದುಷ್ಯವು ಅಸಾಧಾರಣವಾಗಿದ್ದಿತು. ಅವರ ಮಂತ್ರಸಿದ್ಧಿಯೂ ಕೂಡ ಋಷಿಪ್ರಪಂಚದಲ್ಲಿಯೇ ಪರಮ ಪೂಜ್ಯವಾಗಿದ್ದಿತು. ಅಂಗಿರಸ ವಂಶದ ಶುನಹೋತ್ರರು ಅವರ ಜನಕ ತಂದೆಯಾಗಿದ್ದರು. ಆದರೆ ಭೃಗುಕುಲದ ಶೌನಕರು ಇವರ ವಾಕ್ ಸಿದ್ಧಿ ಮತ್ತು ದೈವೀ ಬುದ್ಧಿಗಳನ್ನು ಕಂಡು ಪ್ರೀತಿಗೊಂಡು ಇವರನ್ನು ದತ್ತಕ್ಕೆ ತೆಗೆದುಕೊಂಡರು. ಆದುದರಿಂದ ಜನ್ಮದಿಂದ ಆಂಗಿರಸರಾದರೂ ಗೃತ್ಸಮದರ ಹೆಸರು ಭೃಗುಕುಲದ ಸೂಕ್ತಕಾರರಲ್ಲಿಯೂ ಪರಿಣಿತವಾಗಿದೆ.

ಪ್ರಾರಂಭದಲ್ಲಿ ಗೃತ್ಸಮದರಲ್ಲಿ ಪಾಂಡಿತ್ಯಕ್ಕಿಂತ ದುಡುಕು ಧಾರ್ಷ್ಟ್ಯಗಳು ಹೆಚ್ಚಾಗಿದ್ದವು. ಹಿಂದೊಮ್ಮೆ ಚಾಕ್ಷುಷಮನ್ವಂತರದಲ್ಲಿ ದೇವೇಂದ್ರನು ಸಹಸ್ರವಾರ್ಷಿಕ ಯಜ್ಞವೊಂದನ್ನು ಮಾಡಿದ್ದನು. ಅದಕ್ಕಾಗಿ ತರುಣ ತಪಸ್ವಿಯೂ ಜ್ಞಾನ ತೇಜಸ್ವಿಯೂ ಆದ ಗೃತ್ಸಮದರನ್ನು ಸುರಸಾಮ್ರಾಟನು ಆಮಂತ್ರಣ ಕೊಟ್ಟು ಆ ಯಜ್ಞಕ್ಕೆ ಕರಿಸಿಕೊಂಡಿದ್ದ.

ಅದೇ ಗುರುಕುಲದಿಂದ ಹೊರಬಿದ್ದ ಯುವಕ ಗೃತ್ಸಮದನು ಆ ಋಷಿಮಂಡಲದಲ್ಲಿಯೇ ತನ್ನ ಭವ್ಯ ಆಕಾರ ದಿವ್ಯ ತೇಜಸ್ಸಿನಿಂದ ಅಗ್ನಿಮೂರ್ತಿಯಂತೆ ಹೊಳೆಯುತ್ತಿದ್ದ. ನೂರಾರು ಋಷಿಗಳ ಸಾಮೂಹಿಕ ಮಂತ್ರ ಪಠನದಲ್ಲಿ ತರುಣ ಗೃತ್ಸಮದನ ಕಂಚಿನಕಂಠದ ಘಂಟಾನಾದವು ಎಲ್ಲರಿಗೂ ಸುಸ್ಪಷ್ಟವಾಗಿ ಇಂಪಾಗಿ ಕೇಳಿ ಬರುತ್ತಿತ್ತು.

ಆ ಯಜ್ಞಕ್ಕೆ ಚಾಕ್ಷುಷ ಮನುವಿನ ವಿದ್ವದ್ ವರಿಷ್ಠ ಪುತ್ರನಾದ 'ವರಿಷ್ಠ' ಕುಮಾರನೂ ಬಂದಿದ್ದ. ಅವನಿಗೆ ಭೂತಲದ ತರುಣ ಋಷಿ ಗೃತ್ಸಮದನಲ್ಲಿ ವಿದ್ಯೆಗಿಂತ ಆಡಂಬರ ಅವಸರಗಳೇ ಹೆಚ್ಚಾಗಿ ಇದ್ದುದು ತೋರಿಬಂದವು. ಅವನು ಲಕ್ಷವಿಟ್ಟು ಗೃತ್ಸಮದನ ಉಚ್ಚಕಂಠದ ಮಂತ್ರೋಚ್ಚಾರಣವನ್ನು ಆಲಿಸಹತ್ತಿದ. ಶೌನಕ ಗೃತ್ಸಮದನು ತನ್ನ ಪಾಂಡಿತ್ಯದ ನೆಚ್ಚಿಕೆಯಿಂದ ಉಚ್ಚಾರಣಾಕ್ರಮದ ಕಡೆಗೆ ಸೂಕ್ಷ್ಮಗಮನವನ್ನು ಕೊಡದೇ ಧೀರಧ್ವನಿಯಿಂದ ಪಾರಾಯಣ ಮಾಡುತ್ತಿದ್ದ. ಅವನ ಕಂಠ ಮಾಧುರ್ಯ ನಾದ ಗಾಂಭೀರ್ಯಗಳಿಂದ ಅವನ ಯಾವ ದೋಷಗಳೂ ಜನ ಸಾಮಾನ್ಯರಿಗೆ ಕಂಡುಬರುತ್ತಿದ್ದಿಲ್ಲ. ಆದರೆ ಸೂಕ್ಷ್ಮಪ್ರಜ್ಞನಾದ ಚಾಕ್ಷುಷಕುಮಾರ ವರಿಷ್ಠನ ವಿಚಕ್ಷಣ ಬುದ್ಧಿಗೆ ಗೃತ್ಸಮದನ ತಪ್ಪುಗಳು ತಿಳಿಯದೇ ಹೋಗಲಿಲ್ಲ. ಕೂಡಲೇ ಅವನು ಸಾಮವೇದದ ಮಂತ್ರಗಳನ್ನು ಅಪದ್ಧಕ್ರಮದಲ್ಲಿ ಉಚ್ಚಾರಣೆ ಮಾಡುತ್ತಲಿರುವ ಗೃತ್ಸಮದನನ್ನು ನಡುವೇ ತಡೆದು ನಿಲ್ಲಿಸಿ ''ಮೂರ್ಖ, ಇಂಥ ದೇವತಾ ಯಜ್ಞದಲ್ಲಿ ಅಪದ್ಧ ಮಂತ್ರಪಠಣ ಮಾಡಿ ಇಂದ್ರನಯಾಗವನ್ನೆಲ್ಲ ವ್ಯರ್ಥ ಮಾಡಿಬಿಟ್ಟೆ. ಇಂಥ ದಡ್ಡನಾದ ನೀನು ಈ ಮಹಾಸತ್ರಕ್ಕೆ ಬಂದದ್ದೇ ತಪ್ಪು. ನೀನೀಗಲೇ ಪತಿತನಾಗಿ ಕಾಡಿನಲ್ಲಿ ಕ್ರೂರ ಪಶುವಾಗಿ ಸಂಚರಿಸು'' ಎಂದು ಶಾಪವಿತ್ತನು. ಅನಂತರ ಗೃತ್ಸಮದನು ಅಡವಿಯಲ್ಲಿ ಕಾಡಪಶುವಾಗಿ ಕೆಲದಿನ ಓಡಾಡಿದ ಬಳಿಕ ಪರಮೇಶ್ವರನು ಅವನ ಮೇಲಿನ ಕರುಣೆಯಿಂದ ಅವನನ್ನು ಉದ್ಧಾರಮಾಡಿ ಮತ್ತೆ ಅವನಿಗೆ ನಿಜವಾದ ವೇದ ವಿಜ್ಞಾನವು ಅವನ ಮಿದುಳಿನಲ್ಲಿ ನಿಚ್ಚಳವಾಗಿ ಮೂಡುವಂತೆ ಅನುಗ್ರಹಗೈದನು.

ಮುಂದೆ ಮತ್ತೆ ಮಹಾತಪಸ್ಸನ್ನು ಮಾಡಿ ಅವನು ವೈದಿಕ ವಿಶ್ವದಲ್ಲಿಯೇ ಅಸಾಧಾರಣ ಪ್ರತಿಭೆಯುಳ್ಳ ಮೇಧಾವಿ ಮಹರ್ಷಿಯೆಂದು ವಿಶ್ವಮಾನ್ಯನಾದ.

ಇವನು ಹಾಡಿದ ಇಂದ್ರಸೂಕ್ತಗಳಿಂದ ಸುರರಾಜನು ಅತ್ಯಂತ ಸಂತುಷ್ಟನಾದ. ಇವನ ಮಂತ್ರಗಳಿಂದ ಸುಪ್ರಸನ್ನನಾದ ದೇವರಾಜನು ಗೃತ್ಸಮದನಿಗೆ ವಿಶೇಷಾನುಗ್ರಹವನ್ನು ತೋರಿದ್ದರಿಂದ ಪ್ರೋತ್ಸಾಹಿತನಾದ ಅವನು ಹೆಚ್ಚಾಗಿ ಇಂದ್ರೋಪಾಸನೆಯನ್ನೇ ಮಾಡಹತ್ತಿದ. ಹಗಲಿರುಳು ಇಂದ್ರನ ಸ್ಮರಣ ಮತ್ತು ಅವನದೇ ಸಂತತಧ್ಯಾನ, ನಿರಂತರಗಾನಗಳಿಂದ ಗೃತ್ಸಮದನಿಗೆ ಕೊನೆಗೆ ಇಂದ್ರನದೇ ರೂಪವು ಪ್ರಾಪ್ತವಾಗಿ ಅವನ ಮೈ, ಕೈ, ಬಣ್ಣ, ಕಣ್ಣು, ಮೂಗು, ಮೋರೆ, ನಿಲುವು, ಚೆಲುವು, ಚರ್ಯೆ ಎಲ್ಲವೂ ತದ್ರೂಪ ದೇವೇಂದ್ರನಂತೆಯೇ ಆಯಿತು. ಜಾತವೇದ ಅಗ್ನಿಯ ಉಪಾಸನೆಯನ್ನು ಮಾಡಿದ್ದರಿಂದಲೂ, ಇಂದ್ರನನ್ನು ಉದ್ದೇಶಿಸಿ ಮಾಡಿದ ಘೋರ ತಪಸ್ಸಿನಿಂದಲೂ ಅವನಿಗೆ ಇಂದ್ರನ ರೂಪ ಕಳೆ ಕಾಂತಿಗಳು ಬಂದು ಅವನ ಮೈ ಮಿಂಚುಗಟ್ಟುವಂತೆ ಮಾಡಿದವು'' ಎಂದು ಬೃಹದ್ದೇವತೆಯಲ್ಲಿ ಹೇಳಿದ್ದಾರೆ.

ಧುನಿ ಚಮು ಎಂಬ ದೈತ್ಯರಿಬ್ಬರು ಇಂದ್ರನನ್ನು ಹೊಡೆಯಬೇಕೆಂದು ಹುಡುಕುತ್ತಿದ್ದರು. ಆಗ ಅವರ ಕಣ್ಣಿಗೆ ಗೃತ್ಸಮದನು ಕಾಣಿಸಿದನು. ಕೂಡಲೇ ಅವನನ್ನು ಇಂದ್ರನೆಂದೇ ಭಾವಿಸಿ ಹೊಡೆಯ ಬಂದರು. ಆಗ ಗೃತ್ಸಮದನು ಇಂದ್ರನ ಸ್ವರೂಪವನ್ನು ಗುರುತಿಸತಕ್ಕ ''ಸಜನಾಸ ಇಂದ್ರಃ'' ಎಂಬ ಸುಂದರವಾದ ಸೂಕ್ತವನ್ನು ಪಠಿಸಿದನು. ಅದರಿಂದ ಆ ದೈತ್ಯರಿಗೆ ಇವನು ದೇವೇಂದ್ರನು ಅಲ್ಲವೆಂದು ನಿಶ್ಚಯವಾಯಿತು. ಗೃತ್ಸಮದನ ಸ್ತೋತ್ರಕ್ಕೆ ದೇವೇಂದ್ರ ಪ್ರಸನ್ನನಾಗಿ ಅಲ್ಲಿಗೆ ಧಾವಿಸಿ ಬಂದು ಅವನಿಗೆ ಮುತ್ತಿಗೆ ಹಾಕಿದ ಅಸುರರನ್ನು ಹೊಡೆದು ಕಡಿದು ಕೊಂದು ಹಾಕಿದನು. ಮತ್ತು ಆ ಮಹರ್ಷಿಯ ಮೇಲೆ ತನ್ನ ಪ್ರೀತಿಯನ್ನು ವ್ಯಕ್ತಮಾಡಿದನು.

''ನಿಹತ್ಯ ತೌ ಗೃತ್ಸಮದಮೃಷಿಂ ಶಕ್ರೋಽಭ್ಯಭಾಷತ ॥ ಯಥೇಷ್ಟಂ ಮಾಂ॥
ಸಖೇ ಪಶ್ಯ ಪ್ರಿಯತ್ವಂ ಹ್ಯಾಗತೋಽಸಿ ಮೇ ॥ ಬೃಹದ್ದೇವತಾ ॥''

ವೈನ್ಯರಾಜನು ಮಾಡಿದ ಯಜ್ಞಕ್ಕೆ ಇಂದ್ರಾದಿ ದೇವತೆಗಳೆಲ್ಲರೂ ಬಂದಿದ್ದರು. ಗೃತ್ಸಮದನೂ ಅಲ್ಲಿ ಉಪಸ್ಥಿತನಿದ್ದ. ದೈತ್ಯರು ಈ ಸಂಧಿಯನ್ನು ಸಾಧಿಸಿ ಇಂದ್ರನನ್ನು ಕೊಲ್ಲಬೇಕೆಂದು ಹೊಂಚು ಹಾಕಿದ್ದರು. ಇದರ ಸುಳಿವು ಸ್ವರ್ಗದ ದೊರೆಗೆ ಹತ್ತಿತು. ಕೂಡಲೇ ಅವನು ಯಜ್ಞಕುಂಡದ ಬಳಿಗೆ ಕುಳಿತ ಗೃತ್ಸಮದನಿಗೆ ಸಂಕೇತ ಮಾಡಿ

ಗರ್ಭ ಗುಡಿಯೊಳಗೆ ಕರೆದುಕೊಂಡು ಹೋದನು. ಅಲ್ಲಿ ಇಂದ್ರನು ಅವನಿಗೆ ತನ್ನ ಮೇಲೆ ಬಂದಿರುವ ಗಂಡಾಂತರ ಪ್ರಸಂಗವನ್ನು ತಿಳಿಸಿ ಗೃತ್ಸಮದನ ಆ ವಲ್ಕಲ, ಕೃಷ್ಣಾಜಿನ ಥಾಲಿಪಂಚೆಗಳನ್ನು ಇಸಿದು ತಾನು ಧರಿಸಿಕೊಂಡು ಅವನ ವೇಷದಿಂದಲೇ ಮಂತ್ರಗಳನ್ನು ಪಠಿಸುತ್ತ ಆ ಯಜ್ಞವಾಟದಿಂದ ಪಾರಾದನು. ಆ ನಂತರ ಅಸುರರು ಗರ್ಭಗುಡಿಯಿಂದ ಹೊರಬಿದ್ದ ಗೃತ್ಸಮದನನ್ನು ಕಂಡು ಇವನೇ ಇಂದ್ರನೆಂದು ಶಸ್ತ್ರಾಸ್ತ್ರ ಹಿಡಿದು ಮುಗಿಬಿದ್ದರು.

ಆಗ ಗೃತ್ಸಮದನು ಮಧುರ ಮಧುರವಾಗಿ ಅಕ್ಷರಗಳಿಂದ ಮಹೇಂದ್ರನನ್ನು ಬಣ್ಣಿಸಿ ಆ ದೈತ್ಯರಿಗೆ ತಾನು ಸ್ವರ್ಗಾಧಿಪತಿಯು ಅಲ್ಲವೆಂದು ತೋರಿಸಿಕೊಟ್ಟನು.

ಇದರಂತೆ ಒಂದು ದಿನ ದೇವೇಂದ್ರನು ತನ್ನ ಮಿತ್ರನಾದ ಗೃತ್ಸಮದನ ಮನೆಗೆ ಬಂದನು. ಅದನ್ನು ಕಂಡು ದಾನವರು ತಂಡ ತಂಡವಾಗಿ ಇಂದ್ರನನ್ನು ತುಂಡರಿಸಬೇಕೆಂದು ಗೃತ್ಸಮದನ ಗುಡಿಸಿಲಿಗೆ ಬಂದರು. ಮತ್ತೆ ಇಂದ್ರನು ಗೃತ್ಸಮದನ ವೇಷ ಹಾಕಿಕೊಂಡು ಅಲ್ಲಿಂದ ಪಾರಾಗಿ ಹೋದನು. ಆದರೆ ದೈತ್ಯರು ಗೃತ್ಸಮದನೇ ದೇವೇಂದ್ರ ಎಂದು ರೂಪ ಸಾಮ್ಯದಿಂದ ಭ್ರಮಿಸಿ ಗೃತ್ಸಮದನನ್ನು ಕೊಂದು ಹಾಕಿದರು. ಆಗ ಅವರು ದೇವರನ್ನು ಅನನ್ಯಭಕ್ತಿಯಿಂದ ಪ್ರಾರ್ಥನೆಮಾಡಿದ್ದರಿಂದ ಅದರಿಂದ ಅವನಿಗೆ ಬಿಡುಗಡೆಯಾಯಿತು.

ಹೀಗೆ ಇಂದ್ರ ಗೃತ್ಸಮದರಲ್ಲಿ ವಿಲಕ್ಷಣ ಸಾಮ್ಯವಿದ್ದಿತು. ತನ್ನ ಪ್ರತಿರೂಪದಂತಿರುವ ಈ ಮಣ್ಣಿನ ಮಗನನ್ನು ಮುಂದೆ ಮಾಡಿ ದೇವರಾಜನು ಎಷ್ಟೋ ಸಲ ತಾನು ಪಾರಾಗಿದ್ದನು. ಐತರೇಯ ಬ್ರಾಹ್ಮಣರಲ್ಲಿ ಗೃತ್ಸ-ಪ್ರಾಣ, ಮದ-ಅಪಾನ, ಪ್ರಾಣಾಪಾನಾದಿ ಪಂಚ ವಾಯುಗಳ ಸಮುಚ್ಚಯಾತ್ಮಕ ವ್ಯಕ್ತಿಯೇ ಗೃತ್ಸಮದ ಎಂದು ಐತರೇಯ ಆರಣ್ಯಕದಲ್ಲಿ ಗೃಚ್ಛಮದ ಶಬ್ದದ ನಿರುಕ್ತಿ ನಿರ್ವಚನಗಳನ್ನು ಕೊಟ್ಟಿದ್ದಾರೆ.

ಗಣೇಶ ಪುರಾಣದಲ್ಲಿ ಈ ಗೃತ್ಸಮದನ ಬಗೆಗೆ ವಿಚಿತ್ರವಾದ ಒಂದು ಕತೆ ಬಂದಿದೆ.

ರುಕ್ಮಾಂಗದ ರಾಜನಿಗೆ ಮುಕುಂದಾ ಎಂಬ ಪತಿವ್ರತೆಯಾದ ಪತ್ನಿಯಿದ್ದಳು. ಅವಳ ಅಂಗ ಸೌಂದರ್ಯವನ್ನು ಕಂಡು ಲುಬ್ಧನಾದ ಮಹೇಂದ್ರನು ರುಕ್ಮಾಂಗದನ ವೇಷವನ್ನು ಧರಿಸಿ ಮುಕುಂದೆಯ ಅಂತಃಪುರಕ್ಕೆ ಆಗಮಿಸಿದನು. ಅವಳು ಇವನು

ತನ್ನ ಪತಿಯೇ ಎಂದು ಮೊದಲು ತಿಳಿದು ಅವನೊಡನೆ ಸ್ವಚ್ಛಂದ ವಿಹಾರಕ್ಕಿಳಿದಾಗ ಅವಳಿಗೆ ಗೊತ್ತಾಯಿತು. ಆದರೂ ಇಂದ್ರನ ಮೈಭೋಗದ ರುಚಿಹತ್ತಿದ ಅವಳು ಹೆಚ್ಚಿನ ಉತ್ಸಾಹದಿಂದ ದೇವರಾಜನೊಡನೆ ರತಿಕೇಳಿಗೆ ಇಳಿದು ಪ್ರತಿದಿನವೂ ಶೃಂಗಾರ ಕೇಳಿಗಳಿಂದ ಅವನನ್ನು ತಣಿಸಿದಳು. ರಾಜನಿಗೆ ಮಾತ್ರ ಕೊನೆವರೆಗೂ ಈ ಇಂದ್ರಸಂಗದ ಸಮಾಚಾರವು ಗುರುತಾಗಲೇ ಇಲ್ಲ.

ಆದರಿಂದ ಅವಳಿಗೆ ಗರ್ಭನಿಂತು ಗಂಡುಮಗುವನ್ನು ಹೆತ್ತಳು. ಅವನಿಗೆ ಗೃತ್ಸಮದ ಎಂದು ಹೆಸರಿಟ್ಟರು. ಆ ಮಗು ದೇವೇಂದ್ರನ ಪಡಿಯಚ್ಚಿನಂತೆಯೇ ಇದ್ದಿತು. ಈ ಗರ್ಭರಹಸ್ಯವನ್ನು ಅರಿಯದ ರುಕ್ಮಾಂಗದನು ಅದು ತನ್ನದೇ ಪಿಂಡ ಎಂದು ಭಾವಿಸಿ ಮಗನ ಮುಖದ ಮೇಲಿನ ದೈವಿಕಕಾಂತಿ ಮತ್ತು ಇಂದ್ರಪ್ರಭೆಗಳನ್ನು ಕಂಡು ಆನಂದಪಟ್ಟನು.

ಆ ಹುಡುಗನಿಗೆ ಮುಂದೆ ಮಾನವರ ಬುದ್ಧಿಗೆ ಮೀರಿದ ಮಂತ್ರರಹಸ್ಯಗಳೂ ಅತೀಂದ್ರಿಯ ವಿಷಯಗಳೂ ಗೋಚರವಾಗತೊಡಗಿದವು. ಮಗನ ಈ ಅಮಾನುಷ ಪ್ರತಿಭಾ ವಿಶೇಷವನ್ನು ಕಂಡು ರುಕ್ಮಾಂಗದ ಮಹಾರಾಜನಿಗೆ ಹೆಮ್ಮೆಯೆನಿಸಿತು. ಕೆಲವೇ ದಿನಗಳಲ್ಲಿ ಅವನು ಅಂದಿನ ಪಂಡಿತಮಂಡಲದ ಮುಕುಟಮಣಿಯೆಂದು ಪ್ರಸಿದ್ಧನಾದನು. ಪ್ರತಿಯೊಂದು ಯಜ್ಞಯಾಗಗಳೂ ಅವನ ಆಧ್ವರ್ಯವದಲ್ಲಿಯೇ ನೆರವೇರುತ್ತಿದ್ದವು.

ಒಂದುದಿನ ಮಗಧ ದೇಶದ ಮಹಾರಾಜನ ಮನೆಯಲ್ಲಿ ಅವನ ತಂದೆಯ ಶ್ರಾದ್ಧದ ನಿಮಿತ್ತ ಎಲ್ಲ ಋಷಿಗಳಿಗೂ ಊಟಕ್ಕೆ ಹೇಳಿದ್ದರು. ವಸಿಷ್ಠ ವಿಶ್ವಾಮಿತ್ರ ಅತ್ರಿ ಭರದ್ವಾಜ ಗೃತ್ಸಮದ ಮುಂತಾದ ಎಲ್ಲ ಮಹರ್ಷಿಗಳೂ ಅಲ್ಲಿಗೆ ದಯಮಾಡಿಸಿದ್ದರು.

ಗೃತ್ಸಮದನೂ ಒಂದು ಎಲೆಯ ಮೇಲೆ ಕುಳಿತುಕೊಂಡಿದ್ದ. ಅಲ್ಲಿಯೇ ಮೇಲ್ಗಡೆ ಕುಳಿತ ಅತ್ರಿಮುನಿಯು ಗೃತ್ಸಮದನನ್ನು ನೋಡಿ ''ನಾನು ಇವನ ಪಂಕ್ತಿ ಊಟಮಾಡುವದಿಲ್ಲ'' ಎಂದು ಎಲೆಬಿಟ್ಟು ಎದ್ದರು. ಆಗ ಮಹಾರಾಜನು ಗಾಬರಿಯಾಗಿ ಓಡಿ ಬಂದು ಅತ್ರಿಋಷಿಯನ್ನು ಕೈಮುಗಿದು 'ಏನು ಸಮಾಚಾರ?'

ಎಂದು ಕೇಳಿದಾಗ ಅವರು ''ಈ ಗೃತ್ಸಮದನು ಇಂದ್ರನಿಂದ ವ್ಯಭಿಚಾರ ಜಾತನಾಗಿದ್ದಾನೆ. ಇವನ ತಾಯಿಯು ಪತಿಗೆ ಗೊತ್ತಾಗದಂತೆ ದೇವೇಂದ್ರನ ಜೊತೆಗೆ ಸರಸವಾಡಿ ಇವನನ್ನು ಹೆತ್ತಿದ್ದಾಳೆ. ಆದ್ದರಿಂದ ನಾನಿವನ ಪಂಕ್ತಿಯಲ್ಲಿ ಕುಳಿತು ಊಟಮಾಡುವದಿಲ್ಲ'' ಎಂದು ನಿಷ್ಠುರವಾಗಿ ನುಡಿದರು.

ಆದನ್ನು ಕೇಳಿ ಮಗಧರಾಜನು ಗೃತ್ಸಮದನನ್ನು ಹೊರಗೆ ಹಾಕಿ ಉಳಿದ ಬ್ರಾಹ್ಮಣರಿಗೆಲ್ಲ ಊಟ ಮಾಡಹೇಳಿದರು.

ಇದರಿಂದ ಅವಮಾನಿತನಾದ ಗೃತ್ಸಮದನು ದುಃಖದ ದಳ್ಳುರಿಯಲ್ಲಿ ಬೆಂದು ಬಿಸುಸುಯ್ಯುತ್ತ ಮನೆಗೆ ಬಂದು ತಾಯಿಯನ್ನು ಕೇಳಿದನು. ಆಗ ತಾಯಿಯು ಅವರು ಹೇಳಿದ್ದು ನಿಜವೆಂದು ಒಪ್ಪಿಕೊಂಡಳು. ಆದನ್ನು ಕೇಳಿ ಅವನ ಕೋಪವು ಕಿಚ್ಚಾಗಿ ಮತಿ ಹೆಚ್ಚಾಗಿ ತಾಯಿಗೆ ''ನೀನು ಜಾಲಿಯ ಮರವಾಗು'' ಎಂದು ಚೀರಿದನು. ಆಗ ಅವಳು ''ಸ್ತ್ರೋತ್ತಮ ಸಂಗ ಮಾಡಿದರೆ ಅಥವಾ ಮಾನವಿಯರಿಗೆ ದೇವತಾ ಸಂಗವಾದರೆ ಪಾಪವಿಲ್ಲ. ನೀನು ನನಗೆ ವ್ಯರ್ಥಶಾಪವಿತ್ತೆ. ನಿನ್ನ ಮಕ್ಕಳು ದೈತ್ಯರಾಗಲಿ'' ಎಂದು ಪ್ರತಿಯಾಗಿ ಶಾಪಹಾಕಿದಳು.

ಮುಂದೆ ಗೃತ್ಸಮದನು 'ಗಣಾನಾಂ ತ್ವಾ ಗಣಪತಿಂ' ಎಂಬ ಮಂತ್ರವನ್ನು ಅನುಷ್ಠಾನ ಮಾಡಿ ಗಣಪತಿಯನ್ನು ಒಲಿಸಿಕೊಂಡನು. ಆ ಗಣೇಶನ ಅನುಗ್ರಹದಿಂದ ಮಂತ್ರಶಕ್ತಿಯನ್ನು ಪಡೆದು ಮಹಾಮುನಿಯಾಗಿ ಮಂತ್ರದ್ರಷ್ಟಾರನಾಗಿ ಗೋತ್ರ ಪ್ರವರ್ತಕನಾಗಿ ಮಹಾಮಹರ್ಷಿಯೆಂದು ಎಲ್ಲರಿಂದಲೂ ಪೂಜಿತನಾದನು. ಈ ಘಟನೆಯಿಂದ ಋಗ್ವೇದದಲ್ಲಿ ಹೇಳಿದ ಇಂದ್ರ ಗೃತ್ಸಮದರ ಆಕಾರ ರೂಪ ಸಾಮ್ಯಕ್ಕೆ ಒಂದು ಕಾರಣ ಸೂತ್ರದ ಎಳೆ ದೊರಕುತ್ತದೆ.

★ ★ ★ ★

## ಗೌರವೀತಿ

ವೇದಕಾಲದಲ್ಲಿ ಶಾಕ್ಯರೆಂಬ ಋಷಿಗಳಿದ್ದರು. ಅವರು ಯಾವಾಗಲೂ ಒಂದಲ್ಲ ಒಂದು ಯಜ್ಞವನ್ನು ಮಾಡುತ್ತಿದ್ದರು. ಅವರು ಹೆಚ್ಚಾಗಿ ಪಶುಯಾಗವನ್ನೇ

ಮಾಡುತ್ತಿದ್ದರು. ಇದರಿಂದ ದೇವತೆಗಳು ಸಂತುಷ್ಟರಾಗುತ್ತಿದ್ದರು. ಒಮ್ಮೆ ಶಾಲ್ಕ್ಯ ಋಷಿಗಳು ಬಹಳ ದೊಡ್ಡದಾದ ಯಜ್ಞವೊಂದನ್ನು ಮಾಡಬೇಕೆಂದು ಸಂಕಲ್ಪಿಸಿದರು. ಆ ಯಜ್ಞಕ್ಕೆ ಅರಣ್ಯದ ಕೆಲವು ಪಶುಗಳು ಅಗತ್ಯವಾಗಿತ್ತು. ಅಂತಹವುಗಳನ್ನು ಬೇಟೆಯ ಮೂಲಕ ಸಂಗ್ರಹಿಸಬೇಕಾಗಿತ್ತು. ಅದಕ್ಕಾಗಿ ಶಾಲ್ಕ್ಯರು ತಮ್ಮ ಶಿಷ್ಯ ಸಮೂಹದೊಂದಿಗೆ ಒಂದು ಕಾಡಿಗೆ ಬೇಟೆಗಾಗಿ ತೆರಳಿದರು.

ಶಾಲ್ಕ್ಯರ ಶಿಷ್ಯರಲ್ಲಿ ಗೌರವೀತಿ ಎಂಬ ಹೆಸರಿನ ಋಷಿಕುಮಾರನಿದ್ದ. ಶಾಲ್ಕ್ಯರ ಶಿಷ್ಯರೆಲ್ಲರನ್ನು ಅವರವರ ಹೆಸರಿನೊಂದಿಗೆ ಶಾಲ್ಕ್ಯ ಎಂಬ ಹೆಸರನ್ನು ಸೇರಿಸಿ ಕರೆಯಲಾಗುತ್ತಿತ್ತು. ಅಂತೆಯೇ ಗೌರವೀತಿಯನ್ನು ಗೌರವೀತಿ ಶಾಲ್ಕ್ಯ ಎಂದು ಕರೆಯುತ್ತಿದ್ದರು. ಇವನು ವೇದಾಧ್ಯಯನ ಸಂಪನ್ನನಾದ ತರುಣನಾಗಿದ್ದ. ಇತರರೊಂದಿಗೆ ಭೇಟಿಗಾಗಿ ಗೌರವೀತಿ ಶಾಲ್ಕ್ಯನೂ ತೆರಳಿದ್ದ. ಬಹಳ ಹೊತ್ತಿನಿಂದ ಬೇಟೆಗಾಗಿ ಅಲ್ಲಲ್ಲಿ ಕಣ್ಣಾಡಿಸುತ್ತ ಕಾಡಿನಲ್ಲಿ ತಿರುಗುತ್ತಿರುವಾಗ ಗೌರವೀತಿಯ ಕಣ್ಣಿಗೆ ಜಿಂಕೆಯೊಂದು ಗೋಚರಿಸಿತು. ಅವನು ಕೂಡಲೇ ಆ ಜಿಂಕೆಗೆ ಗುರಿಯಿಟ್ಟು ಬಾಣ ಪ್ರಯೋಗವನ್ನು ಮಾಡಿದನು. ಜಿಂಕೆಯು ಬಾಣದ ಏಟನ್ನು ತಾಳಲಾರದೆ ನೆಲದಲ್ಲಿ ಬಿದ್ದಿತು. ಬಿದ್ದ ಜಿಂಕೆಯನ್ನು ಎತ್ತಿಕೊಂಡು ಇತರರೊಂದಿಗೆ ಸೇರಿಕೊಳ್ಳಬೇಕೆಂಬ ತವಕದಿಂದ ಗೌರವೀತಿಯು ಜಿಂಕೆಯು ಬಿದ್ದ ಸ್ಥಳಕ್ಕೆ ಬಂದು ಇನ್ನೇನು ಜಿಂಕೆಯನ್ನು ಹಿಡಿದುಕೊಳ್ಳಬೇಕೆಂದಿರುವಾಗ ಆಕಾಶದಲ್ಲಿ ಹಾರಿ ಬಂದ ಗರುಡ ಪಕ್ಷಿಯೊಂದು ಬಂದು ಕೆಳಗಿಳಿದು ಆ ಜಿಂಕೆಯನ್ನು ಹಿಡಿದುಕೊಂಡು ಮತ್ತೆ ಆಕಾಶಕ್ಕೆ ಹಾರಿಹೋಯಿತು. ಇದನ್ನು ಕಂಡ ಗೌರವೀತಿಯು ಆ ಗರುಡನನ್ನು ಕೊಲ್ಲುವುದಕ್ಕಾಗಿ ಬಾಣವನ್ನು ಪ್ರಯೋಗಿಸಲು ಸಿದ್ಧನಾದನು. ಪ್ರಾಣಭಯದಿಂದ ಹೆದರಿದ ಗರುಡ ಪಕ್ಷಿಯು ಕೆಳಗಿಳಿದು ಬಂದು ಗೌರವೀತಿಯಲ್ಲಿ ''ನನ್ನ ಕೊಲ್ಲಬೇಡ. ನಿನ್ನ ಮನಸ್ಸಿನಲ್ಲಿ ಇರುವುದನ್ನು ಈಡೇರಿಸುವುದಕ್ಕೆ ನಾನು ಸಹಾಯವನ್ನು ಮಾಡುತ್ತೇನೆ'' ಎಂದಿತು. ಗರುಡ ಪಕ್ಷಿ ಏನು ಸಹಾಯವನ್ನು ಮಾಡೀತೆಂದು ಆಲೋಚಿಸುತ್ತಿದ್ದ ಗೌರವೀತಿಯಲ್ಲಿ ಪುನಃ ಗರುಡ ಪಕ್ಷಿಯು, ''ನೀನು ಅಸಿತ ರಾಜನ ಮಗಳನ್ನು ವಿವಾಹವಾಗಬೇಕೆಂದಿರುವ ಆಸೆಯ ಕುರಿತು ನನಗೆ ತಿಳಿದಿದೆ. ಅದಕ್ಕೋಸ್ಕರ ನಾನು ಸಹಾಯವನ್ನು ಮಾಡಬಲ್ಲೆ'' ಎಂದಿತು.

ಆಗ ಗೌರವೀತಿಗೆ ಆಶ್ಚರ್ಯವಾಯಿತು. ನನ್ನ ಮನಸ್ಸಿನಲ್ಲಿ ಸುಪ್ತವಾಗಿದ್ದ ವಿಷಯವು ಇದಕ್ಕೆ ಗೊತ್ತಾಯಿತಲ್ಲ ಎಂದು ವಿಸ್ಮಯಗೊಂಡನು. ಈ ಗರುಡ ಪಕ್ಷಿಯು ಸಾಮಾನ್ಯವಾದುದಲ್ಲ ಎಂದು ತಿಳಿದು ಬಾಣವನ್ನು ಪ್ರಯೋಗಿಸದೆ ಸುಮ್ಮನಿದ್ದು ಬಿಟ್ಟನು. ನಿಜವಾಗಿ ಗೌರವೀತಿಯ ಮನಸ್ಸಿನೊಳಗೆ ಆ ಆಸೆ ಇತ್ತು ಎಂಬುದೇ ನಿಜವೇ. ಆದರೆ, ಅದು ಸುಲಭದಲ್ಲಿ ಸಾಧ್ಯವಾಗುವ ಸಂಗತಿಯಲ್ಲ ಎಂಬುದೂ ಅವನಿಗೆ ತಿಳಿದಿತ್ತು.

ಅತ್ತ ಕಡೆಯಲ್ಲಿ ತನ್ನ ಮಗಳನ್ನು ರಾಕ್ಷಸರು ಅಪಹರಿಸಿಯಾರೆಂಬ ಹೆದರಿಕೆಯಿಂದ ಅಸಿತ ರಾಜನು ಬಹುದೊಡ್ಡ ಕಟ್ಟಡವನ್ನು ಕಟ್ಟಿ ಅದರ ಮೇಲಿನ ಉಪ್ಪರಿಗೆಯಲ್ಲಿ ಮಗಳನ್ನು ಇಟ್ಟಿದ್ದನು. ಬಲವಾದ ಕಾವಲಿನ ವ್ಯವಸ್ಥೆಯನ್ನು ಮಾಡಿದ್ದನು. ಅವಳನ್ನು ಸಮೀಪಿಸುವುದು ಯಾರಿಗೂ ಸಾಧ್ಯವಿರಲಿಲ್ಲ. ಗರುಡ ಪಕ್ಷಿಯು ತನ್ನ ಬೆನ್ನಿನ ಮೇಲೆ ಗೌರವೀತಿಯನ್ನು ಕುಳ್ಳಿರಿಸಿಕೊಂಡು ಅಸಿತ ರಾಜನ ಮಗಳಿರುವ ಕಟ್ಟಡದ ಉಪ್ಪರಿಗೆಗೆ ಕರೆದುಕೊಂಡು ಹೋಯಿತು. ಉಪ್ಪರಿಗೆಗೆ ಬಂದ ಗೌರವೀತಿಯನ್ನು ಕಂಡ ರಾಜಕುಮಾರಿಗೆ ಆಶ್ಚರ್ಯವಾಯಿತು. ಬಲವಾದ ಕಾವಲನ್ನು ಭೇದಿಸಿ ಇಲ್ಲಿಯವರೆಗೆ ಬರಲೇಬೇಕಾದರೆ ಅವನು ಮಹಾತ್ಮನೇ ಆಗಿರಬೇಕು, ಅಂಥವನನ್ನು ವಿವಾಹವಾಗುವುದರಿಂದ ಸಂತೋಷದಿಂದ ಜೀವಿಸಬಹುದೆಂದು ತಿಳಿದ ರಾಜಕುಮಾರಿಯು ಗೌರವೀತಿಯನ್ನು ವಿವಾಹವಾಗಲು ನಿಶ್ಚಯಿಸಿದಳು.

ಈ ವಿಷಯವನ್ನು ತನ್ನ ತಂದೆಯಲ್ಲಿ ಹೇಳಿ ಗೌರವೀತಿಗೆ ತನಗೆ ವಿವಾಹ ಮಾಡಿಕೊಡಲು ಕೇಳಿಕೊಂಡಳು. ಗೌರವೀತಿಯನ್ನು ನೋಡಿದ ರಾಜನಿಗೂ ಅವನ ತೇಜಸ್ಸನ್ನು ಕಂಡು ಸಂತಸವಾಯಿತು. ಅವನು ತನ್ನ ಮಗಳನ್ನು ಗೌರವೀತಿಗೆ ವಿವಾಹ ಮಾಡಿಕೊಟ್ಟನು. ಹೀಗೆ ತನಗೆ ಪ್ರಾಣದಾನವನ್ನು ಮಾಡಿದ ಗೌರವೀತಿಗೆ ಗರುಡ ಪಕ್ಷಿಯು ಮಹದುಪಕಾರವನ್ನು ಮಾಡಿತು. ವಿವಾಹವಾದ ಗೌರವೀತಿಯು ಸಂತೋಷದಲ್ಲಿ ಆಶ್ರಮದಲ್ಲಿ ಗೃಹಸ್ಥ ಧರ್ಮಕ್ಕೆ ಅನುಗುಣವಾಗಿ ಜೀವನವನ್ನು ನಡೆಸಿದನು.

★ ★ ★ ★

# ಅಗಸ್ತ್ಯ

ಬ್ರಹ್ಮಜ್ಞಾನಿಯಾದ ಮಹರ್ಷಿ ಅಗಸ್ತ್ಯರು ವಿರಕ್ತರಾಗಿ ಯಾವಾಗಲೂ ಜಪತಪೋನುಷ್ಠಾನಗಳಲ್ಲಿಯೇ ಆಸಕ್ತರಾಗಿರುತ್ತಿದ್ದರು. ಅವರಿಗೆ ವಿಷಯ ಸುಖವೆಂದರೆ ಜುಗುಪ್ಸೆ. ಅದರಲ್ಲಿಯೂ ಹೆಣ್ಣು ಎಂದರೆ ಮೂರುಮ್ಮೈಲು ಸಿಡಿದು ನಿಲ್ಲುತ್ತಿದ್ದರು. ದುಡ್ಡಿನ ಆಶೆಯಂತೂ ಎಂದಿಗೂ ಇರಲಿಲ್ಲ.

ಆದುದರಿಂದಲೇ ಅವರ ಜಪತಪಗಳು ಯಾವ ವಿಘ್ನ ವಿರೋಧಗಳಿಲ್ಲದೇ ನಿರಾತಂಕವಾಗಿ ನಿರಂತರ ನಡೆಯುತ್ತಿದ್ದವು.

ಅವರೊಮ್ಮೆ ಒಂದು ಕಾಡಿನಲ್ಲಿ ನಡೆದಾಗ ಹಾಳುಬಾವಿಯೊಂದರಲ್ಲಿ ಅವರ ಪಿತೃಗಳೆಲ್ಲರೂ ತಲೆಕೆಳಗಾಗಿ ಜೋತಾಡುತ್ತಿದ್ದರು. ಆಗ ಅಗಸ್ತ್ಯರು ಅವರ ಬಳಿ ಹೋಗಿ "ಸ್ವಾಮಿ, ಇದೇನು! ತಾವು ಯಾರು? ತಮಗೆ ಇಂಥ ಪ್ರಸಂಗವು ಏಕೆ ಬಂದಿತು?" ಎಂದು ಕೇಳಿದರು.

ಅದಕ್ಕೆ ಪಿತೃಗಳು "ಅಗಸ್ತ್ಯ! ನಾವು ನಿನ್ನ ಪಿತೃಗಳು. ನಿನ್ನ ನೈಷ್ಠಿಕ ಬ್ರಹ್ಮಚರ್ಯವೇ ನಮ್ಮನ್ನು ಈ ಗತಿಗೆ ಗುರಿ ಮಾಡಿದೆ. ನಮ್ಮ ಮನೆತನದಲ್ಲಿ ಈಗ ನೀನೊಬ್ಬನೇ ಉಳಿದಿದ್ದು ನೀನೂ ಕೂಡ ಮದುವೆಯಾಗದೆ ಜಪ ತಪಸ್ಸು ಬ್ರಹ್ಮಚರ್ಯಾದಿ ವ್ರತಗಳಿಂದ ನಿಸ್ಸಂತಾನನಾಗಿ ಕುಳಿತಿರುವೆ. ಇದರಿಂದ ನಿನ್ನ ತಲೆಗೆ ನಮ್ಮ ವಂಶವೇ ನಿರ್ವಂಶವಾಗಿ ಪಿಂಡಕ್ಕೆ ಗತಿಯಿಲ್ಲದೇ ನಾವಿಂತು ತಲೆಕೆಳಗಾಗಿ ಜೋತಾಡುವಂತಾಗಿದೆ" ಎಂದು ಹೇಳಿದರು.

ಅದನ್ನು ಕೇಳಿ ಅಗಸ್ತ್ಯರಿಗೆ ಬಹಳ ಕೆಡುಕೆನಿಸಿತು. ಆಗ ಅವರು ತಮ್ಮ ಪಿತೃಗಳಿಗೆ ನಾನು ಗೃಹಸ್ಥ ಧರ್ಮವನ್ನು ಅಂಗೀಕರಿಸುತ್ತೇನೆಂದು ಆಶ್ವಾಸನೆಯಿತ್ತರು. ಆಗ ಪಿತೃಗಳಿಗೆ ಸಂತೋಷವಾಯಿತು.

"ಅಗಸ್ತ್ಯ ನೀನು ಒಳ್ಳೇ ಮಗನನ್ನು ಪಡೆದರೆ ನಮಗೆ ಈ ನರಕದಿಂದ ವಿಮೋಚನವಾಗುವದು" ಎಂದು ಹೇಳಿದರು. ಅದಕ್ಕೆ ಅಗಸ್ತ್ಯರು ಹಾಗೇ ಆಗಲಿ ಎಂದು ಹೇಳಿ ಸಮಾಧಾನಪಡಿಸಿ ತಮ್ಮ ಆಶ್ರಮಕ್ಕೆ ಬಂದರು.

ಅವರು ಮದುವೆಯಾಗಬೇಕೆಂದು ತಮಗೆ ರೂಪ ಗುಣಗಳಿಂದ ಅನುರೂಪವಾಗಬಹುದಾದ ಕನ್ಯೆಯೊಂದನ್ನು ಶೋಧಿಸಹತ್ತಿದರು. ಎಲ್ಲಿಯೂ ಅವರಿಗೆ ತಮ್ಮ ಮನಸ್ಸಿಗೆ ಬರುವಂಥ ತಕ್ಕ ಕನ್ಯೆಯೇ ದೊರಕಲಿಲ್ಲ.

ಆಗ ಅವರು ತಾವಾಗಿ ಪ್ರಪಂಚದಲ್ಲಿಯ ಎಲ್ಲ ಪದಾರ್ಥಗಳಲ್ಲಿಯ ಒಳ್ಳೊಳ್ಳೆ ಉತ್ತಮಾಂಶಗಳನ್ನೆಲ್ಲ ಸೇರಿಸಿ ಸರ್ವಾಂಗಸುಂದರವಾದ ಒಂದು ಚಿಕ್ಕ ಸ್ತ್ರೀರೂಪವನ್ನು ನಿರ್ಮಿಸಿದರು. ಆದರೆ ಆ ಸಣ್ಣ ಮಗುವನ್ನು ತಾಯಿಯಿಲ್ಲದೇ ಬೆಳೆಸಿ ದೊಡ್ಡದನ್ನಾಗಿ ಮಾಡುವದು ಹೇಗೆ? ಎಂಬ ಯೋಜನೆ ಅವರಿಗೆ ಬಂದಿತು.

ಅದೇ ವೇಳೆಯಲ್ಲಿ ವಿದರ್ಭರಾಜನು ಸಂತಾನಕ್ಕಾಗಿ ತಪಸ್ಸು ಮಾಡುತ್ತಿದ್ದ. ಅದನ್ನು ನೋಡಿ ಅಗಸ್ತ್ಯರು ಅವನಿಗೆ ಆ ಕನ್ಯಾಮಣಿಯನ್ನು ಕೊಡಮಾಡಿದರು. ಅತ್ಯಂತ ಸುಂದರವಾದ ಆ ಹೆಣ್ಣು ಮಗುವನ್ನು ಪಡೆದು ರಾಜದಂಪತಿಗಳಿಗೆ ಬಹಳ ಆನಂದವಾಯಿತು.

ಮಿಂಚಿನ ಕುಡಿಯಂತೆ ಕಾಂತಿಯಿಂದ ಬೆಳಗುವ ಆ ಕನ್ಯಾರತ್ನಕ್ಕೆ ಲೋಪಾಮುದ್ರಾ ಎಂದು ನಾಮಕರಣ ಮಾಡಲಾಯಿತು. ನೀರಿನಲ್ಲಿ ಕಮಲದ ಬಳ್ಳಿ ಚೆಲ್ವರಿದು ಬೆಳೆಯುವಂತೆ ಆ ರಾಜಗೃಹದಲ್ಲಿ ಲೋಪಾಮುದ್ರೆಯು ಭರದಿಂದ ಬೆಳೆಯಹತ್ತಿದಳು. ಅವಳು ಪ್ರಬುದ್ಧಳಾದಾಗ ರಾಜನಿಗೆ ಅವಳನ್ನು ಯಾರಿಗೆ ಕೊಡಬೇಕೆಂಬ ಚಿಂತೆ ಕಾಡಹತ್ತಿತು.

ಲೋಪಾಮುದ್ರೆಯ ಅಮಾನುಷ ಸೌಂದರ್ಯಕ್ಕೆ ತಕ್ಕಂಥವರು ಎಲ್ಲಿಯೂ ದೊರಕಲಿಲ್ಲ. ಅವಳೋ ಅವನೀತಲದ ಅಪ್ಸರೆಯಂತೆ ಅಪರೂಪವಾದ ತನ್ನ ರೂಪರಾಶಿಯಿಂದ, ಶೀಲಸೌಜನ್ಯದಿಂದ, ಮಧುರ ಮಾತುಗಳಿಂದ ತಾಯಿತಂದೆಗಳನ್ನು ಅತ್ಯಂತ ಆನಂದ ಪಡಿಸುತ್ತಿದ್ದಳು.

ಪ್ರಾಯಕ್ಕೆ ಬಂದ ಲೋಪಾಮುದ್ರೆಯ ಲೋಕೋತ್ತರ ಲಾವಣ್ಯದ ಕೀರ್ತಿ ದಿಗಂತದಲ್ಲಿ ಹಬ್ಬಿತು. ಆಗ ಅಗಸ್ತ್ಯರ ಕಿವಿಗೂ ಆ ಸಮಾಚಾರ ತಲಪಿ ಅವರು ನೇರವಾಗಿ ವಿದರ್ಭರಾಜನ ಬಳಿಗೆ ಬಂದರು.

ಆಗ ಮಹಾರಾಜನು ಅವರಿಗೆ ಸ್ವಾಗತ ಮಾಡಿ, ಆಸನವಿತ್ತು, ಉಪಚರಿಸಿದ ಬಳಿಕ ಬಂದ ಕಾರಣವೇನೆಂದು ಕೇಳಿದಾಗ ಅಗಸ್ತ್ಯರು ''ಮಹಾರಾಜ, ನಿನ್ನ ಮಗಳು ಉಪವರಳಾಗಿರುವದರಿಂದ ನೀನು ಅವಳಿಗೆ ಅಪರೂಪನಾದ ವರನನ್ನು ಹುಡುಕುತ್ತಿರುವೆಯಂತೆ. ಆದ್ದರಿಂದ ನಾನೇ ಈಗ ಅವಳನ್ನು ಮದುವೆಯಾಗಬೇಕೆಂದು ಬಂದಿದ್ದೇನೆ. ನನಗೇ ಅವಳನ್ನು ಧಾರೆಯೆರೆದು ಕೊಟ್ಟುಬಿಡು'' ಎಂದು ಕೇಳಿದರು.

ಆದರೆ ಮಹಾರಾಜನಿಗೆ ಇಷ್ಟು ದಿನ ಅರಮನೆಯಲ್ಲಿ ಅಂಗೈಯಲ್ಲಿಯ ಅರಗಿಣಿಯಂತೆ ಬೆಳೆಸಿ ಅಷ್ಟೈಶ್ವರ್ಯದ ಭೋಗವಿಲಾಸಗಳ ಸುಖಸುಪ್ಪತ್ತಿಗೆಯಲ್ಲಿ ಲೋಲಾಡಿಸಿದ ಮಗಳನ್ನು ಈಗ ಬಡಬ್ರಾಹ್ಮಣನ ಗುಡಿಸಲ ಜೀವನಕ್ಕೆ ಧಾರೆಯೆರೆದು ಕೊಡಲಿಕ್ಕೆ ಮನಸ್ಸು ಒಪ್ಪಲಿಲ್ಲ. ನಿಷೇಧಿಸಲಿಕ್ಕೆ ಧೈರ್ಯವಿಲ್ಲ. ಹೀಗಾಗಿ ಏನೂ ತಿಳಿಯದೇ ಅವನು ಒಳಗೆ ಎದ್ದು ಬಂದು ತನ್ನ ಹೆಂಡತಿಯನ್ನು ಕೇಳಿದನು. ಅವಳಿಗಾದರೂ ಅರಮನೆಯ ಆ ಬೆಳದಿಂಗಳನ್ನು ಕಾಡಿಗಟ್ಟುವದು ಸರ್ವಥಾ ಮನಸ್ಸಿರಲಿಲ್ಲ. ''ಕೊಡದಿದ್ದರೆ ಚಂಡಕೋಪನಾದ ಆ ಮುನಿ ಶಾಪ ಕೊಟ್ಟುಬಿಡುವನು. ಕೊಟ್ಟರೆ ನಮ್ಮ ಐದು ಮಲ್ಲಿಗೆ ತೂಕದ ಈ ಸುಕುಮಾರಿಯು ಋಷಿಜೀವನದಲ್ಲಿ ಬಡತನವನ್ನು ಬಿಗಿದಪ್ಪಿಕೊಂಡೇ ಜನ್ಮಹಾಕಬೇಕಾಗುವದು'' ಎಂದು ಗಂಡ ಹೆಂಡರಿಬ್ಬರೂ ಗೋಳಾಡಹತ್ತಿದರು.

ಆಗ ಅಲ್ಲಿಗೆ ಲೋಪಾಮುದ್ರೆಯು ಬಂದು ತಾಯಿ ತಂದೆಗಳ ಆ ಅನುಸಂಕಟವನ್ನು ನೋಡಿ ನಗುತ್ತಾ ''ಅಪ್ಪ! ನೀವೇಕೆ ಇಷ್ಟು ಯೋಚನೆ ಮಾಡುವಿರಿ. ನಾನು ಸಂತೋಷದಿಂದ ಆ ಮುನಿಪುಂಗವರನ್ನು ಮದುವೆಯಾಗುತ್ತೇನೆ. ತಾಯಿ! ಎಷ್ಟು ಜನ್ಮ ತಪಮಾಡಿದರೂ ಇಂಥ ಬ್ರಹ್ಮರ್ಷಿಪತಿ ದೊರಕಲಾರ. ನನ್ನ ಪೂರ್ವಪುಣ್ಯದ ಬಲದಿಂದ ಅಂಥ ಬ್ರಹ್ಮಜ್ಞಾನಿಗಳು ಮನೆತನಕ ನನ್ನನ್ನು ಕೇಳಲಿಕ್ಕೆ ಬಂದಾಗ ಇನ್ನೇನು ವಿಚಾರ. ನನ್ನನ್ನು ಸಂತೋಷದಿಂದ ಅವರಿಗೆ ಮದುವೆಮಾಡಿಕೊಡಿರಿ'' ಎಂದು ಹೇಳಿದಳು. ಆಗ ಅವಳ ಅಪೇಕ್ಷೆಯಂತೆ ವಿದರ್ಭರಾಜನು ವಿಧಿಪೂರ್ವಕವಾಗಿ ಲೋಪಾಮುದ್ರೆಯನ್ನು ಅಗಸ್ತ್ಯರಿಗೆ

ವಿವಾಹಮಾಡಿ ಕೊಟ್ಟನು. ವೈವಾಹಿಕ ವಿಧಿಗಳೆಲ್ಲವೂ ಯಥಾಸಂಗವಾಗಿ ಮುಗಿದ ಬಳಿಕ ಅಗಸ್ತ್ಯರು ತಮ್ಮ ಪತ್ನಿ ಲೋಪಾಮುದ್ರೆಯನ್ನು ತಮ್ಮ ಆಶ್ರಮಕ್ಕೆ ಕರೆದೊಯ್ಯಬೇಕೆಂದು ಬಂದರು.

ಆಗ ಲೋಪಾಮುದ್ರೆಯ ತಂದೆತಾಯಿಗಳು ಕೊಟ್ಟ ಅನೇಕ ಅನರ್ಘ್ಯವಾದ ಮುತ್ತು ರತ್ನದ ಆಭರಣಗಳನ್ನು ಮೈತುಂಬ ಹಾಕಿಕೊಂಡು ಪೀತಾಂಬರವುಟ್ಟು, ಸಾಕ್ಷಾದ್ ಗೌರಿಯಂತೆ ಶೃಂಗಾರಿತಳಾಗಿ ನಿಂತುಕೊಂಡಿದ್ದಳು. ಅವಳ ಜೊತೆಗೆ ಕಳಿಸಲಿಕ್ಕೆಂದು ಅನೇಕ ದಾಸದಾಸಿಯರನ್ನೂ ಹಾಗೂ ವಸ್ತ್ರವಡವೆ, ಪಟ್ಟೆಪೀತಾಂಬರ, ಧನ, ಧ್ಯಾನ, ಪಾತ್ರೆ ಪರಡಿ ಎಲ್ಲವನ್ನೂ ರಾಜದಂಪತಿಗಳು ಸಿದ್ಧಮಾಡಿಟ್ಟಿದ್ದರು. ಅರಣ್ಯದಲ್ಲಿದ್ದರೂ ಮಗಳಿಗೆ ಧನದ ಕೊರತೆಯಾಗಬಾರದು. ದುಡಿಯುವ ಪ್ರಸಂಗ ಬರಬಾರದು ಎಂದು ಅವರು ಯೋಜನೆ ಮಾಡಿದ್ದರು.

ಆ ಎಲ್ಲ ಸಿದ್ಧತೆ ಹಾಗೂ ತಮ್ಮ ಭಾಮಿನಿಯ ಸುವರ್ಣ ಶೃಂಗಾರವನ್ನು ಕಂಡು ಅಗಸ್ತ್ಯರು ತಮ್ಮಲ್ಲಿಯೇ ನಕ್ಕು ''ಲೋಪಾಮುದ್ರೆ, ಇದೆಲ್ಲವೂ ಅರಣ್ಯದ ಜೀವನಕ್ಕೆ ಉಪಯೋಗವಿಲ್ಲ. ಧನಕನಗಳ ಮೋಹ ಅಭಿಮಾನಗಳನ್ನು ಬಿಟ್ಟು ಕಾಡಿನಲ್ಲಿ ಕುಟೀರ ಕಟ್ಟಿಕೊಂಡು ಅಧ್ಯಾತ್ಮಸಾಧನ ಮಾಡುವ ನಮ್ಮಂಥ ವೀತರಾಗ ಋಷಿಗಳಿಗೆ ಈ ಬಟ್ಟೆಬರೆ, ಧನಧಾನ್ಯ, ಸುವರ್ಣ ಅಲಂಕಾರ, ದಾಸದಾಸಿಯರು ಯಾವದೂ ಬೇಕಾಗಿಲ್ಲ. ಇದೆಲ್ಲವನ್ನೂ ಇಲ್ಲಿಯೇ ಬಿಟ್ಟುಬಿಡು. ಮುತ್ತು ಬಂಗಾರದ ಆ ಆಭರಣಗಳನ್ನೆಲ್ಲ ಕಳಚಿ ಕೊಟ್ಟುಬಿಡು. ಇಕೋ ಈ ನಾರು ಬಟ್ಟೆಯನ್ನು ಉಟ್ಟುಕೊಂಡು ನನ್ನ ಜೊತೆಗೇ ಕಾಡಿಗೆ ನಡೆ'' ಎಂದು ಹೇಳಿ ಅವಳಿಗೆ ಉಡಲಿಕ್ಕೆ ತಮ್ಮ ಜೊತೆಗೆ ತಂದ ವಲ್ಕಲವೊಂದನ್ನು ಕೊಟ್ಟರು.

ಅವರ ಅಭಿಪ್ರಾಯವನ್ನು ತಿಳಿದು ಲೋಪಾಮುದ್ರೆಯು ತಕ್ಷಣ ತಾನುಟ್ಟ ಬಟ್ಟೆಗಳನ್ನು ಕಳೆದು, ಬೇರೆವುಟ್ಟು ತೊಟ್ಟ ಆಭರಣಗಳನ್ನು ತೆಗೆದು, ಋಷಿರಮಣಿಯಾಗಿ ಪರಿವಾರ ದಾಸದಾಸಿಯರನ್ನೆಲ್ಲ ಮರಳಿ ಕಳಿಸಿ ತಾನೊಬ್ಬಳೇ ಅಗಸ್ತ್ಯರ ಜೊತೆಗೆ ಆಶ್ರಮಕ್ಕೆ ಬಂದಳು.

ಅಗಸ್ತ್ಯರು ಗಂಗಾತೀರದಲ್ಲಿ ತಮ್ಮ ಪರ್ಣಕುಟೀರವನ್ನು ಮಾಡಿದರು. ಗೃಹಿಣಿಯೊಂದಿಗೆ ಆಶ್ರಮಕ್ಕೆ ಬಂದ ಅವರು ತಮ್ಮ ತಮ್ಮ ಅನುಷ್ಠಾನಗಳನ್ನು ಕೈಕೊಂಡರು. ರಾಜಕುಮಾರಿಯಾಗಿ ಅರಮನೆಯ ಐಷಆರಾಮದ ವಾತಾವರಣದಲ್ಲಿಯೇ ಬೆಳೆದ ಅವಳಿಗೆ ಅಗಸ್ತ್ಯರು ಯಾವ ಆಶ್ರಮಧರ್ಮದ ನಿಷ್ಠುರವಾದ ನಿಯಮ ನಿಬಂಧನೆಗಳನ್ನೂ ಹೇರದೇ ಅವಳಿಗೆ ಸುಖವಾಗಿ ಇರುವ ಸಕಲ ಸೌಕರ್ಯಗಳನ್ನೂ ಒದಗಿಸಿದ್ದರು.

ಆದರೆ ಪತಿವ್ರತಾ ಶಿಖಾಮಣಿಯಾದ ಲೋಪಾಮುದ್ರೆಯು ಅಂಥ ಚಿಕ್ಕಪ್ರಾಯದ ವಯಸ್ಸಿನಲ್ಲಿಯೂ ಯಾವುದೇ ಲೌಕಿಕ ಸುಖೋಪಭೋಗದ ಆಶೆ ಅಮಿಷಗಳಿಗೆ ಒಳಗಾಗದೇ ತಾನೂ ಮಹರ್ಷಿಗಳಂತೆಯೇ ವಿಷಯ ಸುಖದಿಂದ ವಿಮುಖಳಾಗಿ ಆಶ್ರಮದ ಕಠೋರ ಜೀವನಕ್ಕೆ ತಾನಾಗಿ ಅಣಿಯಾದಳು. ವ್ರತ, ಉಪವಾಸ, ಸ್ನಾನ, ಒದ್ದೆ, ಕಂದಮೂಲ ಗಡ್ಡೆ ಗೆಣಸಿನ ಆಹಾರ, ಚಾಪೆಯ ಮೇಲೆ ಮಲಗುವದು, ಹಗಲಿರುಳೂ ದೇವರ ಧ್ಯಾನ, ಬಂದ ಅತಿಥಿಗಳಿಗೆ ಸೇವೆ ಮಾಡುವದು, ಆಶ್ರಮದ ವಟುಗಳಿಗೆ ಅಡಿಗೆ ಮಾಡಿ ಹಾಕುವದು ಮೊದಲಾದ ಬಗೆಬಗೆಯ ಕಠಿಣಕಾರ್ಯಗಳನ್ನೆಲ್ಲ ತಾನಾಗಿ ದಕ್ಷತೆಯಿಂದ ಮಾಡಹತ್ತಿದಳು. ಮುನಿಗಳ ಸ್ನಾನ ಆನ್ಹಿಕ ದೇವತಾರ್ಚನೆ ಜಪತಪ ಅನುಷ್ಠಾನಗಳಿಗೆ ಸಕಲ ವಿಧವಾದ ತಯಾರಿಯನ್ನು ಭಕ್ತಿಯಿಂದ ಮಾಡುತ್ತಿದ್ದಳು.

ಇಷ್ಟೆಲ್ಲ ಆಶ್ರಮದ ಕಾರ್ಯಗಳಲ್ಲಿ ಅವಳಿಗೆ ಹಗಲು ರಾತ್ರಿ ಸಾಕಾಗುತ್ತಿದ್ದಿಲ್ಲ. ಅರಮನೆ ಸಿರಿಮನೆಗಳಲ್ಲಿ ಇಷ್ಟು ದಿನ ಕಾಲಕಳೆದು ಸುಖ ಸುಪ್ಪತ್ತಿಗೆಯ ಮೇಲೆಯೇ ಬೆಳೆದ ಅವಳು ಒಮ್ಮೆಲೆ ಆಶ್ರಮದ ಇಂಥ ಕಷ್ಟ ನಿಷ್ಠುರವಾದ ಜೀವನಕ್ಕೆ ಇಷ್ಟು ಸಮರಸಳಾಗಿ ಹೊಂದಿಕೊಂಡದ್ದನ್ನು ನೋಡಿ ಮುನಿಮಹರ್ಷಿಗಳೆಲ್ಲರೂ ಅಚ್ಚರಿಪಟ್ಟು ಮೆಚ್ಚಿ ಮಾತನಾಡುತ್ತಿದ್ದರು. ಒಂದುದಿನವೂ ಅವಳು ತಂದೆಯ ಮನೆಯ ವಿಲಾಸೀ ಜೀವನವನ್ನಾಗಲಿ, ಪಕ್ವಾನ್ನದ ಊಟವನ್ನಾಗಲಿ ರಾಜೈಶ್ವರ್ಯವನ್ನಾಗಲಿ ನೆನೆದಿದ್ದಿಲ್ಲ. ಜನ್ಮಪೂರ್ತಿ ಆಶ್ರಮದಲ್ಲಿ ಕಳೆದ ಅನಸೂಯಾ ಅರುಂಧತಿಯರಂತೆ ಮುನಿವೃತ್ತಿಯಿಂದ ಅಗಸ್ತ್ಯರ ಸೇವೆಯಲ್ಲಿಯೇ ಶರೀರ

ಸವೆಯಿಸಿದಳು. ಅವರ ಮನಸ್ಸಿಗೆ ತೃಪ್ತಿಮಾಡುವದಕ್ಕಾಗಿಯೇ ಸಮಯವನ್ನೆಲ್ಲ ವ್ಯಯಸಿದಳು. ಅವಳ ಈ ಅದ್ಭುತವಾದ ತ್ಯಾಗ ಮತ್ತು ವಿರಾಗಗಳು ಆಜನ್ಮ ತಪಸ್ವಿಗಳಾದ ಅಗಸ್ತ್ಯರನ್ನೇ ಮೀರಿಸಿದ್ದವು. ಪತಿ ಸೇವೆಗಾಗಿ ಆ ಮುನಿಪತ್ನಿ ಪಡುವ ಕಾಯಕ್ಲೇಶವನ್ನು ನೋಡಿದಾಗ ಅಗಸ್ತ್ಯರ ಮನಸ್ಸೇ ಒಮ್ಮೊಮ್ಮೆ ಅನುಕಂಪ ಭರಿತವಾಗುತ್ತಿತ್ತು.

ಈ ರೀತಿಯಾಗಿ ಎಷ್ಟೋ ಕಾಲ ಲೋಪಾಮುದ್ರೆಯ ಸೇವಾವ್ರತವು ನಡೆದ ಬಳಿಕ ಅಗಸ್ತ್ಯರು ಅತ್ಯಂತ ಪ್ರಸನ್ನರಾದರು. ಒಂದು ದಿನ ಆಶ್ರಮದ ನಿಯಮ ನಿಷ್ಠೆಗಳಿಂದ ನಡೆದು ಪತಿಸೇವಾಶುಶ್ರೂಷೆಗಳಿಂದ ಸವೆದು ಸೊರಗಿ ಒಣಗಿ ಕಟ್ಟಿಗೆಯಂತಾದ ಲೋಪಾಮುದ್ರೆಯ ಕಾಂತಿಮಾತ್ರಾವಶೇಷಿತವಾದ ಶರೀರವನ್ನು ಕಂಡು ಅಗಸ್ತ್ಯರಿಗೆ ಏಕೋ ಹೃದಯಹಿಂಡಿದಂತಾಯಿತು. ರಾಜಪುತ್ರಿಯಾದ ಅವಳು ನನಗಾಗಿ ಎಂಥ ತ್ಯಾಗ ತಪಸ್ಸುಗಳನ್ನು ಕೈಕೊಂಡು ಶ್ರೀಗಂಧದಂತೆ ತನ್ನ ತನುವನ್ನು ತೆಯ್ದಿದ್ದಾಳಲ್ಲ! ಅವಳಿಗೆ ನಾನೇನಾದರೂ ವಿಶೇಷಾನುಗ್ರಹ ಮಾಡಬೇಕು. ಇಂದಿನವರೆಗೆ ನಾನೊಮ್ಮೆಯೂ ಅವಳ ಆಶೆ ಆಕಾಂಕ್ಷೆ ಏನು ಎಂದು ಕೇಳಲಿಲ್ಲ. ವೈವಾಹಿಕ ಜೀವನದಲ್ಲಿ ಒಂದು ಸುಖವೂ ಅವಳಿಗೆ ದೊರಕುವಂತೆ ಮಾಡಲಿಲ್ಲ. ಈಗಲಾದರೂ ಒಮ್ಮೆಯಾದರೂ ಪತಿಯಾದ ನಾನು ಅವಳ ಯೌವನದ ಮನೋರಥವನ್ನು ಪೂರ್ಣಮಾಡಬೇಕು'' ಎಂದು ಮನಸ್ಸಿನಲ್ಲಿ ನಿರ್ಧರಿಸಿದರು.

ಒಂದು ದಿನ ಲೋಪಾಮುದ್ರೆಯು ಋತುಪ್ರಾಯಳಾಗಿ ಎರಕೊಂಡು ಆಶ್ರಮದಲ್ಲಿ ನಿಂತುಕೊಂಡಿದ್ದಳು. ಅವಳ ಶೌಚ ಆಚಾರ ವಿಚಾರ ಪರಿಚಾರ ಹಾಗೂ ಇಂದ್ರಿಯ ನಿಗ್ರಹಗಳಿಂದ ಪ್ರೀತಪ್ರಸನ್ನರಾದ ಅಗಸ್ತ್ಯರು ಅವಳನ್ನು ಇಂದ್ರಿಯ ಸುಖಕ್ಕಾಗಿ ಕರೆದರು.

ವ್ರತೋಪವಾಸಗಳಿಂದ ಲೋಪಾಮುದ್ರೆಯು ಎಷ್ಟೇ ಸೊರಗಿದ್ದರೂ ಅವಳ ಸ್ವಾಭಾವಿಕವಾದ ಸೌಂದರ್ಯ ಕಡಿಮೆಯಾಗಿದ್ದಿಲ್ಲ. ಸ್ನಾನ ಶುದ್ಧಳಾದ ಅವಳ ಎಳೆ ಮುಖದಲ್ಲಿ ಶಾರದ ಪೌರ್ಣಿಮೆಯ ಚಂದ್ರಜ್ಯೋತ್ಸ್ನೆಯು ಕಂಗೊಳಿಸುತ್ತಿತ್ತು. ಕಂಗಳಲ್ಲಿ ಮಂಗಳ ಕಾಂತಿ ಮಿಂಚಾಡುತ್ತಿತ್ತು. ಅವಳ ಪ್ರಾಯದುಂಬಿದ

ಅಂಗಾಂಗಗಳಲ್ಲಿ ಅಗಸ್ತ್ಯರಿಗೆ ಸೌಂದರ್ಯದ ಮಹಾಪೂರವೇ ಬಂದಂತೆನಿಸಿತು. ಮದುವೆಯಾದ ಬಳಿಕ ಅವಳನ್ನೆಂದೂ ಈ ದೃಷ್ಟಿಯಿಂದ ನೋಡಿರಲೇ ಇಲ್ಲ ಎನಿಸಿತು ಆ ಮುನಿಮನಕ್ಕೆ. ಇಂಥ ಅಪೂರ್ವ ಚೆಲುವಿನ ಭಂಡಾರವನ್ನು ಕಂಡು ಅವರ ಚಿತ್ತ ಇಂದು ಚಂಚಲವಾಯಿತು. ಆ ಸೌಂದರ್ಯದ ತವನಿಧಿಯನ್ನು ಸೂರೆಗೊಂಡು ತಮ್ಮ ಮನಸ್ಸನ್ನು ತೃಪ್ತಿಪಡಿಸಬೇಕೆಂದು ಯೋಚಿಸಿ ಪ್ರೇಮದೃಷ್ಟಿಯಿಂದ ನೋಡಿ ಕಾಮ ಕೇಳೀ ವಿಲಾಸಕ್ಕೆ ತಾವಾಗಿ ಕರೆದಿದ್ದರು.

ಆಗ ಲಜ್ಜೆಯಿಂದ ಲೋಪಾಮುದ್ರೆಯ ಮುಖ ಕೆಂಪೇರಿ ಅವಳು ನಾಚುತ್ತಲೇ ಕೈಮುಗಿದು ''ಸ್ವಾಮಿ, ನಾನಿಂದು ಧನ್ಯಳಾದೆ. ಆದರೆ ನನ್ನದೊಂದು ಪ್ರಾರ್ಥನೆಯನ್ನು ತಾವು ನಡೆಯಿಸಿಕೊಡುವ ಕೃಪೆಯಾಗಬೇಕು'' ಎಂದು ಬೇಡಿಕೊಂಡಳು. ಆಗ ಅಗಸ್ತ್ಯರು ಪ್ರೀತಿಯಿಂದ ''ಆಗಲಿ ನಿನ್ನ ಅಪೇಕ್ಷೆ ಏನು ಹೇಳು'' ಎಂದು ಕೇಳಿದರು.

ಆಗ ಲೋಪಾಮುದ್ರೆಯು ವಿನಯದಿಂದ ''ಸ್ವಾಮಿ, ಎಂದಿಲ್ಲದೆ ಇಂದೊಂದು ದಿನ ತಾವು ನನ್ನನ್ನು ಬಯಸಿದ್ದೀರಿ. ಈ ನಾರು ಬಟ್ಟೆ ಈ ನಿರಾಭರಣ ದೇಹದಿಂದ ತಮ್ಮ ಸೇವೆಯನ್ನು ಮಾಡಲಿಕ್ಕೆ ನನಗೆ ಏಕೋ ಸಂಕೋಚವೆನಿಸುತ್ತಲಿದೆ. ತಮಗಾದರೂ ಒಳ್ಳೊಳ್ಳೆ ಬಟ್ಟೆಬರೆ ಆಭರಣ ಅಲಂಕಾರಗಳನ್ನು ಇಡಿಸಿ ತೊಡಿಸಿದರೆ ತಮ್ಮ ಸ್ವಾಭಾವಿಕ ಸೌಂದರ್ಯಕ್ಕೆ ಕಾಂತಿಯ ಕಳಸವಿಟ್ಟಂತಾಗುತ್ತದೆ. ವಸ್ತ್ರಾಭರಣಗಳಿಂದ ಭೂಷಿತವಾದ ತಮ್ಮ ಸಾಲಂಕೃತ ಶರೀರ ಸೌಷ್ಠವವನ್ನು ಕಾಣಬೇಕೆಂದು ನನಗೆ ಆಸೆ. ಹೀಗೆ ನಾವಿಬ್ಬರೂ ಅಲಂಕೃತರಾಗಿ ನಮ್ಮ ತಂದೆಯ ಅರಮನೆಯಂಥ ಮನೆ, ಅಂಥದೇ ಶಯ್ಯಾಗಾರ, ಅದರಲ್ಲಿ ಅಂಥದೇ ಆದ ಹಂಸತೂಲಕಲ್ಪದ ಮೆತ್ತಗಿನ ಸುಪ್ಪತ್ತಿಗೆ ಅದರ ಮೇಲೆ ವಸ್ತ್ರಾಭರಣಗಳಿಂದ ಭೂಷಿತರಾಗಿ ಮಂಡಿಸಿದ ತಮ್ಮನ್ನು ದಾಸಿಯಾಗಿ ನಾನು ಸೇವಿಸಬೇಕೆಂದು ಬಯಕೆಯಾಗಿದೆ. ಇದನ್ನು ತಾವು ಪೂರೈಸಬೇಕು'' ಎಂದು ಕೇಳಿಕೊಂಡಳು.

ಅವಳ ಮನೋರಥದ ಗೋಪುರಗಳನ್ನು ಕಂಡು ಮುನಿಗಳಿಗೆ ದಿಗ್ಭ್ರಮೆಯಾಯಿತು.

''ಲೋಪಾಮುದ್ರೆ ಇಷ್ಟೆಲ್ಲ ನಿನ್ನ ಅಭೀಷ್ಟಗಳನ್ನು ಪೂರೈಸಲಿಕ್ಕೆ ನಾನೇನು ನಿನ್ನ ತಂದೆಯಂತೆ ಮಹಾರಾಜನೇ! ನನ್ನಂಥ ಬಡ ಬ್ರಾಹ್ಮಣನಿಗೆ ಈ ರಾಜಭೋಗ್ಯವಾದ ವಸ್ತುಗಳನ್ನೆಲ್ಲ ಹೇಗೆ ಒದಗಿಸಲಾದೀತು? ನೀನು ಹೇಳಿದ ಈ ಎಲ್ಲ ಭೋಗವಿಲಾಸ ಸಾಮಗ್ರಿಗಳಿಗೆ ಅಗಣಿತ ಐಶ್ವರ್ಯ ಬೇಕು. ಗುಡಿಸಲಿನ ಗೃಹಸ್ಥನಾದ ನನ್ನಲ್ಲಿ ಅಷ್ಟು ಹಣವೆಲ್ಲಿದೆ?'' ಎಂದು ಅಚ್ಚರಿಯಿಂದ ಹುಬ್ಬುಗಿ ಕೇಳಿದರು ಅಗಸ್ತ್ಯರು.

''ಪ್ರಭು, ತಾವು ಬಯಸಿದರೆ ಯಾವುದು ತಾನೇ ಅಸಾಧ್ಯ ? ತಮ್ಮ ತಪಃಶಕ್ತಿಯಿಂದ ಬೇಕಾದ್ದನ್ನು ಪಡೆಯಬಹುದಲ್ಲವೆ!''.

''ಅದೇನೋ ನಿಜ. ಆದರೆ ಈ ವಿಷಯದಲ್ಲಿ ನಾನು ಬಹು ಜಿಪುಣ. ನಾನು ಕಷ್ಟಪಟ್ಟು ಗಳಿಸಿದ ತಪಸ್ಸಿನ ಪುಣ್ಯವನ್ನು ಇಂಥ ವಿಷಯ ಸುಖಗಳಿಗಾಗಿ ವೆಚ್ಚಮಾಡಲಾರೆ. ಆದ್ದರಿಂದ ನನ್ನ ತಪಸ್ಸು ಹಾಳಾಗದೆ ಬೇರೆ ಯಾವುದಾದರೂ ಮಾರ್ಗವನ್ನು ಹೇಳು''.

''ಪ್ರಾಣೇಶ್ವರ, ನಾನು ತಮಗೆ ಹೇಳಲು ಎಷ್ಟು ಮಾತ್ರಕ್ಕೂ ಸಮರ್ಥಳಲ್ಲ. ನನ್ನ ಋತುಕಾಲವಂತೂ ಸನ್ನಿಹಿತವಾಗಿದೆ. ನನ್ನ ಮನಸ್ಸಿನಲ್ಲಿದ್ದ ಬಯಕೆಯನ್ನಂತೂ ತಮ್ಮೆದುರಿಗೆ ಇಟ್ಟಿದ್ದೇನೆ. ತಮ್ಮ ತಪಸ್ಸಿನ ಫಲ ಪುಣ್ಯವನ್ನು ಈ ಕ್ಷುದ್ರ ವಿಷಯ ಸುಖಕ್ಕಾಗಿ ಬಳಸಿಕೊಳ್ಳಲು ನನಗೂ ಇಷ್ಟವಿಲ್ಲ. ಅದರಿಂದ ಭಗವಂತನ ಪ್ರಸಾದದ ಹೊರತು ಬೇರೆ ಏನನ್ನೂ ಬಯಸಕೂಡದೆಂದೇ ನನ್ನ ಅಭಿಮತ. ಆದ್ದರಿಂದ ತಮ್ಮ ಧರ್ಮ ಪುಣ್ಯಗಳ ಹ್ರಾಸವಾಗದಂತೆ ನನ್ನ ಮನೋರಥಗಳನ್ನು ಪೂರ್ಣ ಮಾಡಲಿಕ್ಕೆ ಏನಾದರೂ ಬೇರೆ ಉಪಾಯವಿದ್ದರೆ ತಾವೇ ಪರ್ಯಾಲೋಕಿಸಬೇಕು'' ಎಂದು ಭಿನ್ನವಿಸಿದಳು.

''ಭದ್ರೆ, ಹಾಗಾದರೆ ನಾನು ಬೇರೆ ಎಲ್ಲಿಂದಲಾದರೂ ಹಣವನ್ನು ತರುತ್ತೇನೆ. ನೀನೇನೂ ಯೋಚಿಸಬೇಡ'' ಎಂದು ಹೇಳಿ ಅವರು ಅಲ್ಲಿಂದ ಹೊರಟರು.

ಅಗಸ್ತ್ಯರು ತಮ್ಮ ಆಶ್ರಮದಿಂದ ಯಾರ ಹತ್ತಿರವಾದರೂ ಹಣವನ್ನು ಭಿಕ್ಷೆ ಬೇಡಿ ತಂದು ಲೋಪಾಮುದ್ರೆಯ ಅಭೀಷ್ಟಗಳನ್ನೆಲ್ಲ ನೆರವೇರಿಸಬೇಕೆಂದು ನಿರ್ಧರಿಸಿ ನಡೆದರು. ಯಾರ ಹತ್ತಿರ ಹೋಗಬೇಕು! ನಾನು ಕೇಳಿದ ಕೂಡಲೇ ಇಷ್ಟು ಹಣವನ್ನು

ಕೊಡಬಲ್ಲ ಸಿರಿವಂತನೂ ಉದಾರಿಯೂ ಧಾರ್ಮಿಕನೂ ಆದ ರಾಜನಾರು ಎಂದು ಆಲೋಚಿಸುತ್ತ ಅವರು ದಾರಿ ತುಳಿಯಹತ್ತಿದರು.

ಆ ಕಾಲದಲ್ಲಿ ಶ್ರುತರ್ವಾ ಎಂಬ ರಾಜರ್ಷಿಯು ಭಾವುಕನಾಗಿದ್ದ. ಅವನು ಸ್ವತಃ ವೇದಪಾರಂಗತನಾದುದರಿಂದ ಇಂಥ ವೇದ ವೇದಾಂತ ವಿದ್ವಾಂಸರಾದ ವಿಪ್ರರ್ಷಿಗಳಿಗೆ ಬಹು ಮರ್ಯಾದೆ ಮಾಡುತ್ತಿದ್ದನು.

ಆದುದರಿಂದ ಅಗಸ್ತ್ಯರು ನೇರವಾಗಿ ಶ್ರುತರ್ವಾನ ಆಸ್ಥಾನಕ್ಕೆ ದಯಮಾಡಿಸಿದರು.

ಅಗಸ್ತ್ಯರಂಥ ಬ್ರಹ್ಮಜ್ಞಾನಿಗಳು ತಾವಾಗಿ ನಡೆದುಕೊಂಡು ತನ್ನ ಮನೆಯವರೆಗೆ ಬಂದದ್ದನ್ನು ಕಂಡು ಮಹಾರಾಜನಿಗೆ ಅತ್ಯಂತ ಉಪಕಾರವೆನಿಸಿ ಆನಂದವಾಗಿ ಅವನು ಎದ್ದು ಅವರನ್ನು ಅತ್ಯಂತ ಆದರದಿಂದ ಸ್ವಾಗತಿಸಿದ. ಅರ್ಘ್ಯಪಾದ್ಯಗಳಿಂದ ಪೂಜಿಸಿದ. ಉಚ್ಚ ಆಸನದ ಮೇಲೆ ಕುಳ್ಳಿರಿಸಿದ. ಅವರ ಎದುರು ಕೈಮುಗಿದು ನಿಂತು ಕೇಳಿದ. ''ಭಗವನ್, ಪೂಜ್ಯಪಾದರು ಇತ್ತ ಚಿತ್ತೈಸಿದ್ದು ನನ್ನ ಪೂರ್ವಜನ್ಮದ ಪುಣ್ಯ. ಏನಾದರೂ ಸೇವೆ ಇದ್ದರೆ ಅಪ್ಪಣೆಯಾಗಬೇಕು'' ಎಂದು.

ಅದಕ್ಕೆ ಅಗಸ್ತ್ಯರು ತಾವು ಬಂದ ಉದ್ದೇಶವನ್ನು ತಿಳಿಸಿ ''ನನಗೆ ಇಷ್ಟು ಹಣ ಬೇಕಾಗಿದೆ. ನಿನ್ನ ಎಲ್ಲ ದಾನ ಧರ್ಮ ಪ್ರಜಾಪಾಲನ ಪೋಷಣೆಗಳಿಗಾಗಿ ಮಿಕ್ಕ ನಿನ್ನಲ್ಲಿ ಏನಾದರೂ ಹಣವಿದ್ದರೆ ಮಾತ್ರ ನನಗೆ ಕೊಡು ಯಾರನ್ನೂ ಹಿಂಸೆ ಮಾಡಿ ತೆಗೆದುಕೊಟ್ಟ ಹಣ ನನಗೆ ಬೇಡ. ಹೆಚ್ಚಿಗೆ ಇದ್ದರೆ ಮಾತ್ರ ಕೊಡು'' ಎಂದರು.

ಆದರೆ ದುರ್ದೈವದಿಂದ ಉದಾರನಾದ ಆ ರಾಜನ ಭಂಡಾರದಲ್ಲಿ ಹಣ ಮಿಕ್ಕುವದೇ ಇರಲಿಲ್ಲ. ಬಂದದ್ದನ್ನೆಲ್ಲ ಪ್ರಜೆಗಳಿಗಾಗಿ, ಧರ್ಮಕಾರ್ಯಗಳಿಗಾಗಿ ಅವನು ವೆಚ್ಚ ಮಾಡಿಯೇ ಬಿಡುತ್ತಲಿದ್ದ. ಆಯವ್ಯಯ ಎರಡೂ ಸರಿಯಾಗಿಯೇ ಇದ್ದವು.

ಅದನ್ನೆಲ್ಲ ಕಂಡು ಅಗಸ್ತ್ಯರು ರಾಜ್ಯದ ಕೋಶಾಧಿಕಾರಿಯನ್ನು ಕರೆದು ಕೇಳಿ ಲೆಕ್ಕ ನೋಡಿ 'ರಾಜನ್ ನಿನ್ನಲ್ಲಿ ಹೆಚ್ಚಿನ ಹಣವಿಲ್ಲ. ನಾನು ನಿನ್ನಿಂದ ಏನೂ ತೆಗೆದುಕೊಳ್ಳಲಾರೆ' ಎಂದರು. ಅದಕ್ಕೆ ಶ್ರುತರ್ವಾನು ಖಿನ್ನನಾಗಿ ''ಸ್ವಾಮಿ, ನನ್ನ ಈ

ವ್ಯಯ ಭಾಗದಲ್ಲಿಯೇ ನಾನು ಕೆಲವನ್ನು ಕಡಿಮೆಮಾಡಿಕೊಳ್ಳುತ್ತೇವೆ. ತಾವು ಬೇಕಾದಷ್ಟು ತೆಗೆದುಕೊಳ್ಳಿರಿ'' ಎಂದು ಬಿನ್ನವಿಸಿದರು.

ಅದಕ್ಕೆ ಅಗಸ್ತ್ಯರು ''ಮಹೀಪಾಲ, ನೀನು ನನಗೆ ಬರುವ ಆದಾಯವನ್ನೆಲ್ಲ ಒಳ್ಳೇ ಪುಣ್ಯ ಕಾರ್ಯಕ್ಕಾಗಿಯೇ ಖರ್ಚು ಮಾಡುತ್ತಲಿರುವಿ. ನಾನು ಈಗ ಅದರಲ್ಲಿಂದ ಹಣ ತೆಗೆದರೆ ಆ ಪುಣ್ಯಕಾರ್ಯವೆಲ್ಲ ನಿಂತು ನನಗೆ ಪಾಪ ತಟ್ಟುತ್ತದೆ. ಬೇರೆ ಕಾರ್ಯಗಳಿಂದ ತೆಗೆದರೆ ಜನರಿಗೆ ಅದರಿಂದಾಗಬೇಕಾದ ಪ್ರಯೋಜನವಾಗದೆ ನಾನು ಪ್ರಜಾಪೀಡೆ ಕೊಟ್ಟಂತೆ ಆಗುತ್ತದೆ. ಆದುದರಿಂದ ನಿನ್ನ ಹಣ ಬೇಡ. ಮತ್ತೆ ಬೇರೆ ಯಾವನಾದರೂ ಹಣವಂತ ಗುಣವಂತ ಉದಾರನಾದ ರಾಜನ ಹತ್ತಿರ ಹೋಗೋಣ'' ಎಂದಂದು ಅಲ್ಲಿಂದ ಎದ್ದು ಬಿಟ್ಟರು.

ಶ್ರುತರ್ವಾನೂ ಅವರೊಟ್ಟಿಗೆ ನಡೆದ. ಇಬ್ಬರೂ ಬ್ರಧ್ನಶ್ವ ಎಂಬ ಧರ್ಮಾತ್ಮನಾದ ರಾಜರ್ಷಿಯ ಬಳಿಗೆ ಬಂದರು. ಅವನಲ್ಲಿಯಾದರೂ ಆಯವ್ಯಯ ಸಮವೇ ಇದ್ದು ಹಣ ಮೀರುವಂತೆ ಇರಲಿಲ್ಲ. ಅಲ್ಲಿಂದ ಬ್ರಧ್ನಶ್ವ, ಶ್ರುತರ್ವಾರಿಂದ ಒಡಗೂಡಿ ಆ ನಾಡಿನಲ್ಲಿಯೇ ಅತ್ಯಂತ ಸಿರಿವಂತನಾದ ಪುರುಕುತ್ಸನ ಮಗ ತ್ರಸದಸ್ಯು ಮಹಾರಾಜನ ಹತ್ತಿರ ಬಂದರು. ಅಲ್ಲಿಯೂ ಅದೇ ಹಾಡಾಯಿತು. ಅವನೂ ಎಷ್ಟು ಬರುತ್ತದೆಯೋ ಅಷ್ಟನ್ನೆಲ್ಲ ತನಗಾಗಿ ಏನೂ ಇಟ್ಟುಕೊಳ್ಳದೇ ಎಲ್ಲವನ್ನೂ ಉದಾರ ಮನಸ್ಸಿನಿಂದ ಧರ್ಮಕಾರ್ಯಕ್ಕಾಗಿ ವೆಚ್ಚ ಮಾಡಿ ಬಿಡುತ್ತಿದ್ದನು.

ಆಗ ಆ ಮೂವರೂ ರಾಜರ್ಷಿಗಳೂ ಮತ್ತು ಬ್ರಹ್ಮರ್ಷಿ ಅಗಸ್ತ್ಯರೂ ಕೂಡಿ ವಿಚಾರ ಮಾಡಹತ್ತಿದರು. ಇನ್ನೂ ಬೇರೆ ರಾಜರು ಬೇಕಾದಷ್ಟಿದ್ದು ಅಗಸ್ತ್ಯರು ಬೇಡಿದ್ದರೆ ಯಾರೂ ಇಲ್ಲವೆನ್ನುತ್ತಿರಲಿಲ್ಲ. ಆದರೆ ಪ್ರಜರನ್ನು ಪೀಡಿಸಿ ಆ ರಾಜರು ದುಡ್ಡು ಕೊಡುತ್ತಿದ್ದರು. ಅದರಿಂದ ಜನರಿಗೆ ಹಿಂಸೆಯಾಗುವದರಿಂದ ಬ್ರಹ್ಮರ್ಷಿಗಳು ಅದನ್ನು ಸ್ವೀಕರಿಸಲು ಸಿದ್ಧರಾಗಲಿಲ್ಲ. ಧಾರ್ಮಿಕ ರಾಜರಲ್ಲಿಯಂತೂ ದುಡ್ಡು ಸಿಗುತ್ತಿರಲಿಲ್ಲ. ಹೀಗಾಗಿ ಅಗಸ್ತ್ಯರಿಗೆ ಬಯಸಿದಷ್ಟು ದ್ರವ್ಯವು ದೊರಕುವದೇ ದುಸ್ತರವಾಯಿತು. ಆಗ ಆ ರಾಜರಿಬ್ಬರಿಗೂ ಒಂದು ವಿಚಾರ ಹೊಳೆಯಿತು.

ಆ ಕಾಲದಲ್ಲಿ ಇಲ್ವಲ ಎಂಬ ದೈತ್ಯನಲ್ಲಿ ಬಹಳಷ್ಟು ಹಣವಿದ್ದಿತು. ಅವನನ್ನು ಆಕ್ರಮಿಸಿ ಯಾಚಿಸಿ ಅವನಿಂದ ಹಣ ಪಡೆಯಬೇಕೆಂದು ಅವರು ಯೋಚಿಸಿ ಅಗಸ್ತ್ಯರಿಗೆ ಸೂಚನೆ ಮಾಡಿದರು.

ಅಗಸ್ತ್ಯರಿಗೂ ಆ ಯೋಚನೆಯು ಸರಿ ಕಂಡಿತು.

ವಾತಾಪಿ ಇಲ್ವಲ ಎಂಬ ಇಬ್ಬರು ದಾನವ ಸಹೋದರರಿದ್ದರು. ಆ ದುಷ್ಟರು ಜನರನ್ನು ಕೊಲ್ಲುವ ಹೊಸ ತಂತ್ರವನ್ನೇ ಹೂಡಿದ್ದರು. ವಾತಾಪಿಯು ಅತಿಥಿಗಳು ಬಂದ ಕೂಡಲೇ ಮಾಯೆಯಿಂದ ಮೇಷ (ಕುರಿ) ವಾಗಿ ನಿಲ್ಲುತ್ತಿದ್ದನು. ಇಲ್ವಲನು ಆ ಕುರಿಯ ಮಾಂಸವನ್ನೇ ಹಾಕಿ ಅಡಿಗೆ ಮಾಡಿಸಿ ಬಂದ ಅತಿಥಿಗಳಿಗೆ ಬಿಡಿಸಿ ಬಿಡುತ್ತಿದ್ದನು. ಏನೂ ಗೊತ್ತಾಗದ ಅತಿಥಿಗಳು ಆ ಅಡಿಗೆಯನ್ನು ಉಂಡ ಬಳಿಕ ಇಲ್ವಲನು ''ಏಹಿ ವಾತಾಪೇ!'' 'ವಾತಾಪಿಯೇ ಎದ್ದು ಬಾ' ಎಂದು ಕೂಗುತ್ತಿದ್ದನು. ಆಗ ವಾತಾಪಿಯು ಊಟ ಮಾಡಿದ ಅತಿಥಿಗಳ ಹೊಟ್ಟೆ ಹರಿದು ಹೊರಗೆ ಬರುತ್ತಿದ್ದನು. ಆ ಅತಿಥಿಗಳು ಅಲ್ಲಿಯೇ ಸತ್ತು ಬೀಳುತ್ತಿದ್ದರು. ಈ ಬ್ರಹ್ಮಹತ್ಯಾ ಕಾರ್ಯಕ್ರಮವನ್ನು ಅವರಿಬ್ಬರೂ ಈಗ ಎಷ್ಟೋ ವರ್ಷಗಳಿಂದ ನಡೆಸಿಕೊಂಡು ಬಂದಿದ್ದರು.

ಇಂದಾದರೂ ಇಲ್ವಲನು ಆ ಮೂರು ರಾಜರಿಗೂ ಮಹರ್ಷಿ ಅಗಸ್ತ್ಯರಿಗೂ ಒಳ್ಳೆ ಸಂಭ್ರಮದ ಸ್ವಾಗತವನ್ನು ನೀಡಿದನು. ಅತ್ಯಂತ ಆದರೋಪಚಾರ ಮಾಡಿದನು. ಮತ್ತು ಇಂದು ನಮ್ಮಲ್ಲಿಯೇ ತಾವು ನಾಲ್ಕೂ ಜನರೂ ಭೋಜನ ಮಾಡಬೇಕೆಂದು ಬಿನ್ನವಿಸಿದನು. ಅದಕ್ಕೆ ಅವರೆಲ್ಲರೂ ಒಪ್ಪಿ ಆಗಲಿ ಎಂದು ಹೇಳಿದರು.

ಅನಂತರ ದಾನವ ಸಹೋದರರು ವಾತಾಪಿ ಇಲ್ವಲ ಇಬ್ಬರೂ ಏನೇನೋ ತಮ್ಮ ತಮ್ಮಲ್ಲಿ ಸಂಕೇತ ಮಾಡಿದರು. ಆಗ ಇಲ್ವಲನು ''ವಾತಾಪಿಯೇ ಇಂದಿನ ಅಡಿಗೆಗೆ ಒಳ್ಳೆ ಭಕ್ಷ್ಯ. ಪದಾರ್ಥಗಳನ್ನು ತಯಾರು ಮಾಡಿಸು ಎಂದು ಹೇಳಿದನು. ಆಗಲಿ ಎಂದು ವಾತಾಪಿಯು ಎಂದಿನಂತೆ ಕುರಿಯಾಗಿ ನಿಂತನು. ಅವನ ಮಾಂಸದಿಂದಲೇ ಅಡಿಗೆ ಸಿದ್ಧವಾಯಿತು.

ಅದನ್ನು ತಿಳಿದ ಬ್ರದ್ನಶ್ವ, ತ್ರಸದಸ್ಯು ಮತ್ತು ಶ್ರುತರ್ವಾರಿಗೆ ಎದೆಯೊಡೆದು ಹೋಯಿತು. ತಾವು ಇಂದು ಉಂಡರೆ ತಮ್ಮ ಹೊಟ್ಟೆ ಹರಿದು ಸಾಯುತ್ತೇವೆ. ಉಣ್ಣದಿದ್ದರೆ ನಮ್ಮನ್ನು ಈಗಲೇ ಈ ದೈತ್ಯನು ಕೊಂದುಬಿಡುತ್ತಾನೆ. ಏನೂ ಮಾಡುವದು ತಿಳಿಯದೇ ಅವರು ಅಗಸ್ತ್ಯರಿಗೇ ಶರಣು ಬಂದರು. ಅದಕ್ಕೆ ಅವರು "ನೀವೇನೂ ಅಂಜಬೇಡಿರಿ. ಆ ದುಷ್ಟನಾದ ವಾತಾಪಿಯನ್ನು ದಮನ ಮಾಡಲಿಕ್ಕೆ ಇಂದು ನನಗೆ ಒಳ್ಳೆ ಅವಕಾಶ ದೊರಕಿತು. ನೀವೇನು ಯೋಚನೆ ಮಾಡಬೇಡಿರಿ. ಹೇಗೂ ಅವನು ಮೊದಲು ನನಗೆ ಊಟಕ್ಕೆ ಬಡಿಸಿ ಅನಂತರ ಕ್ಷತ್ರಿಯರಾದ ನಿಮಗೆ ಭೋಜನಕ್ಕೆ ಹಾಕುತ್ತಾನೆ. ನನ್ನ ಊಟವಾದ ಕೂಡಲೇ ಆ ವಾತಾಪಿಯನ್ನು ನಾನು ಮುಗಿಸಿ ಬಿಡುತ್ತೇನೆ" ಎಂದು ಆಶ್ವಾಸನೆಯಿತ್ತರು.

ಇತ್ತ ವಾತಾಪಿಯ ಅಡಿಗೆಯಾದ ಬಳಿಕ ಸ್ನಾನಾಹ್ನಿಕ ದೇವತಾರ್ಚನೆಗಳನ್ನು ಮುಗಿಸಿ ಕುಳಿತ ಅಗಸ್ತ್ಯರಿಗೆ ಭೋಜನಕ್ಕೆ ಬರಲಿಕ್ಕೆ ಬಿನ್ನವಿಸಿದನು. ಆಗ ಅಗಸ್ತ್ಯರು ಎಲೆಯ ಮೇಲೆ ಬಂದು ಕುಳಿತು ಮಾಡಿದ ಅಡಿಗೆಯನ್ನೆಲ್ಲ ಮತ್ತೆ ಮತ್ತೆ ಬೇಡಿ ಹಾಕಿಸಿಕೊಂಡು ಎಲ್ಲವನ್ನೂ ತಿಂದು ಮುಗಿಸಿಬಿಟ್ಟರು. "ಅಗಸ್ತ್ಯರಿಗೆ ಇದೆಲ್ಲ ಮೊದಲೇ ಗೊತ್ತಾಗಿ ಅವರು ಆ ಅಡಿಗೆಯನ್ನು ಉಣ್ಣಲಿಕ್ಕೆಲ್ಲಿ ಒಲ್ಲೆನೆನ್ನುವರೋ" ಎಂದು ಇಲ್ವಲನಿಗೆ ಅನುಮಾನವಿದ್ದಿತು. ಅಗಸ್ತ್ಯರು ಮಾಡಿದ ಅಡಿಗೆಯನ್ನೆಲ್ಲ ತಾವಾಗಿ ಬೇಡಿ ಹಾಕಿಸಿಕೊಂಡು ಉಂಡದ್ದನ್ನು ನೋಡಿ ಆ ದುಷ್ಟ ದೈತ್ಯನು 'ಇನ್ನು ತನ್ನ ಕೆಲಸವಾಯಿತು ಇಂದು ದೊಡ್ಡ ಅಸಾಮಿಯನ್ನೇ ತಾವು ಕೊಂದಂತಾಯಿತು' ಎಂದು ಮನಸ್ಸಿನಲ್ಲಿ ಹಿಗ್ಗಿ ಹೀರೇಕಾಯಿಯಾಗಿದ್ದನು.

ಅಗಸ್ತ್ಯರಾದರೂ ಹೊಟ್ಟೆತುಂಬ ಊಟ ಮಾಡಿ 'ಅಽಽಬ್ಬ' ಎಂದು ತೇಗಿದರು.

ಆಗ ಆ ದೈತ್ಯನಾದರೂ ಅಟ್ಟಹಾಸ ಮಾಡುತ್ತ ತನ್ನ ಕ್ರಮದಂತೆ "ಏಹಿ ವಾತಾಪೇ ನಿಷ್ಕ್ರಮಸ್ವ ಉದರಾತ್" 'ವಾತಾಪಿಯೇ ಏಳು ಉದರಸೀಳಿಕೊಂಡು ಬಾ' ಎಂದು ಕೂಗಿದನು.

ಅದೇ ವೇಳೆಯಲ್ಲಿ ಅಗಸ್ತ್ಯರು ಗೋವಿಂದ ಗೋವಿಂದ ಎನ್ನುತ್ತ ತಮ್ಮ ಹೊಟ್ಟೆಯ ಮೇಲೆ ಕೈಯಾಡಿಸಿ 'ಜೀರ್ಣೋಭವ ವಾತಾಪೇ' 'ಜೀರ್ಣೋಭವ ವಾತಾಪೇ'

ಎಂದಂದು ಕಂಟಮಟ ಉಂಡು ಭಾರವಾದ ತಮ್ಮ ತೋರಹೊಟ್ಟೆಯನ್ನು ಅಂಗೈಯಿಂದ ಸವರಾಡಿದರು.

ಆಗ ದೈತ್ಯನು ತಾನು ಒದರಿ ಕೂಗಿ ಕರೆದರೂ ವಾತಾಪಿಯು ಅಗಸ್ತ್ಯರ ಹೊಟ್ಟೆ ಹರಿದು ಹೊರಬಾರದ್ದನ್ನು ಕಂಡು ಗಾಬರಿಯಾಗಿ ''ಕುಕ್ಷಿಂ ಭಿತ್ವಾ ಏಹಿ ವಾತಾಪೇ ನಿಷ್ಕ್ರಮಸ್ವ ವಾತಾಪೇ'' ಎಂದು ಕೆಟ್ಟದನಿಯಿಂದ ಚೀರತೊಡಗಿದನು.

ಆಗ ಅಗಸ್ತ್ಯರು ನಕ್ಕು ''ಇನ್ನೆಲ್ಲಿಯ ವಾತಾಪಿ! ನನ್ನ ಹೊಟ್ಟೆಯಲ್ಲಿ ಜೀರ್ಣವಾಗಿ ಹೋಗಿದ್ದಾನೆ'' ಎಂದು ಹೇಳಿ ದೀರ್ಘವಾದ ಅಪಾನ ವಾಯುವನ್ನು ಬಿಟ್ಟರು. ಅಗಸ್ತ್ಯರು ಅತ್ಯದ್ಭುತವಾದ ತಮ್ಮ ಜಠರಾಗ್ನಿಯಿಂದ ಆ ದುಷ್ಟದೈತ್ಯನನ್ನು ಸಂಪೂರ್ಣ ಜೀರ್ಣಮಾಡಿ ಗಾಳಿಮಾಡಿ ಹಾರಿಸಿಬಿಟ್ಟರು. ಮೇಘ ಗರ್ಜನೆಯಂತೆ ಅದರ ಸದ್ದಾಯಿತು. ಅದನ್ನು ನೋಡಿ ಇಲ್ವಲನು ಗಾಬರಿಯಾಗಿ ಈ ಮುನಿಯು ಸಾಮಾನ್ಯ ವ್ಯಕ್ತಿಯಲ್ಲ ಎಂದು ತಿಳಿದು ಹೆದರಿ ಹೌಹಾರಿ ಕೈಮುಗಿದು ನಿಂತುಕೊಂಡನು. ಅವನ ಮಂತ್ರಿ ಪರಿವಾರದವರೆಲ್ಲರೂ ಅಗಸ್ತ್ಯರ ಎದುರು ಕೈಕಟ್ಟಿಕೊಂಡುನಿಂತರು.

ಆಗ ದೈತ್ಯರಾಜನು ವಿನಯದಿಂದ ಬಾಗಿ ಆ ಮಹಾ ಮಹರ್ಷಿಗಳಿಗೆ ಹಣೆ ಮಣಿದು ''ಬ್ರಹ್ಮರ್ಷಿಗಳೇ, ತಾವು ಇಲ್ಲಿಗೆ ದಯಮಾಡಿಸಿದ್ದೇಕೆ? ನನ್ನಿಂದ ಏನಾದರೂ ಕಾರ್ಯವಾಗಬೇಕಿದ್ದರೆ ಅಪ್ಪಣೆಯಾಗಲಿ. ತಮ್ಮ ಆಜ್ಞೆಯನ್ನು ಶಿರಸಾ ಮಾನ್ಯ ಮಾಡಿ ಪಾಲನ ಮಾಡಲು ನಾನು ಸಿದ್ಧನಿದ್ದೇನೆ'' ಎಂದು ಬಿನ್ನಹ ಮಾಡಿಕೊಂಡನು.

ಆಗ ಅಗಸ್ತ್ಯರು ತಾನಾಗಿ ದಾರಿಗೆ ಬಂದ ಆ ದೈತ್ಯನಿಗೆ ''ರಾಕ್ಷಸೇಶ್ವರ, ನನಗೀಗ ದುಡ್ಡು ಬೇಕಾಗಿದೆ. ಅದಕ್ಕಾಗಿ ನಿನ್ನ ಕಡೆಗೆ ಈ ರಾಜರನ್ನು ಕರೆದುಕೊಂಡು ಬಂದಿದ್ದೇನೆ. ಅದಕ್ಕಾಗಿ ನೀನು ಬೇರೆ ಜನರನ್ನು ಹಿಂಸಿಸುವುದು ಬೇಡ. ಈಗ ನಿನ್ನಲ್ಲಿದ್ದುದನ್ನೇ ಕೊಟ್ಟುಬಿಡು. ನಿನ್ನಲ್ಲಿ ಈಗಾಗಲೇ ಬೇಕಾದಷ್ಟು ದ್ರವ್ಯವಿದೆಯೆಂದು ಕೇಳಿದ್ದೇನೆ'' ಎಂದು ಕೇಳಿದರು.

ಆದಕ್ಕೆ ಆ ಅಸುರನು ''ತಮಗೆ ಎಷ್ಟು ಬೇಕು ತಿಳಿಸಿದರೆ ನನಗೆ ಕೊಡಲಿಕ್ಕೆ ಅನುಕೂಲ'' ಎಂದು ಹೇಳಿದ.

''ದೈತ್ಯರ ದೊರೆಯೆ, ಈಗ ನನ್ನ ಜೊತೆಗೆ ಬಂದ ತ್ರಸದಸ್ಯು, ಬ್ರಧ್ನಶ್ವ, ಹಾಗೂ ಶ್ರುತರ್ವಾ ಈ ಮೂರು ರಾಜರಿಗೂ ಒಬ್ಬೊಬ್ಬರಿಗೆ ಹತ್ತು ಸಾವಿರ ಆಕಳುಗಳನ್ನೂ ಹತ್ತತ್ತು ಸಾವಿರ ಬಂಗಾರದ ನಾಣ್ಯಗಳನ್ನೂ ಕೊಡು. ನನ್ನ ಜೊತೆಗೆ ಬಂದವರನ್ನು ನಾನು ಬರಿಗೈಯಿಂದ ಕಳಿಸಲಾರೆ''.

''ಸ್ವಾಮಿ ಅವರದಿರಲಿ, ತಮಗೆ ಎಷ್ಟು ಬೇಕು!''

''ದಾನವ, ನನಗೆ ಹೆಚ್ಚಿಗೇನು ಹಣ ಬೇಕಿಲ್ಲ. ನನ್ನ ಹೆಂಡತಿಯು ಕೆಲವು ವಸ್ತುಗಳನ್ನು ಅಪೇಕ್ಷಿಸಿದ್ದಾಳೆ. ಅವನಲ್ಲೆ ಸಿದ್ಧಪಡಿಸಲಿಕ್ಕೆ ನನಗೆ ಲೆಕ್ಕ ಹಾಕಲಾಗಿ ಇಪ್ಪತ್ತು ಸಾವಿರ ಬಂಗಾರ ಗಟ್ಟಿಗಳು, ಇಪ್ಪತ್ತು ಸಾವಿರ ಆಕಳುಗಳು, ಮತ್ತು ಒಂದು ಬಂಗಾರದ ರಥ, ಎರಡು ಉತ್ತಮ ಮನೋವೇಗದಿಂದ ಓಡುವ ಕುದುರೆಗಳು ಇಷ್ಟಾದರೆ ಸಾಕು'' ಎಂದು ಹೇಳಿದರು.

ಅದನ್ನು ಕೇಳಿ ಕಂಜೂಷನಾದ ಆ ದೈತ್ಯನು ಕಂಗೆಟ್ಟು ಹೋದನು. ಅಗಸ್ತ್ಯರ ಅದ್ಭುತವಾದ ಶಕ್ತಿಯನ್ನು ಕಂಡು ಅವನ ಜಂಘಾಬಲವೇ ಉಡುಗಿ ಹೋದಂತಾಗಿತ್ತು. ತನ್ನ ತಮ್ಮನ ದುರವಸ್ಥೆಯನ್ನು ಕಂಡು ಅವನಿಗೆ ಈ ಮಹರ್ಷಿಯು ತನ್ನನ್ನೂ ಏನಾದರೂ ಮಾಡಿ ಕೊಲ್ಲದೆ ಮನೆ ಬಿಟ್ಟು ಹೋದರೇ ಸಾಕಾಗಿತ್ತು. ತಾನು ಬದುಕಿದ್ದರೆ ಇದರ ಹತ್ತು ಪಟ್ಟು ಹಣವನ್ನು ಸಂಪಾದಿಸಬಲ್ಲೆ ಎಂಬ ಆತ್ಮವಿಶ್ವಾಸವಿದ್ದಿತು. ಅದಕ್ಕಾಗಿ ಅವನು ಅವರ ಒಂದೇ ಮಾತಿಗೆ ಅಗಸ್ತ್ಯರು ಹೇಳಿದ್ದಕ್ಕಿಂತ ಹೆಚ್ಚಿಗೆ ಹಣವನ್ನು ಅವರ ಮುಂದೆ ತಂದಿರಿಸಿ ಕೈಮುಗಿದು ಕೃಷ್ಣಾರ್ಪಣವೆಂದನು. ಆ ಮೂವರು ರಾಜರಿಗೂ ಋಷಿಗಳು ಹೇಳಿದಷ್ಟು ಕೊಟ್ಟನು. ಆ ರಾಜರ್ಷಿಗಳೂ ದೊಡ್ಡವರ ಜೊತೆಗೆ ತಾವು ಬಂದಿದ್ದು ಸಾರ್ಥಕವಾಯಿತೆಂದು ಹತ್ತತ್ತು ಸಾವಿರ ಹಸುಗಳು, ಇಪ್ಪತ್ತು ಸಾವಿರ ಹೊನ್ನು, ಹಣ ತೆಗೆದುಕೊಂಡು ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು. ಮತ್ತು ತಮ್ಮ ಮನೆಯಿಂದ ಲೋಪಾಮುದ್ರೆಯು ಬಯಸಿದ ದಿವ್ಯಮಂದಿರವನ್ನು ಕಟ್ಟಲು ಬೇಕಾದ ಸಾಮಾನು ಆಳುಮಕ್ಕಳನ್ನು

ಕರೆದುಕೊಂಡು ಅಗಸ್ತ್ಯಾಶ್ರಮಕ್ಕೆ ಬಂದರು. ಇಲ್ವಲನು ಅಗಸ್ತ್ಯರ ದ್ರವ್ಯವನ್ನೆಲ್ಲ ಬಂಗಾರದ ರಥದಲ್ಲಿ ಇರಿಸಿ ವರಾಹ, ಸುರಾವ ಎಂಬ ಗಾಳಿಯ ವೇಗದಿಂದ ಧಾವಿಸುವ ಕುದುರೆಗಳನ್ನು ಹೂಡಿ ಅಗಸ್ತ್ಯರನ್ನು ಅದರಲ್ಲಿ ಕೂಡಿಸಿ ಕಳಿಸಿಕೊಟ್ಟು 'ಅಪ್ಪ! ಬದುಕಿದೆ' ಎಂದು ಉಸುರ್ಗರೆದ.

ಇತ್ತ ಅಗಸ್ತ್ಯರು ಆ ಸುವರ್ಣ ರಥದಲ್ಲಿ ಕುಳಿತು ಆಶ್ರಮಕ್ಕೆ ಬಂದರು. ತ್ರಸದಸ್ಯು ಮೊದಲಾದ ಮಹಾರಾಜರು ಬಂದು ಲೋಪಾಮುದ್ರೆಯ ಅಪೇಕ್ಷೆಯಂತೆ ಬೇಗನೆ ಭವ್ಯವಾದ ಒಂದು ಅರಮನೆ, ಶೃಂಗಾರಿತವಾದ ಶಯ್ಯಾ ಮಂದಿರ, ಹಂಸತೂಲ ತಲ್ಪ, ದಾಸದಾಸೀ ವರ್ಗ, ಅನರ್ಘ್ಯವಾದ ಮುತ್ತು ರತ್ನದ ಆಭರಣಗಳು, ಋಷಿದಂಪತಿಗಳಿಗೆ ಒಪ್ಪುವ ದಿವ್ಯ ವಸ್ತ್ರಾಲಂಕಾರಗಳು ಉಪವನ, ದಾಸದಾಸಿಯರು, ವಿವಿಧ ಭಕ್ಷ್ಯ, ಭೋಜ್ಯ, ಲೇಹ್ಯ ಪೇಯಗಳು, ಅನೇಕ ಸುಗಂಧ ಪರಿಮಳ ದ್ರವ್ಯಗಳು ವೀಣಾವೇಣು ಮೃದಂಗಾದಿ ವಾದ್ಯಗಳು, ಇದಲ್ಲದೆ ಇನ್ನೂ ಅನೇಕಾನೇಕ ಭೋಗವಿಲಾಸ ಸಾಮಗ್ರಿಗಳನ್ನೆಲ್ಲ ಒದಗಿಸಿದರು.

ಈ ಎಲ್ಲ ಕೇಳೀ ವಿಲಾಸದ ಸುಖಸಾಧನ ಸಾಮಗ್ರಿಯನ್ನು ನೋಡಿ ಲೋಪಾಮುದ್ರೆಯ ಮನಸ್ಸು ಪ್ರಫುಲ್ಲಿತವಾಯಿತು. ಅವಳು ಅತ್ಯಂತ ಆನಂದದಿಂದ ಅಭ್ಯಂಗ ಸ್ನಾನ ಮಾಡಿ ವಸ್ತ್ರಾಭರಣಗಳನ್ನು ಇಟ್ಟುಕೊಂಡು ದಿವ್ಯ ಪೀತಾಂಬರವನ್ನು ಉಟ್ಟುಕೊಂಡು ಆ ದಿವ್ಯ ಪ್ರಸಾದದಲ್ಲಿ ಪತಿ ಅಗಸ್ತ್ಯರೊಡಗೂಡಿ ಮಂಗಲ ಕಲಶದೊಂದಿಗೆ ಪ್ರವೇಶಿಸಿದಳು.

ಅಲ್ಲಿ ರಾಜಭೋಗವೇ ಅವಳಿಗಾಗಿ ಕಾದಿತ್ತು. ದಾಸದಾಸಿಯರು ಕೈಕಟ್ಟಿಕೊಂಡು ಅವಳ ಸೇವೆಗೆ ಸಿದ್ಧರಾಗಿದ್ದರು. ಇಂದ್ರಭವನದಲ್ಲಿಯೇ ತಾನು ಬಂದಿದ್ದೇನೋ ಎನ್ನುವಂತಿತ್ತು ಅಲ್ಲಿಯ ಸುಖಸೌಕರ್ಯ ಸಿದ್ಧತೆ. ತನಗಾಗಿ ಇಷ್ಟೆಲ್ಲ ವಿಹಾರ ಸಾಮಗ್ರಿಗಳನ್ನು ತಮ್ಮ ತಪಶ್ಶಕ್ತಿಯನ್ನು ವ್ಯಯ ಮಾಡದೆ ಸಿದ್ಧಪಡಿಸಿದ ತನ್ನ ಪ್ರಿಯ ಪತಿಯ ವಿಷಯದಲ್ಲಿ ಅವಳ ಅನುರಾಗವು ಇಮ್ಮಡಿಸಿ ಅವಳು ಗೌರಿಯಂತೆ ಅಲಂಕೃತಳಾಗಿ ಅವರ ಸೇವೆಗೆ ಸಿದ್ಧಳಾದಳು. ಅವಳ ಬಹುದಿನ ಹೆಣ್ಣು ಹೃದಯದ ಬಯಕೆ ಹಣ್ಣಾಗಿ ಅಂದು ಫಲಿಸಿತ್ತು.

ರಸನಿಮಿಷಗಳಂತೆ ಅವರು ಕೆಲದಿನ ಮಾತ್ರ ಮನುಷ್ಯ ಭೋಗಗಳನ್ನು ಅನುಭವಿಸುತ್ತ ಅಲ್ಲಿ ವಾಸವಾಗಿದ್ದರು. ದಿನವೊಂದು ತರಹದ ವೇಷ ಭೂಷಣಗಳಿಂದ ಲೋಪಾಮುದ್ರೆಯು ಮಹರ್ಷಿಗಳನ್ನು ಆನಂದಪಡಿಸುತ್ತಲಿದ್ದಳು. ಅಗಸ್ತ್ಯರೂ ಕೂಡ ತಮ್ಮ ಪ್ರೇಯಸಿಯ ಸರ್ವವಿಲಾಸ ವಿಹಾರಗಳ ಬಯಕೆ ಬೇಡಿಕೆಗಳನ್ನೂ ತಕ್ಷಣ ಪೂರೈಯಿಸುತ್ತಿದ್ದರು.

ಋಷಿಗಳು ರಸಿಕರಾಗಿದ್ದರು. ಪರ್ಣಕುಟೀರ ಸ್ವರ್ಣಮಂದಿರವಾಯಿತ್ತು. ಯಾಗಭೂಮಿ ಭೋಗ ಭೂಮಿಯಾಗಿ ಪರಿವರ್ತನ ಹೊಂದಿತು. ಅವರ ಆಶ್ರಮದಿಂದ ವೇದಪಾಠ ಮಂತ್ರಘೋಷದ ಬದಲಾಗಿ ನೃತ್ಯಸಂಗೀತದ ಮಂಜುಘೋಷವು ಕೇಳಬರಹತ್ತಿತ್ತು. ಕೆಲದಿನಗಳ ಬಳಿಕ ಋಷಿಗಳ ಮನಸ್ಸು ತಣಿಯಿತು. ಲೋಪಾಮುದ್ರೆಯ ಹೃದಯ ಆನಂದದಿಂದ ಕುಣಿಯಿತು. ಆದರೆ ಅವರದು ಜಾತ್ಯಾಋಷಿ ಪ್ರಕೃತಿ. ಕೆಲದಿನಗಳಲ್ಲಿಯೇ ಅವರಿಗೆ ಅದರಲ್ಲಿ ಉಪರತಿ ಹುಟ್ಟಿತು. ಅದೆಲ್ಲವನ್ನೂ ಪರಿತ್ಯಾಗ ಮಾಡಿ ಮತ್ತೆ ತಮ್ಮ ಆಶ್ರಮಕ್ಕೆ ಬಂದು ತಮ್ಮ ತಾಪಸೀ ಜೀವನವನ್ನು ಪ್ರಾರಂಭಿಸಿದರು. ಆದರೆ ಅಷ್ಟರಲ್ಲಿ ಲೋಪಾಮುದ್ರೆಯು ಗರ್ಭಧಾರಣೆ ಮಾಡಿದ್ದಳು. ಶುಭಮುಹೂರ್ತದಲ್ಲಿ ಒಂದು ತೇಜಃಪುಂಜವಾದ ಮುತ್ತಿನಂಥ ಗಂಡು ಮಗುವನ್ನು ಹೆತ್ತಳು. ಲೋಪಾಮುದ್ರೆಯು ಬಹು ಪ್ರೀತಿಯಿಂದ ಆ ಮಗುವನ್ನು ಬೆಳೆಸಿ ದೊಡ್ಡದನ್ನಾಗಿ ಮಾಡಿದಳು.

ಅಗಸ್ತ್ಯರು ಆ ಮಗುವಿಗೆ ವೇದಶಾಸ್ತ್ರಗಳ ಪಾಠ ಹೇಳಿದರು. ಸಿಂಹ ಮಗು ಸಿಂಹವೇ ಸರಿ. ಅಗಸ್ತ್ಯರ ಮಗ ಅಗಸ್ತ್ಯರಂತೆಯೇ ವೇದಗಳ ಸಾಗರವನ್ನೇ ಕುಡಿದ ಯಜ್ಞಯಾಗದ ಶ್ರೌತಭಾಗದಲ್ಲಿ ಪರಿಣತನಾದ. ಆದುದರಿಂದ ಅವನಿಗೆ 'ಇದ್ಮವಾಹ' ಎಂದು ಹೆಸರಾಯಿತು. ಇಂಥ ವೇದವಿದ್ವಾನನಾದ ಪುತ್ರನನ್ನು ಪಡೆದು ಆ ಋಷಿದಂಪತಿಗಳಿಗೆ ತಾವು ಗೃಹಸ್ಥಧರ್ಮವನ್ನು ಅಂಗೀಕರಿಸಿದ್ದು ಸಾರ್ಥಕವೆನಿಸಿತು. ಅಗಸ್ತ್ಯರ ಪಿತೃಗಳೆಲ್ಲರೂ ಮೊಮ್ಮಗನ ಪುಣ್ಯದಿಂದ ನರಕದಿಂದ ಉದ್ಧೃತರಾಗಿ ದಿವ್ಯಲೋಕಗಳನ್ನು ಪಡೆದರು.

★ ★ ★ ★

# ಪುಲಸ್ತ್ಯರು

ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮದೇವರ ಕಿವಿಯಿಂದ ಪುಲಸ್ತ್ಯಋಷಿಯು ಜನಿಸಿದನು. ದಕ್ಷಪ್ರಜಾಪತಿಯ ಮಗಳಾದ ಪ್ರೀತಿಯನ್ನು ಮದುವೆಯಾಗಿ ದಾನಾಗ್ನಿ, ದೇವಬಾಹು, ಅತ್ರಿ, ಸದ್ವತೀ ಮುಂತಾದ ಮಕ್ಕಳನ್ನು ಪಡೆದನು. ದಕ್ಷನ ಯಜ್ಞದಲ್ಲಿ ಶಿವನ ಕೋಪಾಗ್ನಿಗೆ ತುತ್ತಾದ ಪುಲಸ್ತ್ಯರನ್ನು ವೈವಸ್ವತ ಮನ್ವಂತರದಲ್ಲಿ ಬ್ರಹ್ಮದೇವರು ಮರಳಿ ಹುಟ್ಟಿಸಿದರು. ಈ ಬಾರಿ ಕರ್ದಮ ಪ್ರಜಾಪತಿಯು ತನ್ನ ಮಗಳಾದ ಹವಿರ್ಭುವಾಳನ್ನು ಪುಲಸ್ತ್ಯರಿಗೆ ಧಾರೆಯೆರೆದು ಕೊಟ್ಟನು.

ಪುಲಸ್ತ್ಯ ಮುನಿಯು ಮೇರು ಪರ್ವತದಲ್ಲಿ ತೃಣಬಿಂದು ಸರೋವರದ ದಂಡೆಯ ಮೇಲೆ ಒಂದು ಆಶ್ರಮವನ್ನು ಕಟ್ಟಿಕೊಂಡು ತಪಸ್ಸನ್ನು ಮಾಡುತ್ತ ಕುಳಿತುಕೊಂಡಾಗ ಅವನ ಭವ್ಯಶರೀರದ ದಿವ್ಯಕಾಂತಿಯನ್ನು ಕಂಡು ಅಪ್ಸರೆಯರೂ ಕೂಡ ಮುಗ್ಧರಾಗಿ ನಿಲ್ಲುತ್ತಿದ್ದರು. ಮತ್ತು ಅವರು ಇವನ ಲಕ್ಷವನ್ನು ತಮ್ಮೆಡೆಗೆ ಸೆಳೆಯಲಿಕ್ಕಾಗಿ ಇವನ ಆಶ್ರಮದ ಮುಂದೆ ಬಂದು ಮಧುರ ಸಂಗೀತವನ್ನು ಹಾಡುತ್ತಿದ್ದರು. ತಮ್ಮ ಮೈಯನ್ನು ಬಳಕಿಸುತ್ತ ನೃತ್ಯಮಾಡುತ್ತಲಿದ್ದರು. ಅವರಿಂದ ವಿರಕ್ತನಾದ ಪುಲಸ್ತ್ಯನಿಗೆ ಏನೂ ವಿಕಾರವಾಗಲಿಲ್ಲ. ಆದರೆ ತಪಸ್ಸಿಗೆ ತೊಂದರೆ ಮಾಡಿದ್ದರಿಂದ ಅವನಿಗೆ ಕೋಪಬಂದು, 'ನನ್ನ ಈ ಆಶ್ರಮದಲ್ಲಿ ಕಾಲಿರಿಸ್ದ ಕನ್ನೆಯರ ಹೊಟ್ಟೆ ಉಬ್ಬಿ ಹೋಗಲಿ' ಎಂದು ಶಾಪವಿತ್ತನು.

ಅದನ್ನು ಕೇಳಿದ ಗಂಧರ್ವ ಕನ್ನೆಯರೆಲ್ಲರೂ ಗಾಬರಿ ಆಗ ಮುನಿಯ ಎಲೆಮನೆಯನ್ನು ಬಿಟ್ಟು ದೂರ ಚೆದರಿದರು. ಮುಂದೆ ಪುಲಸ್ತ್ಯರಿದ್ದ ತಾಣಕ್ಕೆ ಯಾವ ಕನ್ನೆಯರೂ ಮನ್ನೆಯರೂ ಬರುವ ಸಾಹಸಮಾಡುತ್ತಿದ್ದಿಲ್ಲ. ಇದರಿಂದ ಅವನ ತಪಸ್ಸು ನಿರಾತಂಕವಾಗಿ ನಡೆಯಲು ಅನುಕೂಲವಾಯಿತು.

ತೃಣಬಿಂದು ರಾಜನ ಮಗಳಾದ ಗೋದೇವಿಯು ಗೆಳತಿಯರೊಂದಿಗೆ ಒಡಗೂಡಿ ಒಮ್ಮೆ ವನವಿಹಾರಕ್ಕೆಂದು ಆ ಸರೋವರದ ತೀರಕ್ಕೆ ಬಂದು ಕುತೂಲಹದಿಂದ ಒಬ್ಬಳೇ ಪುಲಸ್ತ್ಯರ ಆಶ್ರಮದ ಅಂಗಳದಲ್ಲಿ ಕಾಲಿರಿಸಿದಳು.

ಪುಲಸ್ತ್ಯರು ವೇದಪಾರಾಯಣ ಮಾಡುತ್ತ ಕುಳಿತುಕೊಂಡಿದ್ದರು. ಅವರ ತೇಜೋ ಭಾಸುರವಾದ ಮುಖ ಮಂಡಲ ಹಾಗೂ ಮಧುರಕಂಠ ಮತ್ತು ದಿವ್ಯಕಾಂತಿಗಳನ್ನು ಕಂಡು ಗೋದೇವಿಗೆ ಏನೋ ಆಕರ್ಷಣೆಯೆನಿಸಿತು. ಅವಳು ಕಣ್ಣಿನ ಎವೆ ಪಿಳುಕಿಸದೆ ತುಸು ಹೊತ್ತು ಆ ತಪೋಧನರನ್ನು ನಿರುಕಿಸುತ್ತ ನಿಂತುಕೊಂಡಾಗ ಒಮ್ಮೆಲೆ ಅವಳ ಹೊಟ್ಟೆ ಊದಿಕೊಂಡಂತಾಗಿ ಭಾರವೆನಿಸಹತ್ತಿತು. ಗರ್ಭ ಭಾರದಿಂದ ತೇಕುತ್ತ ಅವಳು ಹೇಗೋ ಮನೆಗೆ ಬಂದು ತಂದೆಗೆ ಸಮಾಚಾರ ತಿಳಿಸಿದಾಗ ಅವನಿಗೆ ಚಿಂತೆಯಾಯಿತು. ಕೂಡಲೇ ತೃಣಬಿಂದು ಮಹಾರಾಜನು ತನ್ನ ಮಗಳನ್ನು ಕರೆದುಕೊಂಡು ಪುಲಸ್ತ್ಯರ ಬಳಿಗೆ ಬಂದು 'ನಿಮ್ಮ ಶಾಪ-ಶಾಸನವನ್ನು ತಿಳಿಯದೇ ತಮ್ಮ ಆಶ್ರಮದಲ್ಲಿ ಪ್ರವೇಶಿಸಿ ಗರ್ಭಿಣಿಯಂತಾದ ನನ್ನ ಈ ಮಗಳನ್ನು ತಾವೇ ಕೈಹಿಡಿದು ಕಾಪಾಡಬೇಕು' ಎಂದು ಭಿನ್ನವಿಸಿದನು. ಆದರಂತೆ ಪುಲಸ್ತ್ಯರು ಗೋದೇವಿಯ ಪಾಣಿಗ್ರಹಣ ಮಾಡಿ ಗ್ರಹಸ್ಥಾಶ್ರಮವನ್ನು ಅಂಗೀಕರಿಸಿದರು. ರಾಜಕುಮಾರಿಯಾದ ಗೋದೇವಿಯು ಹಗಲಿರುಳು ಪತಿಯನ್ನು ಪರಿಪರಿಯಿಂದ ಸೇವೆ ಮಾಡಿದ್ದರಿಂದ ಪ್ರಸನ್ನರಾದ ಮುನಿಗಳು ಅವಳಿಗೆ ಒಳ್ಳೇ ಸತ್ಪುತ್ರನನ್ನು ಕರುಣಿಸಿದರು. ಅವನಿಗೆ ವಿಶ್ರವಸ್ ಎಂದು ಹೆಸರು. ವಿಶ್ರವಸನೂ ತಂದೆಯಂತೆ ವೇದ ವೇದಾಂತ ಪಂಡಿತನಾಗಿದ್ದ. ಈ ವಿಶ್ರವಸನಿಂದಲೇ ಮುಂದೆ ರಾವಣಾದಿ ರಾಕ್ಷಸರು ಜನಿಸಿದರು.

ಮುಂದೊಮ್ಮೆ ಶಕ್ತಿ ಋಷಿಯ ಮಗನಾದ ಪರಾಶರ ಮುನಿಯು ದೈತ್ಯ ಮೇಧ ಎಂಬ ಯಜ್ಞವನ್ನು ಮಾಡಿ ರಾಕ್ಷಸ ಕುಲವನ್ನೇ ಸಂಹರಿಸಬೇಕೆಂದು ಹೊರಟಾಗ ಪುಲಸ್ತ್ಯರು ತಮ್ಮ ವಂಶಾಭಿಮಾನದಿಂದ ಪರಾಶರರಿಗೆ ಹೇಳಿ ಅದನ್ನು ನಿಲ್ಲಿಸಿದರು. ಬ್ರಹ್ಮದೇವರ ಪುಷ್ಕರ ಯಜ್ಞದಲ್ಲಿ ಪುಲಸ್ತ್ಯರು ಅಧ್ವರ್ಯು ಆಗಿದ್ದರು. ಧರ್ಮರಾಜನಿಗೆ ಪುಲಸ್ತ್ಯರು ತೀರ್ಥಯಾತ್ರೆಯ ಉಪದೇಶವನ್ನು ಮಾಡಿದ್ದರ ಉಲ್ಲೇಖವು ಮಹಾಭಾರತ ವನ ಪರ್ವದಲ್ಲಿ ಬರುತ್ತದೆ.

ಪುಲಸ್ತ್ಯರು ಧರ್ಮಶಾಸ್ತ್ರ ಪ್ರವರ್ತಕರಾದ ಸುಪ್ರಸಿದ್ಧ ಸ್ಮೃತಿಕಾರರಾಗಿದ್ದರು. ಬ್ರಾಹ್ಮಣರು ಶ್ರಾದ್ಧದಲ್ಲಿ ಶುದ್ಧವಾದ ತರಕಾರಿ ಮತ್ತು ಅನಿಷಿದ್ಧ ವಸ್ತುಗಳನ್ನು ಮಾತ್ರ

ಉಪಯೋಗಿಸಬೇಕೆಂದೂ ಮತ್ತು ಯಾವ ವರ್ಣದವರೂ ಮಾಂಸವನ್ನು ಪಿತೃಕಾರ್ಯದಲ್ಲಿ ಬಳಸಬಾರದೆಂದೂ ಅವರು ಕಟ್ಟಪ್ಪಣೆಯನ್ನಿತ್ತಿದ್ದಾರೆ. ಮುಂದಿನ ಸ್ಮೃತಿಕಾರರಿಗೆಲ್ಲ ಪುಲಸ್ತ್ಯರ ಆದೇಶಗಳು ವೇದವಚನದಂತೆ ಪರಮಮಾನ್ಯವಾಗಿವೆ. ಯಾಜ್ಞವಲ್ಕ್ಯ ಸ್ಮೃತಿಯ ಟಿಪ್ಪಣಿಯಾದ ಮಿತಾಕ್ಷರಾದಲ್ಲಿ ಪುಲಸ್ತ್ಯ ಸ್ಮೃತಿಯ ಪದ್ಯಗಳನ್ನು ಉದಾಹರಿಸಿ ಮಾದಕ ಪದಾರ್ಥಗಳನ್ನು ತ್ಯಾಗಮಾಡಬೇಕೆಂದು ನಿಷೇಧಿಸಿದ್ದಾರೆ. ಇದರಂತೆ ಅಪರಾರ್ಕ ಸ್ಮೃತಿ, ಚಂದ್ರಿಕಾ, ದಾನರತ್ನಾಕರ ಮುಂತಾದ ಉತ್ತರ ಕಾಲೀನ ಧರ್ಮಶಾಸ್ತ್ರಕಾರರೆಲ್ಲರೂ ಪುಲಸ್ತ್ಯರ ಸ್ಮೃತಿ ವಚನಗಳನ್ನು ಪ್ರಮಾಣವಾಗಿ ಅಲ್ಲಲ್ಲಿ ಆದರದಿಂದ ಉಲ್ಲೇಖಿಸಿದ್ದು ಕಂಡುಬರುತ್ತದೆ.

ಪುಲಸ್ತ್ಯರು ತಮ್ಮ ಗ್ರಂಥದಲ್ಲಿ ಹನ್ನೊಂದು ವಿಧವಾದ ಮಾದಕ ಪದಾರ್ಥಗಳನ್ನು ವರ್ಜ್ಯವೆಂದು ಸಾರಿ ಹನ್ನೆರಡನೆಯದಾದ ಮದ್ಯವನ್ನಂತೂ ಸರ್ವಥಾ ತ್ಯಾಜ್ಯವೆಂದು ನಿಷೇಧ ಗೈದಿದ್ದಾರೆ. ಪುಲಸ್ತ್ಯರು ಸಂಧ್ಯಾವಿಧಿ ಮತ್ತು ಅದರ ಅಂತರಾರ್ಥದ ಬಗ್ಗೆ ಕೆಲವು ಮೌಲಿಕ ಮಾತುಗಳನ್ನು ಬರೆದಿದ್ದಾರೆ. ಅವರು ಹೇಳಿದ ಸನ್ಯಾಸ ಧರ್ಮಗಳು ಬಹಳ ಕಠೋರವಾಗಿವೆ. ಮತ್ತು ಪುಲಸ್ತ್ಯರು ರಾಮಮಂತ್ರ ನರಸಿಂಹಮಂತ್ರಗಳ ಸಿದ್ಧಿಸಾಧನಗಳ ಬಗೆಗೆ ಕೆಲವು ಅಪೂರ್ವ ವಿಧಾನಗಳನ್ನು ಹೇಳಿದ್ದು ಅವು ಸಾಧಕರಿಗೆ ಅತೀವ ಉಪಯುಕ್ತವಾಗಿರುತ್ತದೆ.

ಪುಲಸ್ತ್ಯರು ಬರೀ ಕರ್ಮದಿಂದಾಗಲೀ ಅಥವಾ ಕರ್ಮರಹಿತವಾದ ಜ್ಞಾನದಿಂದಾಗಲಿ ಮೋಕ್ಷವಾಗುವುದಿಲ್ಲವೆಂದು ಹೇಳಿ ಜ್ಞಾನ, ಕರ್ಮ, ಸಮುಚ್ಚಯದಿಂದ ಒಡಗೂಡಿದ ಭಕ್ತಿಮಾರ್ಗವೇ ಮೋಕ್ಷಕ್ಕೂ ಭಗವಂತನ ಅಪರೋಕ್ಷಕ್ಕೂ ಕಾರಣವಾಗುತ್ತದೆ ಎಂದು ಪ್ರತಿಪಾದಿಸಿದ್ದಾರೆ.

ಮಹಾಜ್ಞಾನಿಯಾದ ಭೀಷ್ಮಾಚಾರ್ಯರಿಗೆ ಪುಲಸ್ತ್ಯ ಮುನಿಗಳು ಉತ್ಪತ್ತಿಯ ರಹಸ್ಯವನ್ನೂ ಮತ್ತು ಭೂಮಂಡಲದ ಪ್ರದಕ್ಷಿಣೆಯ ಮಹಾಫಲವನ್ನೂ ವಿವರಿಸಿ ಹೇಳಿದರು. ಪುಲಸ್ತ್ಯರಿಂದ ದೈತ್ಯ, ವಾನರ, ಕಿನ್ನರ, ಯಕ್ಷ ಮುಂತಾದ ಅನೇಕ ಜಾತಿಗಳು ಉತ್ಪನ್ನವಾದವು.

★ ★ ★ ★

# ಪುಲಹ

ಮಹರ್ಷಿ ಪುಲಹರು ಬ್ರಹ್ಮದೇವರ ಮಾನಸ ಪುತ್ರರು. ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮದೇವರ ವ್ಯಾನವಾಯುವಿನಿಂದ ಜನಿಸಿದ ಇವರಿಗೆ ದಕ್ಷಪ್ರಜಾಪತಿಯು ತನ್ನ ಮಗಳಾದ ಕ್ಷಮಾದೇವಿಯನ್ನು ಕೊಟ್ಟು ಮದುವೆ ಮಾಡಿದ್ದನು. ಕ್ಷಮೆಯಿಂದ ಪುಲಹರಿಗೆ ಕರ್ದಮ, ಕನಕ ಪೀಠ, ಉರ್ವರೀವಾನ್, ಸಹಿಷ್ಣು ಎಂಬ ನಾಲ್ಕು ಜನ ಗಂಡು ಮಕ್ಕಳೂ ಪೀವರೀ ಎಂಬ ಹೆಣ್ಣು ಮಗಳೂ ಹುಟ್ಟಿದರು.

ದಕ್ಷಪ್ರಜಾಪತಿಯ ಯಜ್ಞದಲ್ಲಿ ಪರಮೇಶ್ವರನ ಕೋಪಾಟೋಪಕ್ಕೆ ಈಡಾಗಿ ಉರಿದುಹೋದ ದಕ್ಷಪ್ರಜಾಪತಿಯ ಪರಿವಾರದಲ್ಲಿ ಪುಲಹರೂ ಇದ್ದುದರಿಂದ ಮಾವನ ಮನೆಯಲ್ಲಿಯೇ ಇವರಿಗೆ ಷಡ್ಡಕನಿಂದ ಅಗ್ನಿಸಂಸ್ಕಾರವಾಗಿ ಹೋಯಿತು. ಅನಂತರ ಬ್ರಹ್ಮದೇವರು ಶಿವನ ಕೋಪಾಗ್ನಿಯಲ್ಲಿ ಸುಟ್ಟು ಹೋದ ತಮ್ಮ ಎಲ್ಲ ಮಾನಸಪುತ್ರರೊಡನೆ ಶ್ರೀಪುಲಹರನ್ನೂ ವೈವಸ್ವತ ಮನ್ವಂತರದಲ್ಲಿ ಮರಳಿ ಬದುಕಿಸಿದರು. ಬ್ರಹ್ಮದೇವರು ಆಗ ಕೈಕೊಂಡ ಮಹಾಯಜ್ಞದ ಅಗ್ನಿಯ ದೀಪ್ತ ಶಿಖೆಯಿಂದಲೇ ಬ್ರಹ್ಮಸಂಕಲ್ಪದಂತೆ ಪುಲಹರು ಪುನರ್ಜಾತರಾದರು.

ಆಗ ಅವರಿಗೆ ಕ್ರೋಧಾ ಎಂಬ ಹೆಂಡತಿಯಿದ್ದಳು. ಕ್ರೋಧೆಯಿಂದ ಪುಲಹರಿಗೆ ಮೃಗೀ, ಮೃಗಮಂದಾ, ಹರಿಭದ್ರಾ, ಇರಾವತೀ, ಧೂತಾ, ಕಪಿಶಾ, ದಂಷ್ಟ್ರಾ, ರಿಷಾ, ತಿರ್ಯಾ, ಶ್ವೇತಾ, ಸರಮಾ, ಸುರಸಾ ಎಂದು ಹನ್ನೆರಡು ಜನ ಹೆಣ್ಣು ಮಕ್ಕಳಾದರು. ಮತ್ತು ಕೆಲವು ಗಂಡು ಮಕ್ಕಳೂ ಜನಿಸಿದರು.

ಆದರೆ ಇವರ ಗಂಡುಮಕ್ಕಳೆಲ್ಲರೂ ದುರಾಚಾರಿಗಳಿದ್ದುದರಿಂದ ಅಂಥ ಮಕ್ಕಳನ್ನು ತಮ್ಮ ಪುತ್ರರೆಂದು ಒಪ್ಪಿಕೊಳ್ಳಲಿಕ್ಕೂ ಕರ್ಮಠರಾದ ಪುಲಹರಿಗೆ ಇಚ್ಛೆ ಇರಲಿಲ್ಲ. ಆದುದರಿಂದ ಅವರು ಅಗಸ್ತ್ಯಋಷಿಗಳ ಯೋಗ್ಯ ಪುತ್ರನಾದ ದೃಢಾಸ್ಯನನ್ನು ದತ್ತಕ್ಕೆ ತೆಗೆದುಕೊಂಡು ಅವನ ಮುಖಾಂತರವೇ ತಮ್ಮ ಋಷಿ ಸಂತತಿಯನ್ನು ಬೆಳೆಸಿದರು.

ಇವರ ಆಶ್ರಮವು ಗಂಡಕೀ ನದಿಯ ದಂಡೆಯ ಮೇಲೆ ಇದ್ದಿತು. ಆ ನದಿಯಲ್ಲಿ ಅನೇಕ ಸುದರ್ಶನ ಚಕ್ರಗಳೂ ಸಾಲಿಗ್ರಾಮಗಳೂ ತುಂಬಿರುವದರಿಂದ ಅದಕ್ಕೆ

ಚಕ್ರನದೀ ಎಂದೇ ಹೆಸರಿದ್ದಿತೆಂದು ಭಾಗವತದಲ್ಲಿ ಹೇಳಿದ್ದಾರೆ. ಈ ಪುಲಹ ಋಷಿಗಳ ಅದ್ಭುತವಾದ ತಪಸ್ಸಿಗೆ ಮೆಚ್ಚಿದ ಶ್ರೀಹರಿಯು ಇನ್ನೂ ವರೆಗೆ ಆ ಆಶ್ರಮದಲ್ಲಿ ಸನ್ನಿಹಿತನಾಗಿ ಇದ್ದು ಅಲ್ಲಿ ನಿಂತು ತಪಸ್ಸನ್ನು ಮಾಡುವವರಿಗೆಲ್ಲ ಪ್ರತ್ಯಕ್ಷ ದರ್ಶನವೀಯುತ್ತಾನಂತೆ. ಇಂಥ ಪವಿತ್ರವಾದ ಆ ಆಶ್ರಮವನ್ನು ಇಕ್ಕೆಲಗಳಲ್ಲಿ ಉಭಯ ಮುಖಿ ಸುದರ್ಶನಗಳಿಂದ ತುಳುಕುತ್ತಿರುವ ಚಕ್ರನದಿಯು ತನ್ನ ಪಯಃ ಪ್ರವಾಹದಿಂದ ಪ್ರದಕ್ಷಿಣೆ ಹಾಕುತ್ತಲಿದೆ ಎಂದು ಶುಕಾಚಾರ್ಯರು ಪುಲಹ ಮುನಿಯ ಆಶ್ರಮವನ್ನು ಬಣ್ಣಿಸಿದ್ದಾರೆ. ಯತ್ರಹವಾವ ಭಗವಾನ್ 'ಹರಿರದ್ಯಾಪಿ ತತ್ರತ್ಯಾನಾಂ ನಿಜಜನಾನಾಂ ವಾತ್ಸಲ್ಯೇನ ಸನ್ನಿಧಾಪ್ಯತೇ ಇಚ್ಛಾರೂಪೇಣ । ಯತ್ರಾಶ್ರಮಪದಾನ್ಯುಭಯತೋ ನಾಭಿ ಭಿರ್ದೃಷಚ್ಚಕ್ರೈಶ್ಚಕ್ರನದೀ ನಾಮ ಸರಿತ್ಪ್ರವರಾ ಸರ್ವತಃ ಪವಿತ್ರೀ ಕರೋತಿ' ಎಂದು ಮುಂತಾಗಿ ಪಂಚಮಸ್ಕಂಧ ಭಾಗವತದಲ್ಲಿ ಬಣ್ಣನೆ ಬಂದಿದೆ. ಬ್ರಹ್ಮದೇವರು ಪುಷ್ಕರ ಕ್ಷೇತ್ರದಲ್ಲಿ ಮಾಡಿದ ಮಹಾ ಯಾಗದಲ್ಲಿ ಪೂಜ್ಯ ಪುಲಹ ಮಹರ್ಷಿಗಳು ಪ್ರತ್ಯುದ್ಗಾತೃರಾಗಿದ್ದರೆಂದು ಪದ್ಮಪುರಾಣದಲ್ಲಿ ಉಲ್ಲೇಖ ಬರುತ್ತದೆ.

ಪುಲಹರ ಪೂರ್ವಪತ್ನಿಯ ಪುತ್ರ ಕರ್ದಮರಿಗೆ ಅತ್ರಿಮುನಿಗಳ ಮಗಳಾದ ಶ್ರುತಿಯನ್ನು ಕೊಟ್ಟಿತ್ತು. ಆ ದಂಪತಿಗಳಿಗೆ ಶಂಖಪದ, ಕಾಮ್ಯಾ ಎಂಬಿಬ್ಬರು ಮಕ್ಕಳು. ಕಾಮ್ಯಾಳನ್ನು ಪ್ರಿಯವ್ರತ ಮಹಾರಾಜನಿಗೆ ಧಾರೆಯೆರೆದು ಕೊಟ್ಟಿದ್ದರು. ಕಾಮ್ಯೆಯಿಂದ ಪ್ರಿಯವ್ರತ ಮಹಾರಾಜನಿಗೆ ಹತ್ತು ಗಂಡು ಎರಡು ಹೆಣ್ಣು ಹುಟ್ಟಿ ಆ ಹತ್ತು ಪುತ್ರರಿಂದಲೇ ಜಗತ್ತಿನಲ್ಲಿ ಕ್ಷತ್ರಿಯ ವಂಶವು ಅಭಿವೃದ್ಧಿ ಮಾಡಲ್ಪಟ್ಟಿತು.

★ ★ ★ ★

## ಮರೀಚಿ

ಮರೀಚಿಯ ಮಗನೆ ಕಶ್ಯಪ ಅಥವಾ ಕಾಶ್ಯಪ. ಮರೀಚಿಯ ಮಗನಾದ್ದರಿಂದ ಈ ಮುನಿಯನ್ನು ಮಾರೀಚ ಎಂದು ಕರೆಯುತ್ತಾರೆ. ಮರೀಚಿಯ ಮಗಳು ಪೂರ್ಣಿಮಾ (ಹುಣ್ಣಿಮೆಯ ಅಭಿಮಾನಿ ದೇವತೆ). ಕಾಶ್ಯಪನಿಂದಲೆ ದೇವ-ದಾನವರ, ಸಮಸ್ತ ಜೀವಜಾತಗಳ ಸೃಷ್ಟಿಯ ಬಿತ್ತರ ನಡೆಯಿತು.

# ಮಾಂಡವ್ಯ

ಮಾಂಡವ್ಯನೆಂಬ ಹೆಸರುಳ್ಳ ಒಬ್ಬ ಬ್ರಾಹ್ಮಣನಿದ್ದನು. ಆತನು ದೃಢಚಿತ್ತನು. ಸಮಸ್ತ ಧರ್ಮಗಳನ್ನೂ ತಿಳಿದವನು. ಸತ್ಯಸಂಧನು. ತಪಸ್ವಿ! ಆತನು ತೀರ್ಥಯಾತ್ರೆಗೆ ಹೊರಟು, ತನ್ನ ಗ್ರಾಮಕ್ಕೆ ಸಮೀಪದಲ್ಲಿದ್ದ ತೀರ್ಥಗಳನ್ನೆಲ್ಲ ತನ್ನ ಇಷ್ಟಾನುಸಾರವಾಗಿ ಸಂಚರಿಸುತ್ತಿದ್ದನು. ಮತ್ತು ಆ ಮಹರ್ಷಿಯು ಅಲ್ಲಿಯೇ ಒಂದು ಆಶ್ರಮವನ್ನು ಕಟ್ಟಿಕೊಂಡು ವಾಸಮಾಡುತ್ತಿದ್ದನು. ಒಮ್ಮೆ ಆ ತಾಪಸೋತ್ತಮನು ತನ್ನ ಆಶ್ರಮದ್ವಾರದಲ್ಲಿ ಒಂದು ಮರದ ಕೆಳಗೆ ಕೈಗಳನ್ನು ಮೇಲಕ್ಕೆತ್ತಿಕೊಂಡು ಮೌನವ್ರತವನ್ನು ತಾಳಿ ನಿಂತಿದ್ದನು. ಆತನು ಹಾಗೆ ತಪಸ್ಸು ಮಾಡುತ್ತಿರುವಾಗ, ಬಹುಕಾಲಕ್ಕೆ ಮೇಲೆ ಕೆಲವು ಕಳ್ಳರು, ಎಲ್ಲಿಯೋ ಧನವನ್ನು ಅಪಹರಿಸಿ, ರಾಜಸೇವಕರು ತಮ್ಮನ್ನು ಹಿಡಿಯುವುದಕ್ಕಾಗಿ ಹಿಂಬಾಲಿಸಲು, ಓಡಿಬಂದು ಅದೇ ಆಶ್ರಮವನ್ನು ಹೊಕ್ಕರು. ತಾವು ಕದ್ದು ತಂದ ಧನವನ್ನು ಅಲ್ಲಿಯೇ ಬಿಚ್ಚಿಟ್ಟು ತಾವೂ ಅಲ್ಲಿಯೇ ಅವಿತುಕೊಂಡರು. ಅವರು ಅವಿತುಕೊಂಡ ಮೇಲೆ ತಳವಾರರ ದಂಡೂ ಅತಿಶೀಘ್ರವಾಗಿ ಅಲ್ಲಿಗೆ ಬಂದು ಸೇರಿತು. ಆ ತಳವಾರರು ಮರದ ಕೆಳಗೆ ಮೌನವ್ರತದಿಂದ ಕುಳಿತಿದ್ದ ಆ ಮುನಿಯನ್ನು ನೋಡಿ 'ಬ್ರಾಹ್ಮಣೋತ್ತಮಾ! ಕಳ್ಳರು ಯಾವ ದಾರಿಯಲ್ಲಿ ಹೋದರು? ನಾವು ಆ ದಾರಿಯಲ್ಲಿಯೇ ಹೋಗಿ ಅವರನ್ನು ಹಿಡಿಯಬೇಕು' ಎಂದು ಕೇಳಿದರು. ತಳವಾರರು ಕೇಳುತ್ತಿದ್ದರೂ, ಆ ಋಷಿಯು ಅವರಿಗೆ ಅನುಕೂಲವಾಗಿಯಾಗಲಿ, ಪ್ರತಿಕೂಲವಾಗಿಯಾಗಲಿ, ಯಾವ ಮಾತನ್ನೂ ಆಡಲಿಲ್ಲ. ಆಮೇಲೆ ತಳವಾರರು ಆಶ್ರಮದಲ್ಲೆಲ್ಲಾ ಹುಡುಕಿನೋಡಿ, ಅಲ್ಲಿ ತಂಗಿದ್ದ ಕಳ್ಳರನ್ನೆಲ್ಲ ಅವರು ಕದ್ದು ತಂದ ಧನದೊಡನೆ ಹಿಡಿದುಬಿಟ್ಟರು. ಆಗ ಆ ಸೇವಕರಿಗೆ ಋಷಿಯಲ್ಲಿಯೂ ಸಂದೇಹವುಂಟಾಗಿ, ಆತನನ್ನೂ ಕಳ್ಳರೊಡನೆ ರಾಜನ ಬಳಿಗೆ ಕರೆದುಕೊಂಡು ಹೋದರು. ರಾಜನು ಕಳ್ಳರೊಡನೆ ಆತನನ್ನೂ ವಧಿಸುವಂತೆ ಅಪ್ಪಣೆಮಾಡಿದರು. ಧರ್ಮಾತ್ಮನಾದ ಆ ಮಹರ್ಷಿಯು ಶೂಲಕ್ಕೇರಿಸಲ್ಪಟ್ಟು ಬಹುಕಾಲಕ್ಕೆ ಆಹಾರವಿಲ್ಲದಿದ್ದರೂ ಮರಣಹೊಂದಲಿಲ್ಲ. ಆತನು ಪ್ರಾಣವನ್ನು ನಿಲ್ಲಿಸಿಕೊಂಡಿದ್ದು ಬೇರೆ ಋಷಿಗಳನ್ನೂ ಅಲ್ಲಿಗೆ ಕರೆಸಿಕೊಂಡನು. ಆ ಮುನಿಯು

ಶೂಲದಮೇಲಿರುವಾಗಲೂ ತಪಸ್ಸು ಮಾಡುತ್ತಿರುವುದನ್ನು ನೋಡಿ ಋಷಿಗಳೆಲ್ಲರೂ ಸಂಕಟಪಟ್ಟುಕೊರಗಿದರು. ಆ ಮುನಿಗಳು ರಾತ್ರಿಯ ವೇಳೆಯಲ್ಲಿ ರಹಸ್ಯವಾಗಿ ಪಕ್ಷಿಯ ರೂಪದಿಂದ ಹಾರಿಬಂದು, ಆ ಬ್ರಾಹ್ಮಣಶ್ರೇಷ್ಠನನ್ನುಕುರಿತು "ಬ್ರಾಹ್ಮಣಾ! ನೀನು ಈ ಶೂಲದಲ್ಲಿ ಭಯಂಕರವಾದ ಇಂತಹ ಅಪಾರ ದುಃಖವನ್ನನುಭವಿಸಲು ನೀನು ಮಾಡಿದ ಅಂತಹ ಘೋರ ಪಾಪವೇನು?" ಎಂದು ಕೇಳಿದರು.

ಆಗ ಋಷಿಶ್ರೇಷ್ಠನು ಅವರನ್ನುಕುರಿತು "ಎಲೈ ಪಕ್ಷಿಗಳಿರಾ! ನಾನು ಯಾರಿಗೂ ತಪ್ಪು ಮಾಡಿದುದಿಲ್ಲ. ಬೇರೆ ಯಾರೂ ನನ್ನಲ್ಲಿ ತಪ್ಪು ಮಾಡಲಿಲ್ಲ" ಎಂದು ಋಷಿಗಳಿಗೆ ಹೇಳಿದನು. ಒಮ್ಮೆ ತಳವಾರರು ಬಂದು, ಆ ಶೂಲದ ಮೊನೆಯಲ್ಲಿ ತಪಸ್ಸು ಮಾಡುತ್ತಿರುವ ಋಷಿಯನ್ನು ನೋಡಿ ಆಶ್ಚರ್ಯಪಟ್ಟು ಅದನ್ನು ರಾಜನಿಗೆ ಅರಿಕೆ ಮಾಡಿದರು. ರಾಜನು ಆತನನ್ನು ಮಹರ್ಷಿಯೆಂದು ತಿಳಿದು, ಒಡನೆಯೇ ಮಂತ್ರಿಗಳೊಡನೆ ಹೊರಟು ಬಂದು ಶೂಲದ ಮೇಲೆ ನಾಟಿದ್ದ ಆ ಋಷಿಶ್ರೇಷ್ಠನನ್ನು ನೋಡಿ "ಋಷಿತಿಲಕಾ! ಅಜ್ಞಾನದಿಂದ ನಿನ್ನನ್ನು ಕಳ್ಳನೆಂದು ಭ್ರಮಿಸಿ ನಾನು ಮಾಡಿದ ಅಪಚಾರವನ್ನು ಮನ್ನಿಸು! ನಿನ್ನನ್ನು ಬೇಡಿಕೊಳ್ಳುವೆನು. ನೀನು ನನ್ನ ಮೇಲೆ ಕೋಪಿಸದೆ ಮನ್ನಿಸು" ಎಂದು ಪ್ರಾರ್ಥಿಸಿಕೊಂಡನು.

ರಾಜನು ಕೇಳಿಕೊಂಡಮೇಲೆ, ಮಾಂಡವ್ಯನು ಆತನನ್ನು ಮನ್ನಿಸಿದನು. ಆ ಋಷಿಯನ್ನು ರಾಜನು ಶೂಲದಿಂದ ಬಿಡಿಸಿದನು. ಶೂಲದಿಂದ ಇಳಿಸಿದ ಮೇಲೆಯೂ ಆ ಶೂಲವನ್ನು ದೇಹದಿಂದ ಕಿತ್ತುಹಾಕಲು ಸಾಧ್ಯವಾಗಲಿಲ್ಲ. ಆದುದರಿಂದ ದೇಹದ ಹೊರಗೆ ಕಾಣುತ್ತಿದ್ದ ಆ ಶೂಲಭಾಗವನ್ನು ಕತ್ತರಿಸಿ ತೆಗೆಸಿದನು. ಆ ಶೂಲವು ತನ್ನ ದೇಹದೊಳಗೆ ನಾಟಿಕೊಂಡಿದ್ದ ಹಾಗೆಯೇ ಆ ಮುನಿಯು ಸಂಚರಿಸುತ್ತಿದ್ದನು. ಆತನ ಕುತ್ತಿಗೆಗೂ, ಎರಡು ಪಕ್ಕೆಗಳಿಗೂ ನಡುವೆ ನೀಡಿರುವ ಆ ಶೂಲದ ಬೆಣೆಯೊಡನೆ ಓಡಾಡುತ್ತಾ, ಅದರಲ್ಲಿ ಹೂಬುಟ್ಟಿಯನ್ನು ತಗಲಿಸಿಕೊಳ್ಳಬಹುದೆಂದು ತಿಳಿದುಕೊಂಡನು. ಈ ಸ್ಥಿತಿಯಲ್ಲಿಯೇ ಆತನು ಉಗ್ರವಾದ ತಪಸ್ಸುಗಳನ್ನು ಮಾಡಿ, ಇತರರಿಂದ ಪಡೆಯಲಸಾಧ್ಯವಾದ

ಪುಣ್ಯಲೋಕಗಳನ್ನು ಗೆದ್ದನು. ಆ ಶೂಲಸಂಬಂಧದಿಂದಲೇ ಆತನು ಲೋಕದಲ್ಲಿ ಅಣಿಮಾಂಡವ್ಯನೆಂದು ಪ್ರಸಿದ್ಧನಾಗಿರುವನು. ಬ್ರಹ್ಮಜ್ಞಾನಿಯಾದ ಆ ಬ್ರಾಹ್ಮಣನು, ಧರ್ಮದೇವತೆಯ ಮನೆಗೆ ಹೋಗಿ, ಅಲ್ಲಿ ಆಸನದಲ್ಲಿ ಕುಳಿತುಕೊಂಡಿದ್ದ ಪ್ರಭುವಾದ ಧರ್ಮದೇವತೆಯನ್ನು ನೋಡಿ ''ಅಂತಹ ಶಿಕ್ಷೆಯನ್ನು ಅನುಭವಿಸಲು ನಾನು ತಿಳಿಯದೆಯಾಗಲಿ ಏನಾದರೂ ಪಾಪವನ್ನು ಮಾಡಿದ್ದರೆ ಅದನ್ನು ನನಗೆ ತಿಳಿಸು'' ಎಂದು ಆಕ್ಷೇಪಿಸಿದನು. ಅದಕ್ಕೆ ಧರ್ಮದೇವತೆಯು ''ತಪೋಧನಾ! ನೀನು ಒಂದಾನೊಂದು ಕಾಲದಲ್ಲಿ ಕ್ರಿಮಿ (ನೊಣ) ಯೊಂದನ್ನು ಒಂದು ಹುಲ್ಲುಕಡ್ಡಿಯಿಂದ ಚುಚ್ಚಿದೆ. ಆ ಪಾಪಕ್ಕಾಗಿ ನೀನು ಈ ಫಲವನ್ನು ಅನುಭವಿಸುತ್ತಿರುವೆ. ಬ್ರಹ್ಮರ್ಷಿ! ಸ್ವಲ್ಪ ದಾನಮಾಡಿದರೂ ಅದು ಅಮಿತವಾದ ಪುಣ್ಯವನ್ನು ತರುವಂತೆ, ಸ್ವಲ್ಪ ಪಾಪವೂ ಅಧಿಕ ದುಃಖಕರವಾದ ಫಲವನ್ನು ಕೊಡುವುದು'' ಎಂದನು. ಅದಕ್ಕೆ ಅಣಿಮಾಂಡವ್ಯನು ''ನಾನು ಆ ಅಪರಾಧವನ್ನು ಯಾವ ಪ್ರಾಯದಲ್ಲಿ ಮಾಡಿದೆನು? ಯಥಾರ್ಥವಾಗಿ ಹೇಳು'' ಎಂದನು. ಆಗ ಆತನು ''ನೀನು ಸಣ್ಣ ಬಾಲಕನಾಗಿದ್ದಾಗ ಮಾಡಿದೆ '' ಎಂದನು. ಅದಕ್ಕೆ ಆ ಮುನಿಯು ''ಹುಟ್ಟಿದ ಮೊದಲು ಹನ್ನೆರಡು ವಯಸ್ಸಿನವರೆಗೂ ಯಾವ ಪಾಪ ಮಾಡಿದರೂ ಅದರಿಂದ ಪಾಪವು ಬರುವುದಿಲ್ಲ. ಏಕೆಂದರೆ, ಆತನಿಗೆ ಆ ಕಾಲದಲ್ಲಿ ಶಾಸ್ತ್ರೋಪದೇಶವು ಲಭಿಸದು. ಚಿಕ್ಕ ತಪ್ಪಿಗಾಗಿ ನೀನು ನನಗೆ ಈ ದೊಡ್ಡ ಶಿಕ್ಷೆಯನ್ನು ವಿಧಿಸಿರುವೆ. ಸಮಸ್ತಪ್ರಾಣಿಗಳನ್ನು ವಧಿಸುವುದಕ್ಕಿಂತ, ಬ್ರಾಹ್ಮಣನನ್ನು ವಧಿಸುವುದು ವಿಶೇಷಪಾಪಕಾರಿಯು. ಧರ್ಮಪುರುಷಾ! ಆದುದರಿಂದ ನೀನು ಮನುಷ್ಯಲೋಕದಲ್ಲಿ ಶೂದ್ರಯೋನಿಯಲ್ಲಿ ಜನಿಸು. ಈಗ ನಾನು ಇದೇ ವಿಚಾರದಲ್ಲಿ ಒಂದು ವ್ಯವಸ್ಥೆಯನ್ನು ಮಾಡಿರುವೆನು. ಹದಿನಾಲ್ಕು ವಯಸ್ಸಿನವರೆಗೆ ತಪ್ಪು ಮಾಡಿದರೂ ಪಾಪವು ಬರುವುದಿಲ್ಲ. ಆ ವಯಸ್ಸು ಕಳೆದಮೇಲೆಯೇ ತಪ್ಪು ಮಾಡುವವರಿಗೆ ಪಾಪವು ತಟ್ಟುವುದು'' ಎಂದನು. ಧರ್ಮದೇವತೆಯು ಈ ಅಪರಾಧವನ್ನು ಮಾಡಿದುದರಿಂದ, ಆ ಮಹಾತ್ಮನಿಂದ ಶಾಪವನ್ನು ಹೊಂದಿ, ವಿದುರನ ರೂಪದಿಂದ ಶೂದ್ರಯೋನಿಯಲ್ಲಿ ಹುಟ್ಟಿದನು.

★ ★ ★ ★

# ರೈಭ್ಯ

''ಸಮಂಗಾ'' ನದೀ ತೀರದಲ್ಲಿರುವ ''ಕರ್ದಮಿಲ''ವೆಂಬ ತೀರ್ಥಕ್ಷೇತ್ರದಲ್ಲಿ ಬಾಲ್ಯಸ್ನೇಹಿತರಾದ ರೈಭ್ಯ ಮತ್ತು ಭರದ್ವಾಜರೆಂಬ ಮಹರ್ಷಿಗಳು ವಾಸವಾಗಿದ್ದರು. ರೈಭ್ಯನಿಗೆ ಅರ್ವಾವಸು, ಪರಾವಸು, ಎಂಬಿಬ್ಬರು ಮಕ್ಕಳು ಇದ್ದರು. ಭರದ್ವಾಜನಿಗೆ ಯವಕ್ರೀತನೆಂಬ ಮಗನಿದ್ದನು. ವೇದವೇದಾಂಗ ಪಾರಂಗತರಾದ, ಸಕಲ ಶಾಸ್ತ್ರಗಳಲ್ಲಿಯೂ ನಿಷ್ಣಾತರಾದ ರೈಭ್ಯನಿಗೂ ಅವನ ಪುತ್ರರಿಗೂ ಸಮಾಜದಲ್ಲಿ ಅಧಿಕ ಗೌರವವಿದ್ದಿತು. ಇದಕ್ಕಾಗಿ ಅಸೂಯೆ ಹೊಂದಿದ ಯವಕ್ರೀತನು ಇಂದ್ರನನ್ನು ತಪಸ್ಸಿನಿಂದ ಒಲಿಸಿ, ಆತನಿಂದ ತಾನೂ ತನ್ನ ತಂದೆಯಂತೆ ವೇದವೇದಾಂಗ ಪಾರಂಗತನಾಗುವ ವರವನ್ನು ಪಡೆದುಕೊಂಡನು.

ವೇದವೇದಾಂಗ ಪಾರಂಗತನಾದರೂ ಯವಕ್ರೀತನು ತನ್ನ ತಂದೆಯಂತೆ ಸಜ್ಜನನಾಗಿರಲಿಲ್ಲ. ಯಾರಿಗೂ ಯಾವುದಕ್ಕೂ ಭಯಪಡದೇ ಸ್ವೇಚ್ಛಾಚಾರಿಯಾಗಿ ಋಷಿ-ಮಹರ್ಷಿಗಳನ್ನು ಕುಚೋದ್ಯ ಮಾಡುತ್ತಾ ಅದರಿಂದಲೇ ಆನಂದಪಡುತ್ತಾ ಕಾಲ ಕಳೆಯುತ್ತಿದ್ದನು. ತಂದೆಯ ಬುದ್ಧಿ ಮಾತುಗಳನ್ನು ಕೇಳಿಸಿಕೊಳ್ಳುತ್ತಿರಲಿಲ್ಲ.

ವೈಶಾಖ ಮಾಸದ ಒಂದುದಿನ ಯವಕ್ರೀತನು ಅಲ್ಲಲ್ಲಿ ತಿರುಗಾಡುತ್ತಾ ರೈಭ್ಯನ ಆಶ್ರಮಕ್ಕೂ ಹೋದನು. ಅಲ್ಲಿ ಸುಂದರಿಯಾದ ರೈಭ್ಯನ ಸೊಸೆಯೊಡನೆಯೂ ಕಾಮಪೀಡಿತನಾಗಿ ಅನುಚಿತವಾಗಿ ಅಗೌರವದಿಂದ ನಡೆದುಕೊಂಡನು. ರೈಭ್ಯನ ಸೊಸೆಯು ಹೇಗೋ ಆತನಿಂದ ತಪ್ಪಿಸಿಕೊಂಡು ಆಶ್ರಮಕ್ಕೆ ಬಂದಳು. ಆಶ್ರಮಕ್ಕೆ ಬಂದ ರೈಭ್ಯನು ಸೊಸೆಯ ಕಣ್ಣೀರನ್ನು ಕಂಡು ಕಾರಣವೇನೆಂದು ಪ್ರಶ್ನಿಸಿದನು. ಯವಕ್ರೀತನ ದುಶ್ಚೇಷ್ಟೆಯನ್ನು ತಿಳಿದ ರೈಭ್ಯನು ಕೋಪಾವಿಷ್ಟನಾಗಿ, ಒಡನೆಯೇ ತನ್ನ ಜಟೆಯಿಂದ ಒಂದು ಕೂದಲನ್ನು ಕಿತ್ತು ಅದಕ್ಕೆ ಸಂಸ್ಕರಣ ಮಾಡಿ ಯಜ್ಞೇಶ್ವರನಲ್ಲಿ ಹೋಮ ಮಾಡಿದನು. ಒಡನೆಯೇ ಅಗ್ನಿಮಧ್ಯದಿಂದ ರೈಭ್ಯನ ಸೊಸೆಯಂತೆಯೇ ಇರುವ ಸ್ತ್ರೀಯೊಬ್ಬಳು ಹೊರಬಂದಳು. ಅದೇ ರೀತಿ ರೈಭ್ಯ ಮಹರ್ಷಿಯು ತನ್ನ ಇನ್ನೊಂದು ಕೂದಲಿನಿಂದ ಕ್ರೂರನಾದ ರಾಕ್ಷಸನನ್ನು ಸೃಷ್ಟಿಸಿದನು. ಇಬ್ಬರಿಗೂ ಕೂಡಲೇ ಹೋಗಿ ಯವಕ್ರೀತನನ್ನು ಸಂಹರಿಸುವಂತೆ ಆಜ್ಞಾಪಿಸಿದನು.

ಯವಕ್ರೀತನಿದ್ದ ರಹಸ್ಯ ಸ್ಥಳಕ್ಕೆ ಆಗಮಿಸಿ ತರುಣಿಯು ತನ್ನ ಹಾವಭಾವಗಳಿಂದ ಋಷಿ ಪುತ್ರನನ್ನು ವಿಮೋಹಗೊಳಿಸಿ ಅವನ ಕಮಂಡಲುವನ್ನು ಅಪಹರಿಸಿದಳು. ಇದರಿಂದ ಯವಕ್ರೀತನಿಗೆ ಅಶುಚಿತ್ವವುಂಟಾಗಲು ರಾಕ್ಷಸನು ಯುವಕ್ರೀತನ ಮೇಲೆರಗಿದನು. ಕಮಂಡಲವು ಬಳಿಯಲ್ಲಿದ್ದರೆ ಯವಕ್ರೀತನು ಪವಿತ್ರಜಲದಿಂದ ಆ ರಾಕ್ಷಸನನ್ನು ಕೊಲ್ಲಲೂ, ಇನ್ನೂ ಅಂತಹ ಸಾವಿರಾರು ರಾಕ್ಷಸರನ್ನು ಸೃಷ್ಟಿಸಲೂ ಸಮರ್ಥನಾಗುತ್ತಿದ್ದನು. ಈಗ ತನಗೊದಗಿದ ಆಪತ್ತನ್ನು ನಿವಾರಿಸಲು ಯವಕ್ರೀತನಿಗೆ ಒಂದು ಉದ್ಧರಣೆಯಷ್ಟು ನೀರೂ ಸಾಕಾಗಿತ್ತು. ಹಾಗಾಗಿ ಆತನು ಸರೋವರದ ಬಳಿಗೆ ಓಡಿದನು. ರಾಕ್ಷಸನ ಮಾಯೆಯಿಂದಾಗಿ ಸರೋವರದಲ್ಲಿ ನೀರೇ ಇರಲಿಲ್ಲ. ಯುವಕ್ರೀತನು ನದಿಯ ಬಳಿಗೆ ಓಡಲು, ನದಿಯೂ ಒಣಗಿಹೋಗಿರುವಂತೆ ಆತನಿಗೆ ಕಂಡಿತು. ಭಯಭೀತನಾದ ಯವಕ್ರೀತನು ತಂದೆಯ ಅಗ್ನಿಹೋತ್ರ ಶಾಲೆಯನ್ನಾದರೂ ಪ್ರವೇಶಿಸಿದರೆ ತನ್ನ ಪ್ರಾಣ ಉಳಿಯಬಹುದೆಂದು ಆ ದಿಕ್ಕಿಗೆ ಮುಖ ಮಾಡಿದನು. ಆದರೆ ದುರ್ವಿಧಿ! ಅಗ್ನಿಹೋತ್ರಾಗಾರದ ಬಾಗಿಲು ಕಾಯುತ್ತಿದ್ದ, ಕುರುಡನಾದ, ನೀಚಜಾತಿಯ ಕಾವಲುಗಾರನು ಬಂದವನ್ಯಾರೆಂದು ತಿಳಿಯದೆ ಯವಕ್ರೀತನನ್ನು ತಡೆದನು. ಆತನ ಸ್ಪರ್ಶದಿಂದ ಯವಕ್ರೀತನು ಇನ್ನೂ ಅಶುಚಿಯಾಗಲು, ರಾಕ್ಷಸನು ಕ್ಷಣಮಾತ್ರದಲ್ಲಿಯೇ ಶೂಲದಿಂದ ಇರಿದು ಆತನನ್ನು ಕೊಂದುಬಿಟ್ಟನು.

ಅತ್ತಲಾಗಿ ಭರದ್ವಾಜ ಮಹರ್ಷಿಯು ನದೀತೀರದಲ್ಲಿ ಅಧ್ಯಯನ ಮತ್ತು ಆಹ್ನಿಕಗಳನ್ನು ಮುಗಿಸಿಕೊಂಡು ಹೋಮಕ್ಕಾಗಿ ಸಮಿತ್ಕುಶಗಳನ್ನು ತೆಗೆದುಕೊಂಡು ಆಶ್ರಮವನ್ನು ಪ್ರವೇಶಿಸಿದನು. ಅನುದಿನವೂ ತನ್ನನ್ನು ಸ್ವಾಗಿಸಲು ಬರುತ್ತಿದ್ದ ತ್ರಿವಿಧಾಗ್ನಿಗಳು ಇಂದು ಬಾರದಿರಲು ಚಕಿತನಾದ ಮಹರ್ಷಿಯು ಕಾರಣವೇನೆಂದು ಕಾವಲುಗಾರನನ್ನು ಪ್ರಶ್ನಿಸಿದನು. ಕಾವಲುಗಾರನಿಂದ ವಿಷಯವರಿತ ಭರದ್ವಾಜನು ಹತನಾದ ಮಗನನ್ನು ಕಂಡು ಬಹುದುಃಖಿತನಾದನು. ಆತನ ದೇಹವನ್ನಪ್ಪಿಕೊಂಡು ಗೋಳಾಡಿದನು.

ಮಗನ ವಿಯೋಗವನ್ನು ಸಹಿಸದ ಆತನೂ ದೇಹತ್ಯಾಗಕ್ಕೆ ನಿರ್ಣಯಿಸಿದನು. ಆದರೆ ಮಗನ ಮರಣಕ್ಕೆ ರೈಭ್ಯನೇ ಕಾರಣನೆಂದು ನಿಶ್ಚಯಿಸಿ ''ಪುತ್ರನ ಮರಣದಿಂದ

ಶೋಕಾಕ್ರಾಂತನಾದ ನಾನು ಯಾವ ರೀತಿ ಪ್ರಾಣತ್ಯಜಿಸುವೆನೋ- ಅದೇ ರೀತಿ ರೈಭ್ಯನೂ ತನ್ನ ಜ್ಯೇಷ್ಠ ಪುತ್ರನಾದ ಪರಾವಸುವಿನಿಂದಲೇ ಕೊಲ್ಲಲ್ಪಟ್ಟು ಮರಣಹೊಂದಲಿ'' ಎಂದು ರೈಭ್ಯನನ್ನು ಶಪಿಸಿದನು. ಬಳಿಕ ಭರದ್ವಾಜನು ಮಗನ ಶವಸಂಸ್ಕಾರವನ್ನು ಮಾಡಿ ಧಗಧಗನೆ ಉರಿಯುತ್ತಿದ್ದ ಬೆಂಕಿಯಲ್ಲಿ ತಾನೂ ಬಿದ್ದನು.

ಅದೇ ಸಮಯದಲ್ಲಿ ರೈಭ್ಯನ ಶಿಷ್ಯನೂ ಮಹಾಪ್ರತಾಪಶಾಲಿಯೂ ಆದ ಬೃಹದ್ಯುಮ್ನನೆಂಬ ಮಹಾರಾಜನು ತಾನು ಆರಂಭಿಸಿದ ಸತ್ರಕ್ಕೆ ಪುರೋಹಿತರಾದ ರೈಭ್ಯಪುತ್ರರನ್ನು ಕರೆಸಿಕೊಂಡನು. ಆಶ್ರಮದಲ್ಲಿ ರೈಭ್ಯನೂ, ಪರಾವಸುವಿನ ಭಾರ್ಯೆಯೂ ಇದ್ದರು. ಒಂದು ದಿನ ಪರಾವಸುವು ತನ್ನ ಪತ್ನಿಯನ್ನು ಕಾಣುವುದಕ್ಕಾಗಿ ತಾನೊಬ್ಬನೇ ಏಕಾಂತಿಯಾಗಿ ಆಶ್ರಮಕ್ಕೆ ಬರುತ್ತಿದ್ದನು. ಹಾದಿಯಲ್ಲಿ ಕೃಷ್ಣಚರ್ಮದಿಂದ ಆಚ್ಛಾದಿತವಾಗಿದ್ದ ಪ್ರಾಣಿಯೊಂದನ್ನು ಪರಾವಸುವು ಕಂಡನು. ರಾತ್ರಿಯಾಗಿದ್ದು, ನಿದ್ರೆಕಣ್ಣಿನಲ್ಲಿದ್ದ ಆತನು ಯಾವುದೋ ಹಿಂಸ್ರಮೃಗವಿರಬೇಕೆಂದು ಭ್ರಮಿಸಿ ತನ್ನ ಶರೀರ ಸಂರಕ್ಷಣಾರ್ಥವಾಗಿ ಅದನ್ನು ಕೊಂದನು. ದುರದೃಷ್ಟ! ಕೃಷ್ಣಚರ್ಮದಿಂದ ಅಚ್ಛಾದಿತನಾಗಿದ್ದವನು ಪರಾವಸುವಿನ ತಂದೆಯೇ ಆಗಿದ್ದನು. ಇಂತು ಭರದ್ವಾಜನ ಶಾಪವು ದಿಟವಾಯಿತು. ಬಹುದುಃಖಿತನಾದ ಪರಾವಸುವು ತಂದೆಯ ದಹನಾದಿ ಸಂಸ್ಕಾರ ಕ್ರಿಯೆಗಳನ್ನು ಮುಗಿಸಿದನು.

ಬಳಿಕ ರಾಜನ ಯಾಗ ಮಂಟಪಕ್ಕೆ ಹೋದ ಪರಾವಸುವು ಅರ್ವಾವಸುವಿಗೆ ಹೇಳಿದನು– 'ಅರ್ವಾವಸುವೇ, ನನ್ನಸಹಾಯವಿಲ್ಲದೇ ನೀನೊಬ್ಬನೇ ಈ ಸತ್ರವನ್ನು ಪೂರ್ಣಗೊಳಿಸಲಾರೆ. ನಾನಾದರೋ ಬ್ರಹ್ಮಹತ್ಯಾದೋಷದಿಂದ ಕೂಡಿದ್ದೇನೆ. ಆದುದರಿಂದ ಈ ದೋಷಪರಿಹಾರಾರ್ಥವಾದ ವ್ರತಾನುಷ್ಠಾನಗಳನ್ನು ನೀನು ನನಗಾಗಿ ಮಾಡುವೆಯೆಂದಾದರೆ ನಾನೊಬ್ಬನೇ ನಿನ್ನ ಸಹಾಯವಿಲ್ಲದೇ ಈ ಸತ್ರವನ್ನು ಮುಗಿಸಬಲ್ಲೆನು'. ಅರ್ವಾವಸುವು ಅದಕ್ಕೊಪ್ಪಿದನು. ಪರಾವಸುವಿನ ಸಲುವಾಗಿ ಬ್ರಹ್ಮಹತ್ಯಾ ಪಾತಕ ನಿವಾರಣೆಗಾಗಿ ಮಾಡಬೇಕಾದ ಪ್ರಾಯಶ್ಚಿತ್ತವನ್ನು ಪೂರೈಸಿ, ಪರಾವಸುವನ್ನು ಆ ಮಹಾಪಾಪದಿಂದ ವಿಮೋಚನೆಗೊಳಿಸಿ ಅರ್ವಾವಸುವು ಬೃಹದ್ಯುಮ್ನನ ಯಾಗಮಂಟಪಕ್ಕೆ ಬಂದನು.

ಯವಕ್ರೀತನಿದ್ದ ರಹಸ್ಯ ಸ್ಥಳಕ್ಕೆ ಆಗಮಿಸಿ ತರುಣಿಯು ತನ್ನ ಹಾವಭಾವಗಳಿಂದ ಋಷಿ ಪುತ್ರನನ್ನು ವಿಮೋಹಗೊಳಿಸಿ ಅವನ ಕಮಂಡಲುವನ್ನು ಅಪಹರಿಸಿದಳು. ಇದರಿಂದ ಯವಕ್ರೀತನಿಗೆ ಅಶುಚಿತ್ವವುಂಟಾಗಲು ರಾಕ್ಷಸನು ಯುವಕ್ರೀತನ ಮೇಲೆರಗಿದನು. ಕಮಂಡಲವು ಬಳಿಯಲ್ಲಿದ್ದರೆ ಯವಕ್ರೀತನು ಪವಿತ್ರಜಲದಿಂದ ಆ ರಾಕ್ಷಸನನ್ನು ಕೊಲ್ಲಲೂ, ಇನ್ನೂ ಅಂತಹ ಸಾವಿರಾರು ರಾಕ್ಷಸರನ್ನು ಸೃಷ್ಟಿಸಲೂ ಸಮರ್ಥನಾಗುತ್ತಿದ್ದನು. ಈಗ ತನಗೊದಗಿದ ಆಪತ್ತನ್ನು ನಿವಾರಿಸಲು ಯವಕ್ರೀತನಿಗೆ ಒಂದು ಉದ್ಧರಣೆಯಷ್ಟೂ ನೀರೂ ಸಾಕಾಗಿತ್ತು. ಹಾಗಾಗಿ ಆತನು ಸರೋವರದ ಬಳಿಗೆ ಓಡಿದನು. ರಾಕ್ಷಸನ ಮಾಯೆಯಿಂದಾಗಿ ಸರೋವರದಲ್ಲಿ ನೀರೇ ಇರಲಿಲ್ಲ. ಯುವಕ್ರೀತನು ನದಿಯ ಬಳಿಗೆ ಓಡಲು, ನದಿಯೂ ಒಣಗಿಹೋಗಿರುವಂತೆ ಆತನಿಗೆ ಕಂಡಿತು. ಭಯಭೀತನಾದ ಯವಕ್ರೀತನು ತಂದೆಯ ಅಗ್ನಿಹೋತ್ರ ಶಾಲೆಯನ್ನಾದರೂ ಪ್ರವೇಶಿಸಿದರೆ ತನ್ನ ಪ್ರಾಣ ಉಳಿಯಬಹುದೆಂದು ಆ ದಿಕ್ಕಿಗೆ ಮುಖ ಮಾಡಿದನು. ಆದರೆ ದುರ್ವಿಧಿ! ಅಗ್ನಿಹೋತ್ರಾಗಾರದ ಬಾಗಿಲು ಕಾಯುತ್ತಿದ್ದ, ಕುರುಡನಾದ, ನೀಚಜಾತಿಯ ಕಾವಲುಗಾರನು ಬಂದವನ್ಯಾರೆಂದು ತಿಳಿಯದೆ ಯವಕ್ರೀತನನ್ನು ತಡೆದನು. ಆತನ ಸ್ಪರ್ಶದಿಂದ ಯವಕ್ರೀತನು ಇನ್ನೂ ಅಶುಚಿಯಾಗಲು, ರಾಕ್ಷಸನು ಕ್ಷಣಮಾತ್ರದಲ್ಲಿಯೇ ಶೂಲದಿಂದ ಇರಿದು ಆತನನ್ನು ಕೊಂದುಬಿಟ್ಟನು.

ಅತ್ತಲಾಗಿ ಭರದ್ವಾಜ ಮಹರ್ಷಿಯು ನದೀತೀರದಲ್ಲಿ ಅಧ್ಯಯನ ಮತ್ತು ಆಹ್ನಿಕಗಳನ್ನು ಮುಗಿಸಿಕೊಂಡು ಹೋಮಕ್ಕಾಗಿ ಸಮಿತ್ಕುಶಗಳನ್ನು ತೆಗೆದುಕೊಂಡು ಆಶ್ರಮವನ್ನು ಪ್ರವೇಶಿಸಿದನು. ಅನುದಿನವೂ ತನ್ನನ್ನು ಸ್ವಾಗಿಸಲು ಬರುತ್ತಿದ್ದ ತ್ರಿವಿಧಾಗ್ನಿಗಳು ಇಂದು ಬಾರದಿರಲು ಚಕಿತನಾದ ಮಹರ್ಷಿಯು ಕಾರಣವೇನೆಂದು ಕಾವಲುಗಾರನನ್ನು ಪ್ರಶ್ನಿಸಿದನು. ಕಾವಲುಗಾರನಿಂದ ವಿಷಯವರಿತ ಭರದ್ವಾಜನು ಹತನಾದ ಮಗನನ್ನು ಕಂಡು ಬಹುದುಃಖಿತನಾದನು. ಆತನ ದೇಹವನ್ನಪ್ಪಿಕೊಂಡು ಗೋಳಾಡಿದನು.

ಮಗನ ವಿಯೋಗವನ್ನು ಸಹಿಸದ ಆತನೂ ದೇಹತ್ಯಾಗಕ್ಕೆ ನಿರ್ಣಯಿಸಿದನು. ಆದರೆ ಮಗನ ಮರಣಕ್ಕೆ ರೈಭ್ಯನೇ ಕಾರಣನೆಂದು ನಿಶ್ಚಯಿಸಿ ''ಪುತ್ರನ ಮರಣದಿಂದ

ಶೋಕಾಕ್ರಾಂತನಾದ ನಾನು ಯಾವ ರೀತಿ ಪ್ರಾಣತ್ಯಜಿಸುವೆನೋ- ಅದೇ ರೀತಿ ರೈಭ್ಯನೂ ತನ್ನ ಜ್ಯೇಷ್ಠ ಪುತ್ರನಾದ ಪರಾವಸುವಿನಿಂದಲೇ ಕೊಲ್ಲಲ್ಪಟ್ಟು ಮರಣಹೊಂದಲಿ'' ಎಂದು ರೈಭ್ಯನನ್ನು ಶಪಿಸಿದನು. ಬಳಿಕ ಭರದ್ವಾಜನು ಮಗನ ಶವಸಂಸ್ಕಾರವನ್ನು ಮಾಡಿ ಧಗಧಗನೆ ಉರಿಯುತ್ತಿದ್ದ ಬೆಂಕಿಯಲ್ಲಿ ತಾನೂ ಬಿದ್ದನು.

ಅದೇ ಸಮಯದಲ್ಲಿ ರೈಭ್ಯನ ಶಿಷ್ಯನೂ ಮಹಾಪ್ರತಾಪಶಾಲಿಯೂ ಆದ ಬೃಹದ್ಯುಮ್ನನೆಂಬ ಮಹಾರಾಜನು ತಾನು ಆರಂಭಿಸಿದ ಸತ್ರಕ್ಕೆ ಪುರೋಹಿತರಾದ ರೈಭ್ಯಪುತ್ರರನ್ನು ಕರೆಸಿಕೊಂಡನು. ಆಶ್ರಮದಲ್ಲಿ ರೈಭ್ಯನೂ, ಪರಾವಸುವಿನ ಭಾರ್ಯೆಯೂ ಇದ್ದರು. ಒಂದು ದಿನ ಪರಾವಸುವು ತನ್ನ ಪತ್ನಿಯನ್ನು ಕಾಣುವುದಕ್ಕಾಗಿ ತಾನೊಬ್ಬನೇ ಏಕಾಂತಿಯಾಗಿ ಆಶ್ರಮಕ್ಕೆ ಬರುತ್ತಿದ್ದನು. ಹಾದಿಯಲ್ಲಿ ಕೃಷ್ಣಚರ್ಮದಿಂದ ಆಚ್ಛಾದಿತವಾಗಿದ್ದ ಪ್ರಾಣಿಯೊಂದನ್ನು ಪರಾವಸುವು ಕಂಡನು. ರಾತ್ರಿಯಾಗಿದ್ದು, ನಿದ್ರೆಕಣ್ಣಿನಲ್ಲಿದ್ದ ಆತನು ಯಾವುದೋ ಹಿಂಸ್ರಮೃಗವಿರಬೇಕೆಂದು ಭ್ರಮಿಸಿ ತನ್ನ ಶರೀರ ಸಂರಕ್ಷಣಾರ್ಥವಾಗಿ ಅದನ್ನು ಕೊಂದನು. ದುರದೃಷ್ಟ! ಕೃಷ್ಣಚರ್ಮದಿಂದ ಆಚ್ಛಾದಿತನಾಗಿದ್ದವನು ಪರಾವಸುವಿನ ತಂದೆಯೇ ಆಗಿದ್ದನು. ಇಂತು ಭರದ್ವಾಜನ ಶಾಪವು ದಿಟವಾಯಿತು. ಬಹುದುಃಖಿತನಾದ ಪರಾವಸುವು ತಂದೆಯ ದಹನಾದಿ ಸಂಸ್ಕಾರ ಕ್ರಿಯೆಗಳನ್ನು ಮುಗಿಸಿದನು.

ಬಳಿಕ ರಾಜನ ಯಾಗ ಮಂಟಪಕ್ಕೆ ಹೋದ ಪರಾವಸುವು ಅರ್ವಾವಸುವಿಗೆ ಹೇಳಿದನು–'ಅರ್ವಾವಸುವೇ, ನನ್ನ ಸಹಾಯವಿಲ್ಲದೇ ನೀನೊಬ್ಬನೇ ಈ ಸತ್ರವನ್ನು ಪೂರ್ಣಗೊಳಿಸಲಾರೆ. ನಾನಾದರೋ ಬ್ರಹ್ಮಹತ್ಯಾದೋಷದಿಂದ ಕೂಡಿದ್ದೇನೆ. ಆದುದರಿಂದ ಈ ದೋಷಪರಿಹಾರಾರ್ಥವಾದ ವ್ರತಾನುಷ್ಠಾನಗಳನ್ನು ನೀನು ನನಗಾಗಿ ಮಾಡುವೆಯೆಂದಾದರೆ ನಾನೊಬ್ಬನೇ ನಿನ್ನ ಸಹಾಯವಿಲ್ಲದೇ ಈ ಸತ್ರವನ್ನು ಮುಗಿಸಬಲ್ಲೆನು'. ಅರ್ವಾವಸುವು ಅದಕ್ಕೊಪ್ಪಿದನು. ಪರಾವಸುವಿನ ಸಲುವಾಗಿ ಬ್ರಹ್ಮಹತ್ಯಾ ಪಾತಕ ನಿವಾರಣೆಗಾಗಿ ಮಾಡಬೇಕಾದ ಪ್ರಾಯಶ್ಚಿತ್ತವನ್ನು ಪೂರೈಸಿ, ಪರಾವಸುವನ್ನು ಆ ಮಹಾಪಾಪದಿಂದ ವಿಮೋಚನೆಗೊಳಿಸಿ ಅರ್ವಾವಸುವು ಬೃಹದ್ಯುಮ್ನನ ಯಾಗಮಂಟಪಕ್ಕೆ ಬಂದನು.

ಬಂದ ಅರ್ವಾವಸುವನ್ನು ಕಂಡ ಪರಾವಸುವು ರಾಜನನ್ನು ಕುರಿತು ಹೇಳಿದನು. ''ಈತನು ಬ್ರಾಹ್ಮಣ ಹಂತಕನು. ಇವನೊಮ್ಮೆ ನೋಡಿದರೂ ಯಾಗವು ಕೆಟ್ಟುಹೋಗುವ ಸಂಭವವುಂಟು. ಬ್ರಹ್ಮಹತ್ಯಾ ಪಾತಕಿಯ ದೃಷ್ಟಿಯು ಅಷ್ಟೊಂದು ಕ್ರೂರವಾದುದು''. ಪರಾವಸುವಿನ ಮಾತನ್ನು ಕೇಳಿದ ರಾಜನು ಅರ್ವಾವಸುವನ್ನು ಭಟರ ಮೂಲಕ ಹೊರಟಿದ್ದನು. ಅರ್ವಾವಸುವು ನಿಜವನ್ನು ಎಷ್ಟೇ ಬಾರಿ ಹೇಳಿದರೂ, ಯಾರೂ ಆತನ ಮಾತನ್ನು ನಂಬಲಿಲ್ಲ. 'ಒಬ್ಬರು ಮಾಡಿದ ಪಾತಕಕ್ಕೆ ಇನ್ನೊಬ್ಬರು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುತ್ತಾರೆಯೇ' ಎಂದು ಹೇಳಿ ಅವನನ್ನು ಬಾರಿ ಬಾರಿಗೂ ನಿಂದಿಸಿ ಹೊರದಬ್ಬಿದರು.

ಬಹುದುಃಖಿತನಾದ ಅರ್ವಾವಸುವು ಮೌನಿಯಾಗಿ ಕಾಡಿಗೆ ಹಿಂತಿರುಗಿದನು. ಅತ್ಯಂತ ರಹಸ್ಯವಾಗಿದ್ದ ಸೂರ್ಯಾಷ್ಟಾಕ್ಷರೀ ಮಂತ್ರವು ಅವನ ಸ್ಮೃತಿಪಥಕ್ಕೆ ಬಂತು. ಅದನ್ನೇ ಪುರಶ್ಚರಣೆ ಮಾಡುತ್ತಾ ಸೂರ್ಯನನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಲು ಆರಂಭಿಸಿದನು. ಈತನ ತಪಸ್ಸಿನಿಂದಾಗಿ ಸೂರ್ಯನು ಪ್ರತ್ಯಕ್ಷನಾಗಿ ಅರ್ವಾವಸುವನ್ನು ಅನುಗ್ರಹಿಸಿದನು. ಇಂದ್ರಾದಿ ದೇವತೆಗಳೂ ಆತನ ವಿಷಯದಲ್ಲಿ ಪ್ರಸನ್ನರಾಗಿ, ಮಹಾಮಹಿಮನಾದ ಅರ್ವಾವಸುವನ್ನೇ ಯಜ್ಞಕ್ಕೆ ಮುಖ್ಯ ಪುರೋಹಿತನನ್ನಾಗಿ ಇಟ್ಟುಕೊಳ್ಳುವಂತೆಯೂ ಕಪಟಿಯಾದ ಪರಾವಸುವನ್ನು ಹೊರದೂಡುವಂತೆಯೂ ಬೃಹದ್ಯುಮ್ನನಿಗೆ ಆದೇಶವಿತ್ತರು, ಬೇಕಾದ ವರಗಳನ್ನು ಕೇಳಿಕೊಳ್ಳುವಂತೆ ದೇವತೆಗಳು ಕೇಳಲು ಅರ್ವಾವಸುವು - ''ನನ್ನ ತಂದೆಯು ಪುನಃ ಜೀವಂತನಾಗಲಿ. ನನ್ನ ಸಹೋದರನ ಬ್ರಹ್ಮಹತ್ಯಾಪಾಪದ ವಿಮೋಚನೆಯಾಗಲಿ. ಅವನಿಗೆ ಪಿತೃವಧೆಯ ಸ್ಮರಣೆಯೇ ಬಾರದಿರಲಿ. ಭರದ್ವಾಜ ಯವಕ್ರೀತರು ಜೀವಂತರಾಗಲಿ. ಸೂರ್ಯಮಂತ್ರದ ಪುನಶ್ಚರಣೆ ಮಾಡಿದವರಿಗೆ ಅಪಾರವಾದ ಫಲವು ದೊರೆಯಲಿ'' ಎಂದು ಕೇಳಿಕೊಂಡನು. ಆ ಎಲ್ಲ ವರಗಳಿಗೂ ದೇವತೆಗಳು ''ತಥಾಸ್ತು'' ಎಂದು ಪ್ರತಿ ವಚನವನ್ನಿತ್ತರು. ನಿದ್ದೆಯಿಂದೆದ್ದವರಂತೆ ರೈಭ್ಯ ಭರದ್ವಾಜ-ಯವಕ್ರೀತರು ಜೀವಂತರಾದರು.

ಯವಕ್ರೀತನು ದೇವತೆಗಳನ್ನು ಪ್ರಶ್ನಿಸಿದನು - ''ನಾನು ಎಲ್ಲ ವೇದಗಳನ್ನು ಸಾಂಗವಾಗಿ ತಿಳಿದಿದ್ದರೂ, ತಪಸ್ವಿಯಾಗಿದ್ದರೂ ನನ್ನನ್ನು ಕೊಲಲ್ಲು ರೈಭ್ಯನಿಗೆ ಹೇಗೆ

ಸಾಧ್ಯವಾಯಿತು?'' - ದೇವತೆಗಳು ಉತ್ತರಿಸಿದರು - ''ವೇದಾಧ್ಯಯನವನ್ನು ಸಂಪ್ರದಾಯಬದ್ಧವಾಗಿ ಮಾಡಬೇಕು. ನೀನಾದರೋ ಸಂಪ್ರದಾಯಾನುಸಾರವಾಗಿ, ಕಷ್ಟಪಟ್ಟು ವೇದಾಧ್ಯಯನವನ್ನು ಮಾಡಿಲ್ಲ. ವರಗಳ ಮೂಲಕ ವೇದಗಳು ನಿನ್ನಲ್ಲಿ ಉಪಸ್ಥಿತವಾಗಿದೆ. ಆದರೆ ರೈಭ್ಯನು ಮಾತ್ರ ಸಂಪ್ರದಾಯಾನುಕ್ರಮದಿಂದಲೇ ವೇದಾಧ್ಯಯನವನ್ನು ಮಾಡಿದ್ದಾನೆ. ಕಷ್ಟಪಟ್ಟು ಗುರುಶುಶ್ರೂಷೆ ಮಾಡಿ ಗುರುವಿನ ಒಲುಮೆಗೂ ಪಾತ್ರನಾಗಿದ್ದಾನೆ. ಅನೇಕ ವರ್ಷಗಳ ಕಾಲ ಇವನು ಶ್ರಮಿಸಿ ವೇದ ವೇದಾಂಗಗಳನ್ನು ತಿಳಿದಿರುವನಾದ್ದರಿಂದ ಇಂತಹವನಲ್ಲಿ ಈ ವಿಧವಾದ ಶಕ್ತಿಯಿರುವುದು ಸ್ವಾಭಾವಿಕ'' ಈ ರೀತಿ ನುಡಿದ ದೇವತೆಗಳು ಸ್ವಸ್ಥಾನಗಳಿಗೆ ತೆರಳಿದರು.



## ಚಂಡತಾಪಸ ಪರಾಶರ

ಕೋಸಲದ ಅರಸು ಮಿತ್ರಸಹ ಬೇಟೆಗೆ ಹೋದಾಗ ಒಂದು ದಿನ ಹುಲಿ ದಂಪತಿಗಳ ರೂಪ ತೆಗೆದುಕೊಂಡು ವನದಲ್ಲಿ ವಿಹಾರ ಮಾಡುವ ರಾಕ್ಷಸ ಜೊಡಿಗೆ ಬಾಣ ಬಿಟ್ಟ. ಹೆಣ್ಣು ಹುಲಿ ಸತ್ತು ಗಂಡು ಹುಲಿಯ ರೂಪ ಧರಿಸಿದ ದೈತ್ಯ ಪಾರಾದ. ಹೆಂಡತಿಯನ್ನು ಕೊಂದ ಮಿತ್ರಸಹನ ಮೇಲೆ ಹೇಗಾದರೂ ಮಾಡಿ ಸೇಡು ತೀರಿಸಿಕೊಳ್ಳಬೇಕೆಂದು ಆ ರಾಕ್ಷಸ ಮಿತ್ರ ಸಹನ ಮನೆಯಲ್ಲಿ ಅಡಿಗೆಯವನ ರೂಪದಿಂದ ಚಾಕರಿಗೆ ಬಂದುನಿಂತ.

ಮುಂದೆ ಒಂದುದಿನ ಮಿತ್ರಸಹನ ಮನೆಗೆ ಮಹರ್ಷಿ ವಸಿಷ್ಠರು ಭೋಜನಕ್ಕೆ ಬಂದಿದ್ದರು. ಆ ದೈತ್ಯ ಪಾಚಕನು ಇದೇ ಸಮಯವೆಂದರಿತು ವಸಿಷ್ಠರ ಎಲೆಯಲ್ಲಿ ಅಂದು ಮಾಂಸದ ಅಡಿಗೆಯನ್ನು ಮಾಡಿ ತಂದು ಬಡಿಸಿದ. ಅದನ್ನು ಕಂಡು ವಸಿಷ್ಠರಿಗೆ ಬ್ರಹ್ಮಾಂಡ ಕೋಪ ಬಂದಿತು. ತಮ್ಮಂಥ ಮುನಿಗಳನ್ನು ಮನೆಗೆ ಕರೆದು ಮಾಂಸದ ಅಡಿಗೆ ಬಡಿಸುವದೆ! ಏನಿದು ಅನ್ಯಾಯ! ನಾನೇನು ರಾಕ್ಷಸನೇ! ಎಂದಂದು, ನನಗೆ 'ಮಾಂಸಾಹಾರ ಹಾಕಿದ ನೀನು ರಾಕ್ಷಸನಾಗು' ಎಂದು ಆ ಮಹಾರಾಜ ಮಿತ್ರಸಹನಿಗೆ ಅವರು ಶಾಪಕೊಟ್ಟರು.

ಕೂಡಲೆ ಅಯೋಧ್ಯೆಯ ಅರಸ ರಾಕ್ಷಸನಾದ, ಆದರೆ ಅವನು ಅಂದು ಅಡಿಗೆಯವನಿಗೆ ಮಾಂಸಪಾಕವನ್ನು ಮಾಡಲಿಕ್ಕೆ ಹೇಳಿರಲಿಲ್ಲ. ಅದು ಪೂರ್ತಿಯಾಗಿ ಪಾಚಕನದೇ ತಪ್ಪಾಗಿತ್ತು. ''ತನ್ನದೇನೂ ತಪ್ಪಿಲ್ಲದಿದ್ದರೂ ವಸಿಷ್ಠರು ತನಗೆ ಶಾಪಕೊಟ್ಟು ರಾಕ್ಷಸನನ್ನು ಮಾಡಿದರು. ಇದಕ್ಕೆ ಏನಾದರೂ ಪ್ರತೀಕಾರಮಾಡಬೇಕೆಂದು'' ಅವನಿಗೆ ಮನಸ್ಸಿನಲ್ಲಿ ಕಟೆಯುತ್ತಿತ್ತು.

ಅವನು ಹೇಗೂ ರಾಕ್ಷಸನಾಗಿದ್ದ. ಮನುಷ್ಯರನ್ನು ಮುರಿದು ತಿನ್ನುವದು ಅವನ ಸ್ವಭಾವವೇ ಆಗಿತ್ತು. ಕೊನೆಗೆ ಒಂದು ದಿನ ವಸಿಷ್ಠರ ಮಕ್ಕಳಾದ ಶಕ್ತಿ ಮುಂತಾದ ಮುನಿಕುಮಾರರನ್ನು ಅವನು ಕಂಡ. ಕೂಡಲೇ ಅವರ ರಾಕ್ಷಸೀ ಕ್ರೌರ್ಯಕ್ಕೆ ಜನ್ಮಾಂತರದ ಸೇಡಿನ ಭಾವನೆಯೂ ಕೂಡಿ ಅವನು ಆ ವಸಿಷ್ಠ ಪುತ್ರರನ್ನು ಹುಲಿಯಂತೆ ಮೈಮೇಲೆ ಎರಗಿ ಕೊಂದ. ಅವರ ರಕ್ತ ಮಾಂಸಗಳನ್ನು ತಿಂದ. ಇದಕ್ಕೆ ವಿಶ್ವಾಮಿತ್ರರ ಪ್ರೋತ್ಸಾಹನೆಯೂ ಇದ್ದಿತೆಂದು ಕೆಲವು ಪುರಾಣಗಳಲ್ಲಿ ಬಂದಿದೆ. ಅಂತೂ ''ವಸಿಷ್ಠ ಪುತ್ರರಾದ ಶಕ್ತಿ ಮುಂತಾದ ಮಹಾಮುನಿಗಳ ಮರಣಕ್ಕೆ ರಾಕ್ಷಸರೇ ಕಾರಣರಾದರು'' ಎಂಬ ಅಪಕೀರ್ತಿ ಮಾತ್ರ ಜನರಲ್ಲಿ ದೃಢಮೂಲವಾಯಿತು. ವಸಿಷ್ಠ ಪುತ್ರ ಶಕ್ತಿ ಋಷಿಯೂ ಅವನ ನೂರಾರು ಸಹೋದರರೂ ಈ ಪ್ರಕರಣದಲ್ಲಿ ಎಲ್ಲರೂ ಸತ್ತುಹೋದರು.

ಇದರಿಂದ ಮುಪ್ಪಿನ ಕಾಲದಲ್ಲಿ ವಸಿಷ್ಠರಿಗೆ ಬಹಳೇ ದುಃಖವಾಯಿತು. ಇಷ್ಟು ದುಃಖವಾದರೂ ಬ್ರಹ್ಮರ್ಷಿಗಳಾದ ಅವರು ಈ ಅನರ್ಥಕ್ಕೆಲ್ಲ ಕಾರಣನಾದ ಆ ದೈತ್ಯನಿಗೆ ಶಾಪವನ್ನೂ ಕೊಡುವುದಿಲ್ಲ, ಸಿಟ್ಟಿಗೂ ಏಳುವುದಿಲ್ಲ. ಆದರೆ ಅವರಿಗೆ ಚಿಕ್ಕ ವಯಸ್ಸಿನ ಮಕ್ಕಳೆಲ್ಲರೂ ಆಕಸ್ಮಿಕವಾಗಿ ಪಟಪಟ ಬಿದ್ದು ತಮ್ಮ ಕಣ್ಣೆದುರೇ ಸತ್ತು ಹೋದದ್ದರಿಂದ ಶೋಕ ಮಾತ್ರ ವಿಪರೀತವಾಗುತ್ತದೆ. ಆ ದುಃಖವನ್ನು ತಾಳಲಾರದೇ ಒಮ್ಮೆ ಅವರು ಅಲ್ಲಿಯೇ ತುಂಬಿ ಹರಿಯುವ ನದಿಯಲ್ಲಿ ಹಗ್ಗ ಕಟ್ಟಿಕೊಂಡು ಹಾರಿಬಿಟ್ಟರು. ಆದರೆ ಆ ನದಿಗೆ ಇಂಥ ಪುಣ್ಯಾತ್ಮರನ್ನು ಮುಳುಗಿಸುವ ಧೈರ್ಯವಾಗಲಿಲ್ಲ. ಅದು ತನ್ನ ನೀರಿನ ಸುಳಿ ಬೆರಳುಗಳಿಂದ ಅವರು ತಾವಾಗಿ ಕಟ್ಟಿಕೊಂಡ ಹಗ್ಗದ ಪಾಶ ಕಟ್ಟುಗಳನ್ನೆಲ್ಲ ಬಿಚ್ಚಿ ಮೆಲ್ಲನೆ ತನ್ನ ತೆರೆಯ ತೊಟ್ಟಿದಲ್ಲಿ

ತೂಗಾಡಿಸುತ್ತ ತೀರದಲ್ಲಿರುವ ಅವರ ಆಶ್ರಮದ ಮುಂದೆ ತಂದಿಳಿಸಿತು. ಅವರ ಹಗ್ಗದ ಪಾಶಗಳನ್ನೆಲ್ಲ ಬಿಚ್ಚಿ ಅವರನ್ನು 'ವಿಪಾಶ' ರನ್ನಾಗಿ ಮಾಡಿದ್ದರಿಂದ ಆ ನದಿಗೆ 'ವಿಪಾಶಾ' ಎಂದು ಹೆಸರಾಯಿತು.

ತಾವು ಜಲ ಸಮಾಧಿ ಹೊಂದುವದು ದೇವರ ಚಿತ್ತಕ್ಕೆ ಬಂದಿಲ್ಲವೆಂದು ತಿಳಿದ ವಸಿಷ್ಠರು ಆಶ್ರಮದೊಳಗೆ ಬಂದರು. ಅಲ್ಲಿರುವ ಶಕ್ತಿಋಷಿಯ ಹೆಂಡತಿಯಾದ ಅದೃಶ್ಯಂತಿಯು ದುಃಖದಿಂದ ಬಿಕ್ಕುತ್ತ ನೆಲದ ಮೇಲೆ ಬಿದ್ದಿದ್ದಳು. ದುಃಖದಗ್ಧಳಾದ ಆ ಸೊಸೆಯನ್ನು ಎಂತು ಸಂತೈಸುವದೋ ವಸಿಷ್ಠರಿಗೆ ತಿಳಿಯದಂತಾಯಿತು. ಪ್ರಾಯದ ತುಂಬ ಜೀವನದಲ್ಲಿಯೇ ಪತಿಯನ್ನು ಕಳೆದುಕೊಂಡ ಆ ಹೆಣ್ಣು ಜೀವ ಕಣ್ಣೀರಿನ ಕಡಲಿನಲ್ಲಿ ಕುದಿಯುತ್ತಿತ್ತು. ಆಶ್ರಮದ ಇನ್ನೊಂದು ಮೂಲೆಯಲ್ಲಿ ನೂರು ಮಕ್ಕಳನ್ನು ಕಳೆದುಕೊಂಡ ಅರುಂಧತಿಯ ತಾಯ್ಗರಳು ನಿಟ್ಟುಸುರಿನಲ್ಲಿ ಬೇಯುತ್ತಿತ್ತು. ಮಕ್ಕಳಿಲ್ಲದ ಮನೆಯೆಲ್ಲ ಮಸಣದಂತೆ 'ಬಿಕೋ' ಎಂದು ಭಣಗುಡುತ್ತಿತ್ತು.

ಈ ದುಃಖದ ದಳ್ಳುರಿಯಲ್ಲಿ ವಸಿಷ್ಠರಿಗೆ ಹೆಚ್ಚು ಹೊತ್ತು ನಿಲ್ಲುವದಾಗಲಿಲ್ಲ. "ಈ ಮನೆ, ಈ ಆಶ್ರಮ ಸಾಕೇಸಾಕು. ಎಲ್ಲಿಯಾದರೂ ದೂರದ ದರಿ ಗುಹೆಗೆ ಹೋಗಿ ಅಲ್ಲಿ ನಿಂತು ತಪಸ್ಸು ಮಾಡಿ ಪುತ್ರಶೋಕದಿಂದ ಸಂತಪ್ತವಾದ ಮನಸ್ಸಿಗೆ ಶಾಂತಿಯನ್ನು ಉಂಟು ಮಾಡಬೇಕು. ಈ ಮನೆಯಲ್ಲಿಯಾದರೂ ಏನಿದೆ! ಯಾರಿದ್ದಾರೆ! ಯಾರಿಗಾಗಿ ನಾನಿಲ್ಲಿ ಇರಬೇಕು" ಎಂದಂದು ಅವರು ಬಂದಂತೆಯೇ ಅಲ್ಲಿಂದ ಹೊರಟುಬಿಟ್ಟರು.

ಆಗ ನೆಲಕ್ಕೆ ಬಿಕ್ಕುತ್ತ ಬಿದ್ದ ಅದೃಶ್ಯಂತಿಯು ತಲೆ ಎತ್ತಿ ಮಾವನರ ಕಡೆಗೆ ನೋಡಿದಳು. ಆ ಮುಪ್ಪಿನ ಮುದುಕರು ದುಃಖದ ಭಾರದಿಂದ ನಡುಗುತ್ತ ಮನೆಬಿಟ್ಟು ನಡೆದಿದ್ದರು. ಸೊಸೆಗೆ ಗಾಬರಿಯಾಯಿತು. ಹೊರಗಿನ ಛಳಿ ಮಳೆ ಬಿಸಿಲು ಬಿರುಗಾಳಿಗಳಿಗೆ ಈ ಹಣ್ಣು ಜೀವ ತಾಳೀತೆ! ತಡೆದೀತೇ!

ಮತ್ತೆಲ್ಲಿ ಹೋಗಿ ತಮ್ಮ ಜೀವಕ್ಕೆ ಏನು ಮಾಡಿಕೊಳ್ಳುವರೋ ಏನೋ" ಎಂದು ಗಾಬರಿಯಾಗಿ ತನ್ನ ದುಃಖವನ್ನು ಮರೆತು ಅವಳೇ ಎದ್ದಳು. ಅವಳು ಆಗ ತುಂಬ

ಗರ್ಭಿಣಿ. ಹೊಟ್ಟೆಯ ಭಾರದಿಂದ ಅವಳಿಗೆ ಹೆಜ್ಜೆ ಎತ್ತಿಡಲೂ ಆಗುತ್ತಿದ್ದಿಲ್ಲ. ಆದರೂ ಆ ಮುದುಕ ಮಾವನವರ ಮೇಲಿನ ಮಮತಾ ಭಕ್ತಿಗಳಿಂದ ಅವಳು ಅವರಿಗೆ 'ಬೇಡ ಬೇಡ' ಎಂದು ಹೇಳುತ್ತ ಅಳುತ್ತ ಬೆನ್ನು ಹತ್ತಿದಳು. ವಸಿಷ್ಠರು ಅವಳ ಕೂಗುಕರೆಗಳಿಗೆ ಓಗೊಡದೆ ಹಾಗೇ ಹೊರಟು ಬಿಟ್ಟಿದ್ದರು ಗುರಿ ಇಲ್ಲದ ಅನಂತದೆಡೆಗೆ.

ಆಗ ಹಿಂದಿನಿಂದ ಯಾರೋ ''ತಾತ ತಾತ'' ಎಂದು ಕೂಗಿ ವೇದಋಕ್ಕುಗಳನ್ನು ಪಠಿಸಿದಂತಾಯಿತು. ಕೂಡಲೇ ವಸಿಷ್ಠರು ಬೆಚ್ಚಿ ಹಿಂದೆ ನೋಡಿದರು. ಯಾರೂ ಇರಲಿಲ್ಲ. 'ಏನಾದರೂ ತಮಗೆ ಹೆಳವಂಡವೋ ಏನೋ' ಎಂದಂದು ಅವರು ಮತ್ತೆ ಮುಂದೆ ನಡೆದರು. ಆಗ ಮತ್ತೆ ಯಾರೋ ಕರುಣೆಯಿಂದ ಕೂಗಿ ಮಂತ್ರ ಹೇಳುತ್ತಲಿದ್ದಂತಾಯಿತು. ಆಗ ಅವರು ಚೆನ್ನಾಗಿ ಹಿಂದೆ ಹೊರಳಿ ನೋಡಿದರು. ವಸಿಷ್ಠ ಮಂಡಲದ ಋಕ್ಕುಗಳನ್ನು ತಮ್ಮ ಮನೆತನದ ಮೈತ್ರಾ ವರುಣೀ ಪದ್ಧತಿಯಿಂದ ಯಾರೋ ಸ್ಪಷ್ಟವಾಗಿ ಪಠಿಸುವದು ಅವರಿಗೆ ಕೇಳಿಸಿತು.

ಅವರ ಸೊಸೆಯ ಹೊಟ್ಟೆಯಲ್ಲಿರುವ ಶಕ್ತಿಯ ಮಗು ಆಗ ವೇದ ಮಂತ್ರಗಳನ್ನು ಸ್ವರ ಪೂರ್ವಕವಾಗಿ ಅನ್ನತೊಡಗಿತ್ತು. ಅದನ್ನು ಕೇಳಿ ಅವರಿಗೆ ಅತ್ಯಂತ ಆಶ್ಚರ್ಯವೂ ಆಯಿತು, ಆನಂದವೂ ಆಯಿತು. ಹಾಗಾದರೆ ಆಶ್ರಮದಲ್ಲಿ ಇನ್ನೂ ತಮಗೆ ಕರ್ತವ್ಯಾಂಶವಿದೆಯೆನಿಸಿತು ವಸಿಷ್ಠರಿಗೆ. ಗರ್ಭದಲ್ಲಿದ್ದಾಗಲೇ ಇಷ್ಟು ಸುಸ್ವರವಾಗಿ ವೇದ ಮಂತ್ರಗಳನ್ನು ಹೇಳಬಲ್ಲ ಈ ತಮ್ಮ ಮೊಮ್ಮಗ ಮುಂದೆ ಮನುಕುಲದ ಜ್ಞಾನ ಚಿಂತಾಮಣಿಯೇ ಆಗಬಹುದನ್ನಿಸಿತು. ಕೂಡಲೇ ಅವರು ಆಶ್ರಮಕ್ಕೆ ಮರಳಿ ಬಂದರು. ಕೆಲದಿನಗಳ ಮೇಲೆ ಆ ಅದೃಶ್ಯಂತಿಯ ಹೊಟ್ಟೆಯಿಂದ ಪರಾಶರರು ಜನಿಸಿದರು.

ಪಿಂಡವಿದ್ದಾಗಲೇ ಬ್ರಹ್ಮಾಂಡ ಜ್ಞಾನ ಪಿಚಂಡವಾದ ಆ ಆಗರ್ಭಪಂಡಿತ ಮಗು ಹುಟ್ಟಿದಾಗ ಅವರ ದುರಂತ ದುಃಖದ ಮೇಲೆ ತುಸು ತೆರೆಯೆಳೆದಂತಾಯಿತು. ವಸಿಷ್ಠರು ಆ ಮಗುವನ್ನು ಅತ್ಯಂತ ಕಕುಲಾತಿಯಿಂದ ಸಾಕಿಸಲುಹಿದರು. ತಂದೆಯಿಲ್ಲದ ತಬ್ಬಲಿಯಾದ ಆ ಮಗು ವಸಿಷ್ಠರನ್ನೆ ತಂದೆಯೆಂದು ಬಗೆದು ''ತಾತ

ತಾತ ಅಪ್ಪ ತಂದೆ'' ಎಂದುಸಂಬೋಧಿಸುತ್ತಿತ್ತು. ಪರಾಶರರು ವಸಿಷ್ಠರಿಗೆ ''ತಂದೆ, ಅಪ್ಪ'' ಎಂದು ಕೂಗಿದಾಗಲೆಲ್ಲ ಅದೃಶ್ಯಂತಿಗೆ ಗಂಡನ ನೆನಪಾಗಿ ಕಣ್ಣಿನಲ್ಲಿ ನೀರು ಚಿಮ್ಮುತ್ತಿತ್ತು. ಹೃದಯದಲ್ಲಿಯ ದುಃಖದ ಕುಂಡವನ್ನು ಮತ್ತೆ ಊದಿದಂತಾಗಿ ಉರಿಗೊಳ್ಳುತ್ತಿತ್ತು. ಮುಂದೆ ಅವನು ದೊಡ್ಡವನಾದಂತೆ ಅದೃಶ್ಯಂತಿಯು ಆ ಮಗುವಿಗೆ 'ವಸಿಷ್ಠರು ನಿನ್ನ ತಂದೆಯಲ್ಲ. ಅವರನ್ನು ಅಜ್ಜ ಎಂದು ಕರೆ' ಎಂದು ಕೇಳಿದನು. ಆಗ ಅದೃಶ್ಯಂತಿಯ ಹೃದಯದಲ್ಲಿ ದುಃಖದ ದಳ್ಳುರಿಯು ಭಗ್ಗ್ ಎಂದು ಹೊತ್ತು ಧಗಧಗಿಸಹತ್ತಿತು.

ಆಗ ಅವಳು ತನ್ನ ಮಗನಿಗೆ ರಾಕ್ಷಸರು ನಿನ್ನ ತಂದೆಯನ್ನು ಕೊಂದರೆಂದು ಹೇಳಿ ಹಿಂದಿನ ದುರಂತವನ್ನು ದಾರುಣವಾಗಿ ವಿವರಿಸಿದಳು.

ಅದನ್ನು ಕೇಳಿ ಪ್ರಬುದ್ಧನಾದ ಪರಾಶರನ ಪಿತ್ತ ಕೆರಳಿ ಚಿತ್ತವು ಸಂತಪ್ತವಾಯಿತು. ಅವನ ತರುಣ ವಯಸ್ಸು ತಂದೆಯನ್ನು ಕೊಂದ ಆ ದುರುಳ ದಾನವಕುಲದ ಮೇಲೆಯೇ ಸೇಡು ತೀರಿಸಿಕೊಳ್ಳಲಿಕ್ಕೆ ಹಾತೊರೆಯಹತ್ತಿತು.

ಸೇಡಿನ ಸಿಡಿಲ ಸವಾರಿಯೇರಿದ ಆ ಮಿಂಚಿನ ಮರಿಗೆ ಮಂತ್ರಸಿದ್ಧಿ ಹಾಗೂ ತಪೋಬಲಗಳು ಬೆಂಬಲವಾಗಿ ನಿಂತವು. ತಮ್ಮ ತಂದೆಯನ್ನು ಕೊಂದ ರಾಕ್ಷಸರ ಕುಲಕ್ಕೆ ಕುಲವನ್ನೆ ಸಮೂಲವಾಗಿ ನಾಶಮಾಡಿಬಿಡಬೇಕೆಂದು ಅವನು ಸಂಕಲ್ಪಿಸಿದ.

ಅದಕ್ಕಾಗಿ ಹಿಂದಕ್ಕೆ ಜನಮೇಜಯ ರಾಜನು ಸರ್ಪಯಾಗ ಮಾಡಿದಂತೆ ಈ ಪರಾಶರನೂ ರಾಕ್ಷಸಯಾಗ ಮಾಡಿ ಆ ದೈತ್ಯ ಸತ್ರದಲ್ಲಿ ಜಗತ್ತಿನಲ್ಲಿಯ ರಾಕ್ಷಸರೆಲ್ಲರನ್ನೂ ಹಾಕಿ ಸುಟ್ಟು ಬಿಡಬೇಕೆಂದು ನಿರ್ಧರಿಸಿದ. ಅದರ ತಯಾರಿಯನ್ನೂ ಮಾಡಿದ.

ಅದನ್ನು ಕೇಳಿ ವೃದ್ಧರಾದ ವಸಿಷ್ಠರು ಆ ಮೊಮ್ಮಗನ ಹತ್ತಿರ ಬಂದು ''ಮಗು, ಹೀಗೆ ಇಡೀ ರಾಕ್ಷಸರ ಕುಲವನ್ನೇ ಉರಿಸಿಬೂದಿ ಮಾಡುವ ಈ ದೈತ್ಯಮೇಧ ಅಥವಾ ದಾನವಸತ್ರವನ್ನು ನೀನು ಪ್ರಾರಂಭ ಮಾಡಬೇಡ. ನಿನ್ನ ತಂದೆಯನ್ನು ಒಬ್ಬ ದೈತ್ಯನು ಕೊಂದರೆ ಉಳಿದ ದೈತ್ಯ ರಾಕ್ಷಸರು ಏನು ಅಪರಾಧ ಮಾಡಿದ್ದಾರೆ! ಒಬ್ಬನ ತಪ್ಪಿಗಾಗಿ

ಇಡೀ ಆ ಕುಲವನ್ನೇ ಸಂಹಾರ ಮಾಡುವದು ಎಲ್ಲಿಯ ನ್ಯಾಯ! ಇದು ಹರಿ ಪ್ರೀತಿಕಾರಿಕವಾದ ಕರ್ಮವಲ್ಲ. ಶ್ರೀಹರಿಗೆ ಪ್ರೀತ್ಯಾಗುವ ಕಾರ್ಯವೇ ಕರ್ಮ. ಅದೇ ಧರ್ಮ. 'ತತ್ ಕರ್ಮ ಹರಿತೋಷಂ ಯತ್' ಎಂದು ಶಾಸ್ತ್ರದಲ್ಲಿ ಹೇಳಿದ್ದಾರೆ. ಬ್ರಾಹ್ಮಣರಾದವರು ಇಂಥ ಹರಿ ಪ್ರೀತಿಕರ ಕರ್ಮಗಳನ್ನು ಮಾಡಬೇಕು. ಸಿಟ್ಟು, ಸೆಡವು, ಸೇಡು ಇವಾವೂ ಬ್ರಾಹ್ಮಣರಲ್ಲಿ ಅದರಲ್ಲಿಯೂ ಋಷಿ ಕುಲದವರಲ್ಲಿ ಸರ್ವಥಾ ಇರತಕ್ಕದಲ್ಲ.

ಹಿಂದೆ ಔರ್ವನೆಂಬ ಋಷಿ ಕುಮಾರನು ಹೈಹಯವಂಶದ ಅರಸರು ತಮ್ಮ ಪೂರ್ವಜರಾದ ಪಿತೃಗಳನ್ನು ಕೊಂದರೆಂದು ಸಿಟ್ಟಿನಿಂದ ಅವರೆಲ್ಲರನ್ನೂ ತನ್ನ ತಪಃಶಕ್ತಿಯಿಂದ ಸುಟ್ಟುಬಿಡಬೇಕೆಂದು ಸಿದ್ಧನಾಗಿದ್ದನು. ಆಗ ಅವನ ಪಿತೃಗಳೇ ಸತ್ತವರು ಅಲ್ಲಿಗೆ ಎದ್ದು ಬಂದು 'ನಾವು ಭಗವಂತನ ಸಂಕಲ್ಪದಂತೆ ನಮ್ಮ ಆಯುರ್ಮಾನಕ್ಕೆ ಅನುಸಾರವಾಗಿಯೇ ಸತ್ತಿದ್ದೇವೆ. ಈಹೈಹಯ ರಾಜರು ನಿಮಿತ್ತ ಮಾತ್ರ. ಕಾಲನಾಮಕ ಶ್ರೀಹರಿಯೇ ಎಲ್ಲರ ಜನನಮರಣಗಳಿಗೆ ಕಾರಣ. ಆದುದರಿಂದ ನೀನು ಅವರನ್ನುಕೊಲ್ಲಲಿಕ್ಕೆ ಹೋಗಬೇಡ' ಎಂದು ಹೇಳಿದರು. ಆಗ ಅವರು ತನ್ನ ಕೋಪಾಗ್ನಿಯನ್ನು ಸಮುದ್ರದಲ್ಲಿ ಬಿಟ್ಟು ಬಿಟ್ಟನು. ಅದೇ ಈಗ ಸಮುದ್ರದಲ್ಲಿ ಔರ್ವಾಗ್ನಿಎಂದು ಪ್ರಸಿದ್ಧವಾಗಿದೆ'' ಎಂದು ಕತೆ ಹೇಳಿ ಅವನನ್ನುಈ ರಾಕ್ಷಸಮೇಧದಿಂದ ತಿರುಗಿಸಲು ಪ್ರಯತ್ನಿಸಿದರು.

ಅದಕ್ಕೆ ಬಿಸಿ ರಕುತ ಉಕ್ಕುತ್ತಲಿರುವ ಪರಾಶರ ''ಈ ದೈತ್ಯ ಕುಲವು ಜಾತ್ಯಾದುಷ್ಟವಿದೆ. ಅನಾದಿಕಾಲದಿಂದಲೂ ಈದೊಂದು ಮಾನವ ಕುಲದ ಮೃತ್ಯುರೂಪವೇ ಆಗಿ ಪರಿಣಮಿಸಿದೆ. ವಿಷ್ಣುವೈಷ್ಣವರ ದ್ವೇಷವೇ ಆ ವಂಶದ ಧ್ಯೇಯವಾಗಿದೆ. ಇಂಥ ನೀಚರ ಕುಲವನ್ನು ಸಮೂಲನಿರ್ಮೂಲ ಮಾಡಿದರೆ ಜಗತ್ತಿನಲ್ಲಿಮುಂದೆಂದೂ ದೇವಕಾರ್ಯಗಳಿಗೆ ವಿಘ್ನಬರುವದಿಲ್ಲ. ಮತ್ತುನಮ್ಮ ತಂದೆಯಂಥ ಬ್ರಹ್ಮಜ್ಞಾನಿ ಮುನಿತಾಪಸರ ವಧವಾಗುವುದೂ ಇಲ್ಲ. ಇಂಥ ದುಷ್ಟರ ಸಂಹಾರವೂ ಪುಣ್ಯಕಾರ್ಯವೇ ಹೊರತು ಪಾಪವಲ್ಲ. ಇದರಿಂದ ದುಷ್ಟದಮನದಲ್ಲಿ ದೀಕ್ಷೆಯುಳ್ಳ ಶ್ರೀಹರಿಗೆ ಪ್ರೀತಿಯಾಗುವದರಲ್ಲಿ ಸಂದೇಹವೇ

ಇಲ್ಲ'' ಎಂದು ಹೇಳಿ ತನ್ನಂತೆ ಉತ್ಸಾಹಿಗಳಾದ ಕೆಲವು ತರುಣ ತಾಪಸರನ್ನು ಕೂಡಿಸಿಕೊಂಡು ರಾಕ್ಷಸಮೇಧವನ್ನು ಪ್ರಾರಂಭ ಮಾಡಿದ.

ಜಗತ್ತಿನಲ್ಲಿಯ ದೈತ್ಯಕುಟುಂಬಗಳೆಲ್ಲ ಭಯಭ್ರಾಂತರಾಗಿ ಹೋದರು. ಶತದ್ರು ನದಿಯ ದಂಡೆಯ ಮೇಲೆ ಆ ಭೀಕರವಾದ ರಾಕ್ಷಸರ ಸತ್ರಕ್ಕಾಗಿ ದೊಡ್ಡದಾದ ಒಂದು ಬೃಹನ್ಮಂಡಪವನ್ನು ಹಾಕಲಾಯಿತು. ಆಬಾಲವೃದ್ಧರಾದಿಯಾಗಿ ಮೂರು ಲೋಕದಲ್ಲಿರುವ ರಕ್ಕಸರನೆಲ್ಲ, ಆ ಉರಿಯುವ ಯಜ್ಞಾಗ್ನಿಯಲ್ಲಿ ಆಹುತಿಕೊಟ್ಟು ಬಿಡಬೇಕೆಂದು ಪುರೋಹಿತರಾಗಿ ಬಂದ ತರುಣ ತಪಸ್ವಿಗಳಿಗೆ ಪರಾಶರರು ಆದೇಶವಿತ್ತ. ಅದರಂತೆ ಒಬ್ಬೊಬ್ಬರಾಗಿ ದೈತ್ಯರು ಹೋಮಾಗ್ನಿಯಲ್ಲಿ ಬಂದು ಬೀಳಹತ್ತಿದರು. ನೂರಾರು, ಸಾವಿರಾರು ರಕ್ಕಸರು ಧಗಧಗಿಸುವ ಯಜ್ಞದ ಕಿಚ್ಚಿನಲ್ಲಿ ಹಾಹಾಕಾರ ಮಾಡುತ್ತ ಬಂದು ಬಿದ್ದು ರಾಕ್ಷಸರು ಉರಿದು ಹೋಗುತ್ತಿದ್ದರು. ಈ ಸಾಮೂಹಿಕ ರಾಕ್ಷಸ ಬಲಿಯಿಂದ ಅಗ್ನಿ ನಾರಾಯಣ ಉದ್ದೀಪಿತನಾಗಿ ರಾಕ್ಷಸ ಕುಲವನ್ನು ಉರಿನಾಲಿಗೆಯನ್ನು ಚಾಚಿಕಬಳಿಸಹತ್ತಿದ. ಈ ಘೋರವಾದ ರಕ್ಷೋಘ್ನಯಾಗವನ್ನು ನೋಡಲಿಕ್ಕೆ ತಂಡ ತಂಡವಾಗಿ ಜನ ಬರಹತ್ತಿದರು. ಪರಾಶರ ಹೆಸರುಗೊಂಡು 'ಸ್ವಾಹಾ' ಎಂದು ಆಹುತಿ ಹಾಕಿದ ಕೂಡಲೇ ದೈತ್ಯರೆಲ್ಲರೂ ತಕ್ಷಣ ಬಂದು ಹೋಮ ಕುಂಡದಲ್ಲಿ ಬಿದ್ದು ಪಟಪಟ ಸಾಯುತ್ತಿದ್ದರು.

ಆಗ ದೈತ್ಯದಾನವ ರಾಕ್ಷಸ ಕುಲದ ಮುಂದಾಳು ಹಿಂದಾಳುಗಳೆಲ್ಲ ಗಾಬರಿಯಿಂದ ಋಷಿಗಳ ಗುಡಿಸಲುಗಳಿಗೆ ಹೋಗಿ ನಮ್ಮನ್ನು ಬದುಕಿಸಬೇಕೆಂದು ಎದೆ ಎದೆ ಬಡಿದುಕೊಂಡು ಅತ್ತುಅಂಗಲಾಚಹತ್ತಿದರು.

ಸಪ್ತರ್ಷಿಗಳ ಮನೆಯಲ್ಲಿ ದೈತ್ಯ ಧುರೀಣರೆಲ್ಲರೂ ಸೇರಿ ಅವರಿಗೆ ತಮ್ಮ ವಂಶಕ್ಕೆ ಜೀವದಾನ ಕೊಡಬೇಕೆಂದು ಅಡ್ಡಬಿದ್ದು ಬೇಡಿಕೊಂಡರು.

ರಾವಣನ ಅಜ್ಜಂದಿರಾದ ಪುಲಸ್ತ್ಯರಿಗಂತೂ ಇದರಿಂದ ಆಘಾತವಾದಂತಾಯಿತು. ಅವರು ಪುಲಹ, ಕ್ರತು, ಮಹಾಕ್ರತು ಮುಂತಾದ ಮಹರ್ಷಿಗಳಿಂದ ಕೂಡಿಕೊಂಡು ಸಪ್ತರ್ಷಿಗಳಿದ್ದಲ್ಲಿಗೆ ಧಾವಿಸಿ ಬಂದರು. ಮತ್ತು ಅವರೆಲ್ಲರನ್ನು ಕರೆದುಕೊಂಡು ಯಜ್ಞ ಮಂಟಪಕ್ಕೆ ದಯಮಾಡಿಸಿದರು. ಅಲ್ಲಿ

ತಪಃಶಕ್ತಿ ಸಂಪನ್ನನಾದ ಶಕ್ತಿಋಷಿಯ ಮಗ ತೇಜಃಪುಂಜರಾದ ಕೆಲವು ತಾಪಸಕುಮಾರರೊಂದಿಗೆ ರಾಕ್ಷಸ ಸತ್ರವನ್ನು ಪ್ರಾರಂಭಿಸಿ ರಾಕ್ಷಸರ ಹೋಮ ಮಾಡಹತ್ತಿದ್ದ. ಸಾವಿರಾರು ರಕ್ಕಸರ ಬಲಿಯಾಗಿ ಹೋಗಿತ್ತು.

ಈ ಮಹಾ ಮಹಾ ಋಷಿಗಳು ಬಂದದ್ದನ್ನು ಕಂಡು ಪರಾಶರರು ಎದ್ದು ಅವರೆಲ್ಲರಿಗೂ ವಂದಿಸಿ 'ಆಹುತೇಃ ಅನುಜ್ಞಾ' ದೈತ್ಯಾಹುತಿಗೆ ಅಪ್ಪಣೆಕೊಡಬೇಕೆಂದು ಕೇಳಿಕೊಂಡ.

ಆಗ ದೈತ್ಯಕುಲ ಪಕ್ಷಪಾತಿಗಳಾದ ಪುಲಸ್ತ್ಯರು ಮುಂದಾಗಿ ''ಮಗು, ಹೀಗೆ ಸರ್ವ ರಾಕ್ಷಸ ಸಂಹಾರವು ಭಗವತ್ಸಂಕಲ್ಪಕ್ಕೆ ವಿರುದ್ಧವಾಗಿದೆ. ಒಬ್ಬನ ತಪ್ಪಿಗೆ ಕೋಟ್ಯಾವಧಿ ರಕ್ಕಸರನ್ನು ಇಂದು ಈ ಕಿಚ್ಚಿನಲ್ಲಿ ಹಾಕುವದು ಅನ್ಯಾಯವಾಗುವದು. ದೈತ್ಯರಲ್ಲಿಯೂ ವಿಭೀಷಣ, ಪ್ರಲ್ಹಾದ, ವಿರೋಚನ, ಬಲಿರಾಜ ಮೊದಲಾದ ಭಗವದ್ಭಕ್ತರು ಎಷ್ಟು ಜನರಿಲ್ಲ! ಈ ಯಜ್ಞದಲ್ಲಿ ಅನ್ಯಾಯವಾಗಿ ಅಂಥ ಒಬ್ಬ ಹರಿಭಕ್ತನ ಮಾರಣವಾದರೂ ಮಹಾ ಅನರ್ಥವಾಗುವದು. ನಿನ್ನಂಥ ಋಷಿ ಪುಂಗವನಿಗೆ ಈ ತಾಮಸ ವ್ಯಾಪಾರವು ಯೋಗ್ಯವಲ್ಲ'' ಎಂದು ಮುಂತಾಗಿ ಅನೇಕ ರೀತಿಯಿಂದ ಅನೇಕ ದೃಷ್ಟಾಂತ ನೀತಿ ತತ್ವಗಳನ್ನು ಹೇಳಿ ಅವನ ಮನಸ್ಸನ್ನು ತಿರುಗಿಸಲಿಕ್ಕೆ ಪ್ರಯತ್ನಿಸಹತ್ತಿದರು.

ಆದರೂ ಪರಾಶರನಿಗೆ ತಂದೆಯನ್ನು ಕೊಂದ ರಕ್ಕಸರ ಕರಾಳಕೃತ್ಯದ ನೆನಪಾಗಿ ಮತ್ತೆ ಅವರ ಮೇಲೆ ಕೋಪ ಉಕ್ಕೇರಿ ಬರುತ್ತಿತ್ತು. ಅವನು ಯಾರ ಮಾತನ್ನೂ ಕೇಳದಾದ. ಆಗ ವಸಿಷ್ಠರೇ ಮಧ್ಯಸ್ಥಿಕೆಯನ್ನು ಮಾಡಿ ಇಂಥ ಬ್ರಹ್ಮಜ್ಞಾನಿಗಳ ಮಾತನ್ನು ಮೀರುವದು ಸರಿಯಲ್ಲ. ''ವಿಪ್ರವಾಕ್ಯೋ ಜನಾರ್ದನಃ'' ಎಂಬಂತೆ ಈ ಬ್ರಾಹ್ಮಣರ ಮಾತೆಂದರೆ ಶ್ರೀಹರಿಯ ಆದೇಶವೇ ಇದ್ದಂತೆ. ಇಂಥ ತಪಃಪೂತರಾದ ಬ್ರಹ್ಮರ್ಷಿಗಳ ನ್ಯಾಯಸಮ್ಮತ್ರವಾದ ಧರ್ಮ ಮಾರ್ಗಾನುಸಾರಿಯಾದ ಆದೇಶವನ್ನು ನೀನು ಪಾಲಿಸಿದರೆ ನಿನಗೂ ಕಲ್ಯಾಣ, ನಮ್ಮ ವಂಶಕ್ಕೂ ಭೂಷಣ'' ಎಂದು ಮುಂತಾಗಿ ಹೇಳಿ ತಮ್ಮ ಮೊಮ್ಮಗನನ್ನು ಆ ಘೋರವ್ಯಾಪಾರದಿಂದ ತಿರುಗಿಸಿದರು.

ಆಗ ಅವನು ಪುಲಹ, ಪುಲಸ್ತ್ಯಾದಿ ಋಷಿಗಳಿಗೆಲ್ಲರಿಗೆ ತಮ್ಮ ಆಜ್ಞೆಯ ಮೇರೆಗೆ ಈ ರಾಕ್ಷಸ ಹೋಮವನ್ನು ಇಲ್ಲಿಗೇ ನಿಲ್ಲಿಸುತ್ತೇನೆ ಎಂದು ಹೇಳಿ ಅದನ್ನು ಅಷ್ಟಕ್ಕೆ

ನಿಲ್ಲಿಸಿ ಬಿಟ್ಟ. ಆಗ ಪುಲಸ್ತ್ಯರಿಗೆ ಪರಮಾನಂದವಾಯಿತು. ಅವರು ಪರಾಶರನಿಗೆ ನೀನು ಸಕಲ ಶಾಸ್ತ್ರಗಳಲ್ಲಿಯೂ ಅತ್ಯಂತ ಪಾರಂಗತನಾಗುವಿ ಮತ್ತು ಪ್ರಖ್ಯಾತನಾದ ಪುರಾಣ ಪ್ರವರ್ತಕನಾಗುವಿ'' ಎಂದು ಎರಡು ವರಕೊಟ್ಟರು ಎಂದು ಮುಂತಾಗಿ ವಿಷ್ಣುಪುರಾಣ ಮುಂತಾದಲ್ಲಿ ಪರಾಶರರ ಕತೆ ಬಂದಿದೆ.

ಪರಾಶರರು ತಾವು ರಾಕ್ಷಸರ ಸಂಹಾರಕ್ಕಾಗಿಯೆಂದು ಸಿದ್ಧಪಡಿಸಿಟ್ಟ ಹೋಮಾಗ್ನಿಯನ್ನು ಹಿಮಾಲಯದ ಉತ್ತರದಿಕ್ಕಿನಲ್ಲಿರುವ ಒಂದು ಕಾಡಿನಲ್ಲಿ ಚೆಲ್ಲಲಾಯಿತು. ಅದು ಈಗಲೂ ಪರ್ವಕಾಲದಲ್ಲಿ ರಾಕ್ಷಸರನ್ನೂ ಹೆಬ್ಬಂಡೆಗಳನ್ನೂ ದೈತ್ಯ ವೃಕ್ಷಗಳನ್ನೂ ಭಕ್ಷಣ ಮಾಡುತ್ತದೆ ಎಂದು ಮುಂತಾಗಿ ಮಹಾಭಾರತಲಿಂಗ ಪುರಾಣಾದಿಗಳಲ್ಲಿ ಉಲ್ಲೇಖ ಕಂಡುಬರುತ್ತದೆ.

ಈ ರೀತಿಯಾಗಿ ರಾಕ್ಷಸರ ಸಂಹಾರದಿಂದ ಪರಾ ಪ್ರವೃತ್ತರಾದ ಬಳಿಕ ಪರಾಶರರು ಪುಲಸ್ತ್ಯರ ವರದ ಬಲದಿಂದ ಸರ್ವಶಾಸ್ತ್ರಗಳಲ್ಲಿಯೂ ನಿಸ್ಸೀಮ ಪಂಡಿತರು. ಅವರು ವೇದಾಂತ ಶಾಸ್ತ್ರ, ಧರ್ಮಶಾಸ್ತ್ರ, ಜ್ಯೋತಿಷ್ಯಶಾಸ್ತ್ರ, ವಾಸ್ತುಶಾಸ್ತ್ರ, ನೀತಿಶಾಸ್ತ್ರ ವೈದ್ಯಶಾಸ್ತ್ರ ಮುಂತಾದ ಜೀವನೋಪಯುಕ್ತವಾದ ಮತ್ತು ಲೋಕೋಪಯೋಗಿ ವಿವಿಧಶಾಸ್ತ್ರಗಳಲ್ಲಿ ಅದ್ಭುತವಾದ ಸಂಶೋಧನೆಯನ್ನು ಮಾಡಿದರು.

★ ★ ★ ★

## ಯಾಜ್ಞವಲ್ಕ್ಯ

ಯಾಜ್ಞವಲ್ಕ್ಯರು ತನ್ನ ಇಬ್ಬರು ಪತ್ನಿಯರನ್ನು ಕರೆಸಿ ತಾನು ಎಲ್ಲವನ್ನೂ ಪರಿತ್ಯಜಿಸಿ ಯಾತ್ರೆ ಹೊರಟಿರುವುದಾಗಿ ತಿಳಿಸಿ ತನ್ನ ಭೌತಿಕ ಸಂಪತ್ತನ್ನು ಇಬ್ಬರಿಗೂ ವಿಭಜಿಸಿ ಹಂಚುವುದಾಗಿ ತಿಳಿಸುತ್ತಾರೆ. ಆದರೆ ವಿರಕ್ತಳಾದ ಮೈತ್ರೇಯಿಯು ಯಾಜ್ಞವಲ್ಕ್ಯರ ಬಳಿ ಹೇಳಿದ ಮಾತೇ ಅದ್ಭುತ. ಪೂಜ್ಯರೇ! ''ನೀವು ನೀಡಿದ ಈ ಸಂಪತ್ತಿನಿಂದ ನನಗೆ ಶಾಶ್ವತ ಸಮೃದ್ಧವಾದ ಸಮಗ್ರ ಭೂಮಂಡಲದ ಒಡೆತನವು ದೊರೆತರೂ ಶಾಶ್ವತ ಸುಖವನ್ನು ಹೊಂದಲು ಸಾಧ್ಯವಿಲ್ಲ; ಸಂಪತ್ತಿನಿಂದ ಅಮೃತತ್ವವನ್ನು ಪಡೆಯುವ ಆಶೆ ಸಫಲವಾಗಲಾರದೆಂದು ಯಾಜ್ಞವಲ್ಕ್ಯರು ಉತ್ತರಿಸುತ್ತಾರೆ. ''ಯೇನಾಹಂ

ನಾಮೃತಾ ಸ್ಯಾಂ ಕಿಮಹಂ ತೇನ ಕುರ್ಯಾಂ'' ಯಾವುದರಿಂದ ಅಮೃತತ್ವವು ದೊರೆಯಲಾರದೋ ಅಂತಹ ಈ ಭೌತಿಕ ಸಂಪತ್ತಿನಿಂದ ತನಗೆ ಏನಾಗಬೇಕು? ಎಂದು ಹೇಳಿ ಯಾಜ್ಞವಲ್ಕ್ಯರು ಕೊಡಮಾಡಿದ ಆಸ್ತಿಯನ್ನು ನಿರಾಕರಿಸಿ ಅಮೃತತ್ವದ ದಾರಿಯನ್ನು ತೋರಿಸಬೇಕೆಂದು ಯಾಜ್ಞವಲ್ಕ್ಯರಲ್ಲಿ ಪ್ರಾರ್ಥಿಸುತ್ತಾಳೆ. ಅವಳ ಈ ತ್ಯಾಗ ಮತ್ತು ಅಧ್ಯಾತ್ಮದ ಕಳಕಳಿಯನ್ನು ಕಂಡು ಸಂತುಷ್ಟರಾಗಿ ''ಇಂತಹ ಇಷ್ಟವಾದ ಅಧ್ಯಾತ್ಮದ ಮಾತನ್ನು ಆಡುವ ನೀನೇ ನನ್ನ ಪ್ರೀತಿಯ ಸಹಧರ್ಮ ಚಾರಿಣಿಯಾಗಿರುವಿ'' ಎಂದು ಅವಳನ್ನು ಪ್ರಶಂಸಿಸಿ ತತ್ವಜ್ಞಾನವನ್ನು ವಿವರಿಸುವರು. ಜಗತ್ತಿನಲ್ಲಿ ನಮಗೆ ಅತ್ಯಂತ ಇಷ್ಟತಮವಾದ ವಸ್ತುವು ಪರಮಾತ್ಮನೇ ಆಗಿರುವನು. ಅವನ ಸಂಪರ್ಕದಿಂದಲೇ ಮನೆ, ಮಡದಿ, ಮಕ್ಕಳು ಎಲ್ಲವೂ ನಮಗೆ ಪ್ರಿಯವಾಗುತ್ತಿವೆ. ಅವನು ವಿಮುಖನಾದಾಗ ನಾವು ಅತ್ಯಂತವಾಗಿ ಪ್ರೀತಿಸುವ ವಸ್ತುಗಳನ್ನೂ ನಾವು ದ್ವೇಷಿಸುವಂತಹ ಸ್ಥಿತಿಯುಂಟಾಗುವುದು. ಆದುದರಿಂದ ಭೌತಿಕ ವಸ್ತುಗಳನ್ನಾಗಲೀ, ಸತಿ-ಸುತರನ್ನಾಗಲೀ ನಮ್ಮ ಪ್ರೇಮದ ಕೇಂದ್ರ ಬಿಂದುವೆಂದು ಪರಿಗಣಿಸದೆ ತಂದೆ, ತಾಯಿ, ಬಂಧು, ಬಾಂಧವರೆಲ್ಲರಿಗಿಂತಲೂ ಮಿಗಿಲಾಗಿ ತನಗಿಂತಲೂ ಹೆಚ್ಚಾಗಿ ಪರಮಾತ್ಮನೇ ನಮ್ಮ ಪ್ರೀತಿಯ ಕಣ್ಮಣಿಯೆಂದು ಅವನನ್ನೇ ಅತಿಶಯಿತವಾಗಿ ಪ್ರೀತಿಸಬೇಕು. ಪರಮಾತ್ಮನಿಂದಲೂ ಜಗತ್ತಿನ ಬೇರೆ ವಸ್ತುಗಳಿಗೆ ಮಹತ್ವ ನೀಡಿದವನಿಗೆ ದುರಂತ ಕಾದಿದೆ.

ವೀಣೆ, ಶಂಖಗಳನ್ನು ನೋಡದೆ ಶಬ್ದವನ್ನು ಮಾತ್ರ ಕೇಳಿದರೆ ಅದರ ಸರಿಯಾದ ಪರಿಚಯವಾಗುವುದಿಲ್ಲ. ವೀಣೆ, ಶಂಖಗಳನ್ನು ನೋಡಿದಾಗಲೇ ಅದರಿಂದ ಹೊರಹೊಮ್ಮುವ ಧ್ವನಿಯ ನಿಜವಾದ ಪರಿಚಯವಾಗುವುದು. ಅದರಂತೆ ಜಗತ್ ಕಾರಣನಾದ ಭಗವಂತನನ್ನು ತಿಳಿಯದೆ ಜಗತ್ತಿನ ಸರಿಯಾದ ಜ್ಞಾನವೇ ನಮಗೆ ಉಂಟಾಗಲಾರದು. ಹೀಗೆ ಸರ್ವಕಾರಣವೂ ಸರ್ವರ ಆನಂದದ ಮೂಲಸ್ರೋತ್ರವೂ ಆದ ಪರಬ್ರಹ್ಮನದರ್ಶನವೇ ನಮ್ಮ ಜೀವನದ ಪ್ರಧಾನಲಕ್ಷ್ಯ.



## ಪೈಂಗ್ಯ

ಬೃಹದಾರಣ್ಯೋಪನಿಷತ್ತಿನಲ್ಲಿ ಯಾಜ್ಞವಲ್ಕ್ಯರ ಶಿಷ್ಯನೆಂದು ಉಲ್ಲೇಖಿಸಲ್ಪಟ್ಟ ಪೈಂಗ್ಯ ಮುನಿಯನ್ನೇ ಸಾಂಖ್ಯಾಯನ ಬ್ರಾಹ್ಮಣದಲ್ಲಿ ಮಧುಕಪೈಂಗ್ಯ ಎಂದು ಕರೆದಿದ್ದಾರೆ. ನಿಧಾನಸೂತ್ರ ಮತ್ತು ಅನುಪದ ಸೂತ್ರಗಳಲ್ಲಿ ಇವರ ಮತವನ್ನು ಪೈಂಗ್ಯ ಮತ ಎಂದು ಕಾಣಿಸಿದ್ದಾರೆ. ಆಪಸ್ತಂಬ ಶ್ರೌತಸೂತ್ರದಲ್ಲಿ ಪೈಂಗಾಯಣೀ ಬ್ರಾಹ್ಮಣ ಎಂದು ಇದನ್ನು ಉಲ್ಲೇಖಿಸಿದ್ದಾರೆ. ಸಾಂಖ್ಯಾಯನ ಬ್ರಾಹ್ಮಣದಲ್ಲಿ ಯಜ್ಞಕರ್ಮಗಳ ವಿಧಿವಿಧಾನಗಳ ಅನುಶಾಸನದಲ್ಲಿ ಪೈಂಗ್ಯರ ಮತವನ್ನು ಪರಮ ಪ್ರಮಾಣವೆಂದು ಮಾನಿಸಿದ್ದಾರೆ. ಆಶ್ವಲಾಯನ ಗೃಹ್ಯಸೂತ್ರದಲ್ಲಿ ಬ್ರಹ್ಮಯಜ್ಞಾಂಗ ತರ್ಪಣದಲ್ಲಿ ಪೈಂಗ್ಯರ ಹೆಸರು ಬರುತ್ತದೆ. ಪೌರ್ಣಿಮಾ ಇಷ್ಟಿ ಮತ್ತು ಅಮಾವಾಸ್ಯಾ ಇಷ್ಟಿಗಳ ವಿಷಯದಲ್ಲಿ ಪೈಂಗ್ಯ ಮತ್ತು ಕೌಪೀತಕರಲ್ಲಿ ಮತಭೇದವಿದ್ದುದು ಕಂಡುಬರುತ್ತದೆ.

ಇವಲ್ಲದೇ ಪೈಂಗ್ಯ ಋಷಿಗಳ ಹೆಸರಿನಿಂದ ಪೈಂಗಿ ರಹಸ್ಯ ಬ್ರಾಹ್ಮಣ, ಪೈಂಗ್ಯ ಸ್ಮೃತಿ, ಪೈಂಗ್ಯಾಯನ, ಪೈಂಗಲೋಪನಿಷತ್ ಮುಂತಾದ ಅನೇಕ ಗ್ರಂಥಗಳು ಪ್ರಚಾರದಲ್ಲಿದ್ದದ್ದು ಕಂಡುಬರುತ್ತದೆ. ಈ ಪೈಂಗಿ ಋಷಿಗಳು ದ್ವಾಪರಯುಗದ ಅಂತಿಮ ಭಾಗದಲ್ಲಿ ಧರ್ಮರಾಜನ ಆಸ್ಥಾನದಲ್ಲಿ ರಾಜಗುರುಗಳಾಗಿದ್ದರೆಂದು ಮಹಾಭಾರತದಲ್ಲಿ ನಿರ್ದೇಶನವುಂಟು.

★ ★ ★ ★

## ಕಂಡು

ಉತ್ತರಭಾರತದಲ್ಲಿ ಗೋಮತಿಯೆಂಬ ನದಿಯಿದೆ. ಇದು ಹಿಮಾಲಯದಲ್ಲಿ ಹುಟ್ಟಿ ಅಯೋಧ್ಯೆಯ ಬಳಿ ಹರಿದು ಮುಂದೆ ಗಂಗಾನದಿಯನ್ನು ಸೇರುತ್ತದೆ. ಈ ನದೀತೀರದಲ್ಲಿ ಋಷಿಗಳ ಒಂದು ಆಶ್ರಮವಿತ್ತು. ಆ ಋಷಿಗಳ ಹೆಸರು 'ಕಂಡು' ಎಂದು. ಕಂಧ ಎಂಬುದಾಗಿ ಅವರಿಗೆ ಇನ್ನೊಂದು ಹೆಸರು. ಇವರು ವಿಶ್ರುತರೆಂಬ ಮಹರ್ಷಿಗಳ ಪುತ್ರರು. ತಂದೆಯು ಮಗನಿಗೆ ಯೋಗ್ಯಕಾಲದಲ್ಲಿ ಉಪನಯನ ಸಂಸ್ಕಾರವನ್ನು ಮಾಡಿದರು. ವೇದವಿದ್ಯೆಯನ್ನು ಹೇಳಿಕೊಟ್ಟರು. ವಿದ್ಯಾಭ್ಯಾಸವು

ಮುಗಿದ ಅನಂತರ ತಂದೆಯು ಆಶ್ರಮವನ್ನು ಬಿಟ್ಟು ಹೊರಗೆ ಹೋದ ಕಂಡು ಮಹರ್ಷಿಗಳು ಗೋಮತೀ ನದೀತೀರದಲ್ಲಿ ಎಲೆಮನೆಯನ್ನು ನಿರ್ಮಿಸಿ ಸ್ವಾಧ್ಯಾಯ ಮತ್ತು ತಪಸ್ಸಿನಲ್ಲಿ ತೊಡಗಿಸಿಕೊಂಡರು. ಬರುಬರುತ್ತ ಅವರ ತಪಸ್ಸು ತೀವ್ರವಾಗತೊಡಗಿತು. ಕ್ರಮೇಣ ಅನ್ನ ಆಹಾರಾದಿಗಳನ್ನು ಸ್ವೀಕರಿಸದೆ ತಪಸ್ಸನ್ನು ಅವರು ಮುಂದುವರಿಸಿದರು.

ಆ ತಪಸ್ಸಿನ ಪ್ರಭಾವಕ್ಕೆ ವಾತಾವರಣದ ಮೇಲೆ ಪ್ರತಿಕೂಲ ಪರಿಣಾಮ ಉಂಟುಮಾಡಿತು. ತಪಸ್ಸಿನ ಶಕ್ತಿಗೆ ದೇವತೆಗಳು ಹೆದರಿದರು. ದೇವೇಂದ್ರನು ಮಹರ್ಷಿಗಳ ತಪಸ್ಸಿಗೆ ಭಂಗವನ್ನುಂಟು ಮಾಡಲು ನಿಶ್ಚಯಿಸಿದನು. ಅದಕ್ಕಾಗಿ ಪ್ರಮ್ಲೋಚೆಯೆಂಬ ಅಪ್ಸರ ಸ್ತ್ರೀಯನ್ನು ಕಳುಹಿಸಿದನು. ಪ್ರಮ್ಲೋಚೆಯು ಕಂಡು ಮಹರ್ಷಿಗಳು ತಪಸ್ಸನ್ನು ಆಚರಿಸುತ್ತಿರುವ ಸ್ಥಳಕ್ಕೆ ಬಂದಳು. ಸಾಯಂಕಾಲದ ಸಂಧ್ಯಾವಂದನೆಗೆ ಕಂಡುಋಷಿಗಳು ನದಿಗೆಂದು ಬಂದಾಗ ಈ ಪ್ರಮ್ಲೋಚೆಯನ್ನು ಕಂಡರು. ಅವರ ಮುಂದೆ ಬಳುಕುತ್ತ ನಿಂತಳು. ಋಷಿಗಳು ಅವಳನ್ನು ಕಣ್ಣೆತ್ತಿಯೂ ನೋಡಲಿಲ್ಲ. ಋಷಿಗಳನ್ನು ಆಕರ್ಷಿಸುವುದಕ್ಕೆ ನಾಟ್ಯವನ್ನು ಮಾಡುವುದಕ್ಕೆ ತೊಡಗಿದಳು. ಹೆಜ್ಜೆ-ಗೆಜ್ಜೆಗಳ ನಾದವನ್ನು ಆಲಿಸಿದ ಕಂಡುಮಹರ್ಷಿಗಳು ಕಣ್ಣುಗಳನ್ನು ತೆರೆದು ನೋಡಿದರು. ಅವಳ ಸೌಂದರ್ಯ ಅವರನ್ನು ಆಕರ್ಷಿಸಿತು. ಪ್ರಮ್ಲೋಚೆಯೊಂದಿಗೆ ಸಂಸಾರವನ್ನು ನಡೆಸಲು ತೀರ್ಮಾನಿಸಿದರು. ಅವಳಲ್ಲಿ ಅವರು ತಮ್ಮ ಅಪೇಕ್ಷೆಯನ್ನು ಹೇಳಿದಾಗ ಪ್ರಮ್ಲೋಚೆಯು ಒಪ್ಪಿದಳು. ಆಶ್ರಮದಲ್ಲಿ ಅವರಿಬ್ಬರೂ ಸುಖ-ಸಂತೋಷಗಳಿಂದ ಕಾಲವನ್ನು ಕಳೆಯತೊಡಗಿದರು.

ಹೀಗೆ ಬಹಳಷ್ಟು ವರ್ಷಗಳು ಕಳೆದವು. ಅಪ್ಸರೆಯಾದ ಪ್ರಮ್ಲೋಚೆಗೆ ಈ ಲೋಕ ಮತ್ತು ಇಲ್ಲಿಯ ಜೀವನ ಸಾಕೆನಿಸಿತು. ಆದರೆ ಮಹರ್ಷಿಗಳಲ್ಲಿ ತನ್ನ ಅಭಿಪ್ರಾಯವನ್ನು ಹೇಳಲು ಹೆದರಿದಳು. ಎಲ್ಲಿಯಾದರೂ ಸಿಟ್ಟಿನಿಂದ ಅವರು ಶಪಿಸಿಯಾರೆಂಬ ಹೆದರಿಕೆ ಅವಳಿಗೆ. ಮತ್ತೂ ಹಲವು ವರ್ಷಗಳು ಕಳೆದವು. ಒಂದು ದಿನ ಮಹರ್ಷಿಗಳಿಗೆ ಜ್ಞಾನೋದಯವಾಯಿತು. ''ಪ್ರಮ್ಲೋಚೆ! ಸರಸ ಸಾಕು. ನಾನು ಸಾಯಂಕಾಲದ ಸಂಧ್ಯಾವಂದನೆಗೆ ತೆರಳಬೇಕು. ತಡವಾಗಿದೆ'' ಎಂದರು.

ಪ್ರಮ್ಲೋಚೆಯು ನೂರಾರು ವರ್ಷದ ಸಂಧ್ಯಾಕಾಲಗಳೇ ಸಂಧಿಹೋಗಿವೆ ಎಂದು ಎಚ್ಚರಿಸಿದಳು. ಕಂಡುಋಷಿಗಳಿಗೆ ತಪಸ್ವಿಯಾದ ನಾನು ತಪಸ್ಸನ್ನು ಬಿಟ್ಟು ಈ ಅಪ್ಸರೆಯೊಂದಿಗೆ ಬಹಳ ವರ್ಷಗಳನ್ನು ವ್ಯರ್ಥವಾಗಿ ಕಳೆದೆನಲ್ಲ ಎಂದೆನಿಸಿತು. ಪ್ರಮ್ಲೋಚೆಗೆ ಸ್ವರ್ಗಕ್ಕೆ ಹೊರಟು ಹೋಗುವಂತೆ ಆಜ್ಞಾಪಿಸಿದರು. ಆಗ ಅವಳು ಗರ್ಭವತಿಯಾಗಿದ್ದಳು. ಮಗುವನ್ನು ಹೆತ್ತು ಸುರಲೋಕಕ್ಕೆ ಮರಳಿದಳು. ಕಂಡು ಋಷಿಗಳಿಗೂ ತಾವು ಅಲೌಕಿಕ ನಿಷ್ಠೆಯನ್ನು ತೊರೆದುದಕ್ಕಾಗಿ ವ್ಯಥೆ ಎನಿಸಿ ಅವರೂ ತಪಸ್ಸಿಗೆ ತೆರಳಿದರು.

ಅವರು ತ್ಯಜಿಸಿದ ಮಗುವನ್ನು ಮರುದ್ದೇವತೆಗಳು ಆ ವೃಕ್ಷದೇವತೆಗೆ ನೀಡಿದರು. ವೃಕ್ಷದೇವತೆಯು ಆ ಮಗುವನ್ನು ಪೋಷಿಸಿದಳು. ವೃಕ್ಷಗಳ ಅಭಿಮಾನಿದೇವನಾದ ಚಂದ್ರನು ಆ ಹೆಣ್ಣು ಮಗುವನ್ನು ತನ್ನ ಮಗಳೆಂದು ಸ್ವೀಕರಿಸಿದನು. ಆ ಹೆಣ್ಣು ಮಗುವನ್ನು ವೃಕ್ಷದೇವತೆಯು ಸಾಕಿದುದರಿಂದ ಅವಳಿಗೆ ವಾರ್ಕ್ಷಿ ಎಂದು ಹೆಸರಾಯಿತು. ಮಾರಿಷಾ ಎಂಬುದಾಗಿ ಅವಳಿಗೆ ಇನ್ನೊಂದು ಹೆಸರೂ ಬಂತು. ಮಾರಿಷಾ ಎಂದರೆ ಹಿಂಸೆಯನ್ನು ಅರಿಯದವಳೆಂದು ಅರ್ಥ. ಇವಳು ಪ್ರಾಯ ಪ್ರಬುದ್ಧೆಯಾದ ಕಾಲದಲ್ಲಿ ಅವಳನ್ನು ಚಂದ್ರ ಮತ್ತು ವೃಕ್ಷದೇವತೆಗಳು ಶತಧೃತಿ ಮತ್ತು ಪ್ರಾಚೀನಬರ್ಹಿ ದಂಪತಿಗಳ ಮಕ್ಕಳಾದ ಪ್ರಚೇತಸ ಎಂಬವರಿಗೆ ಮದುವೆ ಮಾಡಿಕೊಟ್ಟರು.

ಬ್ರಹ್ಮನ ಮಾನಸ ಪುತ್ರನಾದ ದಕ್ಷನು ಯಜ್ಞವೊಂದರಲ್ಲಿ ಈಶ್ವರನಿಗೆ ಅವಮಾನ ಮಾಡಿದರಿಂದ ನಾಶ ಹೊಂದಬೇಕಾಯಿತು. ಈ ಪ್ರಕರಣವು 'ದಕ್ಷಯಜ್ಞ'ವೆಂದು ಪ್ರಸಿದ್ಧವಾಗಿದೆ. ಆ ದಕ್ಷನು ಮರುಜನ್ಮದಲ್ಲಿ ಮಾರಿಷಾ-ಪ್ರಚೇತಸರ ಮಗನಾಗಿ ಜನಿಸಿದನು. ಆವಾಗ ಅವನನ್ನು ಪ್ರಾಚೇತಸ ದಕ್ಷನೆಂದು ಕರೆದರು.

ಋಷಿಗಳು ತಪಸ್ಸಿನಲ್ಲಿ ತೊಡಗಿದರೂ ಸಂಸಾರವನ್ನೂ ನಡೆಸಿದರೂ ಅದರಿಂದ ಲೋಕದಲ್ಲಿ ಮಹತ್ವದ ಘಟನೆಯೊಂದು ಜರುಗುವ ನಿಮಿತ್ತವಿರುತ್ತದೆ. ಕಂಡು ಮಹರ್ಷಿಯ ಮಗಳು ದಕ್ಷಪ್ರಜಾಪತಿಗೆ ತಾಯಿಯಾದುದೇ ಇದಕ್ಕೆ ಸಾಕ್ಷಿ.

ಪ್ರಮ್ಲೋಚೆಯ ವಶಕ್ಕೆ ತುತ್ತಾದ ಕಂಡುಋಷಿಗಳು ಪಶ್ಚಾತ್ತಾಪದಿಂದ ಭಗವಂತನನ್ನು ಬಗೆಬಗೆಯಾಗಿ ಸ್ತುತಿಸಿದರು. ಇಂದಿಗೂ ಎಲ್ಲರೂ ದೇವಪೂಜಾಪ್ರಾರಂಭದಲ್ಲಿ ಕಂಡುಋಷಿಗಳ ಈ ಸ್ತುತಿಯನ್ನು ಪಠಿಸುತ್ತಾರೆ. ಇದೇ 'ಬ್ರಹ್ಮಪಾರಸ್ತೋತ್ರ'ವೆಂದು ಪ್ರಸಿದ್ಧವಾಗಿದೆ.

★ ★ ★ ★

## ಶಾಕಲ್ಯ

ಗೌತಮೀ ನದಿ ತೀರದಲ್ಲಿ ಒಂದು ಅರಣ್ಯವಿತ್ತು. ಆ ಅರಣ್ಯದಲ್ಲಿ ಅನೇಕ ಋಷಿಗಳು ತಪಸ್ಸನ್ನು ಮಾಡುತ್ತಿದ್ದರು. ಅವರಲ್ಲೊಬ್ಬ ಶಾಕಲ್ಯ.

ಶಾಕಲ್ಯ ಮಾತ್ರ ಉಳಿದವರಿಗಿಂತ ಭಿನ್ನನಾಗಿದ್ದ. ಯಾವಾಗಲೂ ಅಂತರ್ಮುಖಿಯಾಗಿದ್ದ. ಯಾರಲ್ಲಿಯೂ ಹೆಚ್ಚು ಬೆರೆಯುತ್ತಿರಲಿಲ್ಲ. ಹಾಗಾಗಿ, ಅವನೆಂಥ ಜ್ಞಾನಿ ಎಂಬುದು, ಅವನೆಂಥ ತಪಸ್ವಿ ಎಂಬುದು ಯಾರಿಗೂ ತಿಳಿದಿರಲಿಲ್ಲ. ಜೊತೆಗೆ ಅವನು ಮಹಾವಿಷ್ಣುವಿನ ಪರಮ ಆರಾಧಕನಾಗಿದ್ದನು.

ಅದೇ ಕಾಡಿನಲ್ಲಿ ಒಬ್ಬಾತ ರಾಕ್ಷಸನಿದ್ದನು. ಅವನು ಮೂಲತಃ ರಾಕ್ಷಸನಲ್ಲ. ಮನುಷ್ಯನಾಗಿದ್ದರೂ ದುರ್ಜನತ್ವದಿಂದ ಜನರನ್ನು ಪೀಡಿಸುತ್ತಿದ್ದ. ಹಾಗೆ, ಒಮ್ಮೆ ಒಬ್ಬ ಋಷಿಯನ್ನು ಅಪಹಾಸ್ಯ ಮಾಡಲು ಹೋಗಿ, 'ನೀನು ರಾಕ್ಷಸನಾಗಿ ಹೋಗು' ಎಂಬ ಶಾಪಕ್ಕೆ ಗುರಿಯಾಗಿದ್ದ. 'ಇದರ ಪರಿಹಾರ ಹೇಗೆ?' ಎಂದು ಪಶ್ಚಾತ್ತಾಪದಿಂದ ಅವನು ಅದೇ ಋಷಿಯಲ್ಲಿ ಕೇಳಿದಾಗ, 'ನೀನು ಮುಂದೆ ಒಬ್ಬ ಪರಮ ವಿಷ್ಣುಭಕ್ತನನ್ನು ಕಾಣುವಿ. ಅವನನ್ನು ನಿನಗೆ ತಿನ್ನಬೇಕೆಂಬ ಆಸೆ ಉಂಟಾಗುವುದಿಲ್ಲ. ಬದಲಿಗೆ ಗೌರವ ಭಾವ ಮೂಡುತ್ತದೆ. ಆತನೆ, ನಿನ್ನ ಶಾಪವಿಮೋಚನೆಗೊಳಿಸಿ ಮೊದಲಿನಂತೆ ಮನುಷ್ಯನನ್ನಾಗಿಸುತ್ತಾನೆ' ಎಂದು ಮರುಶಾಪವನ್ನು ಕೂಡ ಪಡೆದಿದ್ದ. ಮರುಶಾಪ ಎಂದರೆ ಶಾಪಕ್ಕೆ ಶಾಪ ಅಂದರೆ ಪರಿಹಾರ ಎಂದರ್ಥ.

ಕೆಲವು ಕ್ಷಣದಲ್ಲಿಯೇ ಮನುಷ್ಯನಾಗಿದ್ದವನ ದೇಹ ಬೆಳೆದು ರಾಕ್ಷಸನಾಗತೊಡಗಿದ. ದಟ್ಟವಾದ ಕಾಡನ್ನು ಪ್ರವೇಶಿಸಿದ. ಪರಶು ಎಂದು ಅವನ

ಹೆಸರು. ಪರಶು ಎಂದರೆ ಮರಕಡಿಯುವ ಉಪಕರಣವಲ್ಲವೆ? ಹೆಸರಿಗೆ ತಕ್ಕಂತೆ ಆ ರಾಕ್ಷಸನು ಕ್ರೂರವಾಗಿ ವ್ಯವಹರಿಸುತ್ತಿದ್ದ. ಮನುಷ್ಯರು ಅವನನ್ನು ಕಂಡರೆ ಭಯದಿಂದ ಓಡುತ್ತಿದ್ದರು.

ಹಾಗೊಮ್ಮೆ ಪರಶುವು ಕಾಡಿನಲ್ಲಿ ಸಂಚರಿಸುತ್ತಿರುವಾಗ ಶಾಕಲ್ಯ ಮುನಿಯನ್ನು ಕಂಡ. ಅವನನ್ನು ಕಂಡ ಕೂಡಲೇ ಪರಶುವಿಗೆ ಅವನನ್ನು ಪೀಡಿಸಬೇಕು, ತಿನ್ನಬೇಕು ಎಂಬ ಆಸೆ ಉಂಟಾಗಲಿಲ್ಲ ಬದಲಿಗೆ ತನ್ನ ಪೂರ್ವಸ್ವರೂಪದ ನೆನಪಾಗತೊಡಗಿತು. ಈ ಮಹರ್ಷಿಯಿಂದಲೇ ತನಗೆ ಶಾಪವಿಮೋಚನೆ ಎಂದು ಸ್ಪಷ್ಟವಾಗತೊಡಗಿತು.

ಆದರೆ, ಮಹರ್ಷಿಯನ್ನು ನೇರವಾಗಿ ಸಮೀಪಿಸುವ ಹಾಗಿಲ್ಲ, ಕೊಂಚ ಹೊತ್ತು ಯೋಚಿಸಿದ. ರಾಕ್ಷಸನಲ್ಲವೆ? ಅವರಿಗೆ ಎಂತೆಂಥ ವಿದ್ಯೆಗಳೂ ಕರಗತವಾಗಿರುತ್ತವೆ. ಅವನು ಒಬ್ಬಾಕೆ ಮುನಿಕನ್ಯೆಯನ್ನು ಸೃಷ್ಟಿಸಿದ. ತಾನು ಬ್ರಾಹ್ಮಣ ವೇಷವನ್ನು ಧರಿಸಿದ.

ಅವರಿಬ್ಬರೂ ಶಾಕಲ್ಯ ಮುನಿಯ ಆಶ್ರಮಕ್ಕೆ ಬಂದರು. ಆಗಂತುಕರನ್ನು ನೋಡಿದ ಶಾಕಲ್ಯ ಸಹಜವಾಗಿಯೇ, ''ಏನು ಬಂದಿರಿ?'' ಎಂದು ವಿಚಾರಿಸಿದ. ಆಗ, ಬ್ರಾಹ್ಮಣ ವೇಷಧಾರಿಯಾಗಿದ್ದ ಪರಶುವು, ''ಮಹರ್ಷಿಗಳೇ, ಇವಳು ನನ್ನ ಮಗಳು, ಇವಳಿಗೆ ಯೋಗ್ಯನಾದ ವರವನ್ನು ಹುಡುಕುತ್ತ ಸಂಚರಿಸುತ್ತಿದ್ದೇನೆ. ಈ ದಿನ ನಿಮ್ಮ ಆಶ್ರಮದಲ್ಲಿ ಉಳಿದುಕೊಂಡು ನಾಳೆ ಹೋಗುವವನಿದ್ದೇನೆ. ದಯವಿಟ್ಟು ಅನುಮತಿ ಕೊಡಬೇಕು'' ಎಂದು ಕೇಳಿದನು. ಶಾಕಲ್ಯನು ಅತಿಥಿಗಳನ್ನು 'ಹೋಗಿ' ಎಂದು ಹೇಳುವವನೇ ಅಲ್ಲ. ಆ ದಿನ ರಾತ್ರಿಯ ಭೋಜನವನ್ನು ಅವರಿಗೆ ಉಣಬಡಿಸಿ ಚಾಪೆಯನ್ನು ಹಾಸಿಕೊಟ್ಟನು.

ರಾತ್ರಿ ಎಲ್ಲರೂ ಮಲಗಿದ್ದರು. ಪರಶು ಎದ್ದನು. ಬ್ರಾಹ್ಮಣ ವೇಷವನ್ನು ಕಳಚಿ ರಾಕ್ಷಸನಾಗಿ ಶಾಕಲ್ಯ ಮಹರ್ಷಿಯ ಮುಂದೆ ನಿಂತನು. ಶಾಕಲ್ಯನಾದರೋ ಮಹಾತಪಸ್ವಿ. ಅವನು ಹೆದರಲಿಲ್ಲ. ''ನಿಜ ಹೇಳು, ನೀನು ಯಾರು?'' ಎಂದು ಪ್ರಶ್ನಿಸಿದನು.

ಆಗ ಪರಶುವು, ''ಎಲೈ ಮಹರ್ಷಿಯೆ, ನಾನು ಬ್ರಾಹ್ಮಣನಲ್ಲ. ಅದು ನನ್ನ ಕಪಟವೇಷ. ನಿಜವಾಗಿ ನಾನೊಬ್ಬ ರಾಕ್ಷಸ. ನಿನ್ನನ್ನು ಈಗಲೇ ಭಕ್ಷಿಸುವೆನು'' ಎಂದನು. ಅವನ ಮಾತನ್ನು ಕೇಳಿ ಶಾಕಲ್ಯ ನಕ್ಕು ಹೇಳಿದನು, ''ನೀನು ಯಾರಾದರೇನು? ಬ್ರಾಹ್ಮಣನೇ ಆಗಿರು, ರಾಕ್ಷಸನೇ ಆಗಿರು. ಈ ರಾತ್ರಿಯ ಮಟ್ಟಿಗೆ ನನ್ನ ಅತಿಥಿ. ಮನೆಗೆ ಆಸರೆ ಬೇಡಿ ಬಂದವನನ್ನು ತೃಪ್ತಿ ಪಡಿಸುವುದೇ ನನ್ನ ಕರ್ತವ್ಯವಾಗಿದೆ. ನನ್ನ ಈ ದೇಹವು ನಿನಗೆ ಆಹಾರವಾಗಿ, ನಿನ್ನ ಹೊಟ್ಟೆ ತುಂಬುವುದಾದರೆ ನನಗೆ ಅದರಲ್ಲಿ ಸಂತೋಷವಿದೆ'' ಎಂದು ತನ್ನನ್ನು ತಿನ್ನು ಎಂಬ ಭಾವದಲ್ಲಿ ರಾಕ್ಷಸನ ಮುಂದೆ ನಿಂತನು!

ತಾನಿನ್ನು ಅಳಿಯುವೆನೆಂದು ಖಚಿತವಾಗುತ್ತಲೇ ಶ್ರೀಮಹಾವಿಷ್ಣುವನ್ನು ಧ್ಯಾನಿಸುತ್ತಿದ್ದನು. ರಾಕ್ಷಸನು ಶಾಕಲ್ಯನ ದೇಹವನ್ನು ತಿನ್ನುವುದಕ್ಕೆ ಮುಂದಾದನು. ತನ್ನ ಹರಿತವಾದ ಹಲ್ಲು ಮತ್ತು ಉಗುರುಗಳಿಂದ ಶಾಕಲ್ಯನ ದೇಹವನ್ನು ತುಂಡರಿಸಿ ತಿನ್ನುವುದಕ್ಕೆ ರಾಕ್ಷಸನು ಪ್ರಯತ್ನಿಸಿದರೆ ಅವನ ಹಲ್ಲು ಮತ್ತು ಉಗುರುಗಳೇ ಮುರಿದು ಹೋದವು. ಕೊನೆಗೆ ಪರಶುವು ಸೋತುಹೋಗಿ ಕ್ಷಮೆ ಯಾಚಿಸಿದನು. ಕರುಣಾಳುವಾದ ಶಾಕಲ್ಯನು ಅವನನ್ನು ಕ್ಷಮಿಸಿದನು. ಪರಶುವು ತನಗೆ ಪ್ರಾಪ್ತವಾದ ಶಾಪದಿಂದ ಬಿಡುಗಡೆ ಮಾಡಬೇಕೆಂದು ಪುನಃ ಪ್ರಾರ್ಥಿಸಿದನು. ಅವನಿಗೆ ಮಹಾವಿಷ್ಣುವನ್ನು ಸ್ಮರಿಸುತ್ತ ಗೌತಮೀ ನದಿಯಲ್ಲಿ ಸ್ನಾನ ಮಾಡಿದರೆ ಶಾಪ ವಿಮೋಚನೆಯಾಗುವುದೆಂದು ಶಾಕಲ್ಯನು ಸೂಚಿಸಿದನು. ಪರಶುವು ಹಾಗೆಯೇ ಮಾಡಿ ಮೊದಲಿನಂತೆ ಮನುಷ್ಯನಾದನು. ಆದರೆ, ದುರ್ಜನನಾಗಲಿಲ್ಲ. ಸಜ್ಜನತ್ವದಿಂದ ಜೀವನ ನಡೆಸಿ ಎಲ್ಲರ ಪ್ರೀತಿಗೆ ಪಾತ್ರನಾದನು.

★ ★ ★ ★

# ರೈಕ್ವ

ಜಾನಶ್ರುತಿ ಪೌತ್ರಾಯಣನು ಧರ್ಮಶೀಲನೂ ದಾನಶೀಲನೂ ಆದ ರಾಜನಾಗಿದ್ದನು. ರಾಜ್ಯದ ಎಲ್ಲ ಕಡೆಗಳಲ್ಲಿ ಜನರಿಗೆ ಭೋಜನದ ಸೌಕರ್ಯವನ್ನು ಒದಗಿಸಲು ಛತ್ರಗಳನ್ನು ನಿರ್ಮಿಸಿದ್ದನು. ಇಂತಹ ಉದಾರನಾದ ರಾಜನು ತನ್ನ

ಉನ್ನತವಾದ ಪ್ರಾಸಾದದಲ್ಲಿ ರಾತ್ರಿ ಮಲಗಿದ್ದಾಗ ಅವನ ಮೇಲಿನಿಂದ ದೇವಹಂಸಗಳು ಹಾರುತ್ತಾ ಸಾಗಿದ್ದವು. ಆ ಸಂದರ್ಭದಲ್ಲಿ ಒಂದು ಹಂಸವು ಇನ್ನೊಂದು ಹಂಸವನ್ನು ತಡೆದು ''ರಾಜಾ ಜಾನಶ್ರುತಿಯು ಕೆಳಗೆ ಮಲಗಿದ್ದಾನೆ. ಅವನ ದೇಹದಿಂದ ಹೊರಹೊಮ್ಮಿದ ಜ್ಯೋತಿಯು ಸುತ್ತಲೂ ಹರಡಿದೆ. ಅದನ್ನು ಸ್ಪರ್ಶಿಸುವ ಸಾಹಸ ಮಾಡಬೇಡ. ನಿನ್ನ ಮೈಯೆಲ್ಲಾ ಸುಟ್ಟು ಬೂದಿಯಾದೀತು'' ಎಂದು ಎಚ್ಚರಿಸುತ್ತದೆ. ಆಗ ಇನ್ನೊಂದು ಹಂಸವು ''ರೈಕ್ವನನ್ನು ಹೊಗಳುವ ರೀತಿಯಲ್ಲಿ ಈ ರಾಜನ ಬಗ್ಗೆ ಮಾತನಾಡುತ್ತಿರುವಿಯಲ್ಲ! ಆ ರೈಕ್ವನ ಯೋಗ್ಯತೆಯು ಇವನಿಗೆಲ್ಲಿದೆ?'' ಎಂಬುದಾಗಿ ರಾಜನನ್ನು ಮೂದಲಿಸಿ ಮಾತನಾಡಿತು. ಹಂಸಗಳ ಈ ಸಂವಾದವನ್ನು ಕೇಳಿದ ರಾಜನು ರೈಕ್ವನನ್ನು ಸಂದರ್ಶಿಸಿ ಅವನಿಂದ ಉಪದೇಶವನ್ನು ಪಡೆಯಲು ಉತ್ಕಂಠಿತನಾದನು. ಎಲ್ಲಿಯೂ ರೈಕ್ವನು ಕಾಣಲಿಲ್ಲ. ಕೊನೆಗೆ ಒಂದು ಕಡೆ ಎತ್ತಿನ ಗಾಡಿಯ ಕೆಳಗೆ ಕಜ್ಜಿ ತಿರಿಸಿಕೊಂಡು ಕುಳಿತಿರುವ ಅವಧೂತ ಯೋಗಿ ರೈಕ್ವನನ್ನು ಗುರುತಿಸಿದ ದೂತರು ರಾಜನಿಗೆ ರೈಕ್ವನ ಇರುವನ್ನು ನಿವೇದಿಸಿದರು. ಮಹಾರಾಜರು ರೈಕ್ವನ ಬಳಿಗೆ ಧಾವಿಸಿ ನೂರಾರು ಗೋವುಗಳು ಮತ್ತು ನಾಣ್ಯ , ವಾಹನಗಳನ್ನು ಗುರುದಕ್ಷಿಣೆಯೆಂದು ಸಮರ್ಪಿಸುತ್ತಾ ಉಪದೇಶಕ್ಕಾಗಿ ಪ್ರಾರ್ಥಿಸಿದನು. ರೈಕ್ವನು ''ಎಲೈ ಶೂದ್ರನೇ! ಈ ಕಾಣಿಕೆಗಳೆಲ್ಲ ನಿನಗೇ ಇರಲಿ. ನನಗೆ ಇದರ ಅವಶ್ಯಕತೆಯೇನೂ ಇಲ್ಲ'' ಎಂದು ಹೇಳಿ ಈ ಕೊಡುಗೆಯನ್ನು ತಿರಸ್ಕರಿಸಿದನು. ರಾಜನು ಹಂಸಗಳು ಮಾಡಿದ ಅವಮಾನದಿಂದ ದುಃಖಿತನಾಗಿ ರೈಕ್ವಮುನಿಯ ಬಳಿಗೆ ಧಾವಿಸಿ ಬಂದಿದ್ದನು. ಶೋಕದಿಂದ ದ್ರವಿತನಾಗಿ ಓಡಿ ಬಂದಿರುವುದರಿಂದ ರಾಜನನ್ನು ಮುನಿಯು ಶೂದ್ರನೆಂದು ಸಂಬೋಧಿಸಿದ್ದಾನೆ. ರಾಜನು ತಾನು ನೀಡಿದ ಕಾಣಿಕೆಯನ್ನು ರೈಕ್ವನು ತಿರಸ್ಕರಿಸಿದ್ದನ್ನು ತಪ್ಪಾಗಿ ಗ್ರಹಿಸಿಕೊಂಡನು. ಭೌತಿಕ ಸಂಪತ್ತಿನ ಕಾಮನೆಯೇ ಇಲ್ಲದ ರೈಕ್ವನು ನಿರಪೇಕ್ಷೆಯಿಂದ ಈ ಕಾಣಿಕೆಯನ್ನು ತ್ಯಜಿಸಿದ್ದರೆ ತನ್ನ ಕೊಡುಗೆಯು ಕಡಿಮೆಯಾಯಿತೆಂದು ಮುನಿಯು ಅದನ್ನು ಸ್ವೀಕರಿಸಲಿಲ್ಲವೆಂದು ತಪ್ಪಾಗಿ ಭಾವಿಸಿ ಇನ್ನೂ ಹೆಚ್ಚಿನ ದ್ರವ್ಯಸಂಪತ್ತನ್ನು ಮತ್ತು ಪಶುಸಂಪತ್ತಿನ ಜೊತೆಗೆ ತನ್ನ ಮಗಳನ್ನೂ ಕರೆದುಕೊಂಡು ಬಂದು ಮುನಿಗೆ ಸಮರ್ಪಿಸಿದನು. ರೈಕ್ವನು ಇದನ್ನು ನೋಡಿ

ಇನ್ನೂ ಅಸಮಾಧಾನಗೊಂಡು "ಈ ಧನಕಾಣಿಕೆ ಸಂಪತ್ತುಗಳು ಜ್ಞಾನವನ್ನು ಪಡೆಯುವ ಮುಖವಲ್ಲ. ಕೇವಲ ದ್ರವ್ಯವನ್ನು ವೆಚ್ಚಮಾಡಿ ಸಂಪತ್ತಿನ ಬಲದಿಂದ ಜ್ಞಾನವನ್ನು ಪಡೆಯಬಲ್ಲೆನೆಂದು ಭಾವಿಸಬೇಡ. ಜ್ಞಾನವನ್ನು ಪಡೆಯಲು ಭಕ್ತಿ, ವೈರಾಗ್ಯ, ಜಿಜ್ಞಾಸೆಗಳೇ ಅಗತ್ಯ. ಧನದಿಂದ ಜ್ಞಾನವನ್ನು ಕೊಂಡುಕೊಳ್ಳಲು ಸಾಧ್ಯವಿಲ್ಲ" ಎಂದು ಹೇಳಿದನು. ಆದರೂ ರಾಜನ ಪ್ರಾರ್ಥನೆ, ಕಳಕಳಿಯನ್ನು ಗಮನಿಸಿ ಅವನು ಕೊಡಮಾಡಿದ ಗ್ರಾಮದಲ್ಲಿ ತಾತ್ಕಾಲಿಕವಾಗಿ ಕೆಲ ಸಮಯ ಇದ್ದು ಆತನಿಗೆ ಸಂವರ್ಗ ವಿದ್ಯೆಯ ಉಪದೇಶವನ್ನು ಮಾಡುವನು. ದೇಹದ ಹೊರಗಿನ ಭೌತಿಕ ಅಭಿಮಾನಿಗಳಾದ ಸೂರ್ಯಚಂದ್ರಾದಿ ದೇವತೆಗಳಿಗೆ ವಾಯುದೇವನಾಗಿಯೂ, ದೇಹದ ಒಳಗೆ ಇಂದ್ರಿಯಗಳಿಗೆ ಅಭಿಮಾನಿಗಳಾದ ದೇವತೆಗಳಿಗೆ ಪ್ರಾಣದೇವನಾಗಿಯೂ, ಜೀವೋತ್ತಮನಾದ ಮುಖ್ಯಪ್ರಾಣನೇ ನಿಯಾಮಕನೂ, ಲಯಕರ್ತನೂ ಆಗಿರುವನು. ಲಯಕಾರಕನಾಗಿ ಇರುವುದರಿಂದಲೇ ಅವನು 'ಸಂವರ್ಗ'ನಾಗಿರುವನು. ಮುಖ್ಯವಾಯುವಿನ ಈ ಎರಡು ರೂಪಗಳನ್ನು ತಿಳಿದವನು ಮಹಾಜ್ಞಾನಿಯಾಗಿರುವನು. ಸರ್ವೋತ್ತಮನಾದ ಪರಬ್ರಹ್ಮನೇ ಈ ಮುಖ್ಯಪ್ರಾಣನಿಗೂ ಆಶ್ರಯ ಹಾಗೂ ಲಯಕಾರಕನೂ ಆಗಿರುತ್ತಾನೆ. ಮುಂತಾಗಿ ಉಪದೇಶಿಸಿದನು. ಧನಕನಕಗಳಿಂದ ಕೃಷ್ಣನಲ್ಲಿ ಮನನಿಲ್ಲಿಸುವುದು ಮುಖ್ಯವೆಂದು ರೆಕ್ವನ ಅಭಿಪ್ರಾಯವಾಗಿದೆ.

★ ★ ★ ★

## ಸತ್ಯಕಾಮ

ಜಾಬಾಲೆಯ ಪುತ್ರನಾದ ಸತ್ಯಕಾಮ ಗುರುಕುಲ ವಾಸವನ್ನು ಬಯಸಿ ಅದಕ್ಕಾಗಿ ತನ್ನ ಗೋತ್ರವನ್ನು ತಿಳಿಯಲು ತಾಯಿಯಲ್ಲಿ ತನ್ನ ಗೋತ್ರದ ಬಗ್ಗೆ ಪ್ರಶ್ನಿಸುವನು. "ನಾನು ದಾಸಿಯಾಗಿದ್ದು ತಾರುಣ್ಯದಲ್ಲಿ ನಿನ್ನನ್ನು ಪಡೆದೆ. ನಿನ್ನ ಗೋತ್ರವು ಯಾವುದೆಂದು ನನಗೂ ತಿಳಿಯದು" ಎಂದು ಆ ತಾಯಿ ಏನೂ ಕಪಟವಿಲ್ಲದೆ ನಿಜಸ್ಥಿತಿಯನ್ನು ತಿಳಿಸಿದಳು. ಗುರು ಗೌತಮರ ಬಳಿಗೆ ಹೋದ ಸತ್ಯಕಾಮನೂ ನಿರ್ವಂಚನೆಯಿಂದ ಇದನ್ನೇ ಅರುಹಿದನು. ಯಾವುದಾದರೂ ಒಂದು

ಗೋತ್ರವನ್ನು ಕಲ್ಪಿಸಿ ಗುರುಗಳ ಮುಂದೆ ಸುಳ್ಳು ಹೇಳಲು ಪ್ರವರ್ತಿಸಲಿಲ್ಲ. ಅವನ ಈ ಸತ್ಯವಚನದಿಂದ ಸರಳ ವರ್ತನೆಯಿಂದ ಗುರುಗಳು ಪ್ರಸನ್ನರಾದರು. ಇಂತಹ ಪ್ರಾಮಾಣಿಕತನದ ನಿಷ್ಕಪಟ ವರ್ತನೆಯಿಂದ ಸತ್ಯಕಾಮನು ಬ್ರಾಹ್ಮಣನೆಂದೇ ನಿರ್ಧರಿಸಿ ತನ್ನ ಗುರುಕುಲದಲ್ಲಿ ಅವನಿಗೆ ಆಶ್ರಯವನ್ನು ನೀಡಿದರು. ನಾಲ್ಕುನೂರು ದುರ್ಬಲ ಗೋವುಗಳ ಪೋಷಣೆಯ ಜವಾಬ್ದಾರಿಯನ್ನು ಅವನಿಗೆ ನೀಡಿ ಈ ಗೋಸಂಪತ್ತಿಯು ಸಾವಿರ ಸಂಖ್ಯೆಗೆ ತಲುಪುವವರೆಗೆ ಇವುಗಳ ಸೇವೆಯನ್ನು ಮಾಡಲು ಆದೇಶಿಸಿದರು. ಅದರಂತೆ ಅತ್ಯಂತ ನಿಷ್ಠೆಯಿಂದ ಸಾವಿರ ಗೋವುಗಳಾಗುವವರೆಗೆ ಈ ಕಾಯಕವನ್ನು ನಡೆಸಿದನು. ತನ್ನ ಗೋಸೇವೆಯ ಅವಸರದಲ್ಲಿ ಕಾಡುಮೇಡುಗಳಲ್ಲಿ ಸುತ್ತಾಡುತ್ತಿದ್ದ ಈ ಬಾಲಕ ಸತ್ಯಕಾಮನು ಗುರುಗಳ ಉಪದೇಶವಿಲ್ಲದೆಯೆ ತನ್ನ ಸುತ್ತಮುತ್ತಲಿನ ವಸ್ತುಗಳಿಂದಲೇ ದಿವ್ಯ ಜ್ಞಾನವನ್ನು ಪಡೆದನು. ವೃಷಭ, ಹಂಸ, ನೀರುಕೋಳಿಗಳನ್ನು ನೋಡಿ ಅಲ್ಲಿರುವ ದೇವತೆಗಳಿಂದಲೇ ಅವನಿಗೆ ತತ್ತ್ವೋಪದೇಶ ದೊರೆಯಿತು. ಅಗ್ನಿಯ ಉಪಾಸನೆಗೈಯುವಾಗ ಅಗ್ನಿದೇವನೇ ಅವನಿಗೆ ಜ್ಞಾನವನ್ನು ನೀಡಿದನು. ನಾಲ್ಕು ದಿಕ್ಕುಗಳಲ್ಲಿ, ಭೂಮಿ, ಆಕಾಶ ಮುಂತಾದ ವಸ್ತುಗಳಲ್ಲಿ, ಪಶುಗಳಲ್ಲಿ, ಸೂರ್ಯ ಚಂದ್ರ ಮುಂತಾದ ತೇಜಸ್ಸುಗಳಲ್ಲಿ ನೆಲೆಸಿರುವ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ರೂಪಗಳ ದರ್ಶನವು ಈ ದೇವತೆಗಳಿಂದ ಸತ್ಯಕಾಮನಿಗೆ ದೊರೆಯಿತು. ಅವನೊಮ್ಮೆ ಗೌತಮರ ಮುಂದೆ ಬಂದು ನಿಂತಾಗ ಗೌತಮರು ಅವನನ್ನು ಸೂಕ್ಷ್ಮವಾಗಿ ಪರೀಕ್ಷಿಸಿದರು. ಅವನಲ್ಲಿರುವ ಬ್ರಹ್ಮತೇಜಸ್ಸನ್ನು ಕಂಡು ಆನಂದಭರಿತರಾಗಿ ''ಬ್ರಹ್ಮಜ್ಞಾನಿಯ ಲಕ್ಷಣವನ್ನು ನಿನ್ನಲ್ಲಿ ಕಾಣುತ್ತಿದ್ದೇನೆ. ನಿನಗೆ ಉಪದೇಶ ನೀಡಿದವರು ಯಾರು?'' ಎಂದು ಪ್ರಶ್ನಿಸುವರು. ''ನನಗೆ ಉಪದೇಶ ನೀಡಿದವರು ಮಾನವರಲ್ಲ. ಮನುಷ್ಯರಿಗಿಂತ ಬೇರೆಯಾದ ವ್ಯಕ್ತಿಗಳು ನನಗೆ ಈ ದಿವ್ಯಜ್ಞಾನವನ್ನು ನೀಡಿದ್ದಾರೆ. ಆದರೂ ನನಗೆ ತೃಪ್ತಿಯಿಲ್ಲ. ನನ್ನ ಸಾಕ್ಷಾತ್ ಗುರುವಾದ ತಮ್ಮಿಂದಲೇ ನಾನು ಉಪದೇಶ ಪಡೆಯಬೇಕಾಗಿದೆ'' ಎಂದು ಪ್ರಾರ್ಥಿಸಿ ಪುನಃ ಅವರಿಂದ ಉಪದೇಶವನ್ನು ಪಡೆಯುವನು. ಸತ್ಸಂಗದ ಫಲದಿಂದ ಜ್ಞಾನಿಯಾದ.

★ ★ ★ ★

# ಸಾಂದೀಪನಿ

ಶ್ರೀಕೃಷ್ಣನೂ ಅವನ ಅಣ್ಣನಾದ ಬಲರಾಮನೂ ಪ್ರಾಯಪ್ರಬುದ್ಧರಾದಾಗ ಅವರಿಗೆ ವಿದ್ಯೆ ಕಲಿಸುವ ಗುರುಗಳು ಯಾರು ಎಂದು ತಂದೆತಾಯಿ ಯೋಚಿಸುತ್ತಿದ್ದರು. ಅವಗೆ ಫಕ್ಕನೆ ಹೊಳೆದ ಹೆಸರು ಸಾಂದೀಪಿನಿ ಮಹರ್ಷಿಗಳದ್ದು. ಆವಂತಿಯೆಂಬ ಊರಿನ ಸಮೀಪ ತಮ್ಮದೇ ಗುರುಕುಲವನ್ನು ಕಟ್ಟಿಕೊಂಡು ಸಾಂದೀಪನಿ ಋಷಿಗಳು 'ಗುರುಶ್ರೇಷ್ಠ' ರೆಂಬ ಪ್ರಸಿದ್ಧಿಗೆ ಪಾತ್ರರಾಗಿದ್ದರು. ಆದರೆ, ಅವರ ಮನಸ್ಸಿನಲ್ಲಿ ಗಾಢವಾದ ಚಿಂತೆಯೊಂದು ಇತ್ತು. ಅವರ ಮಗನು ಪ್ರಭಾಸವೆಂಬ ಪುಣ್ಯಕ್ಷೇತ್ರದ ಪುಷ್ಕರಿಣಿಯಲ್ಲಿ ಸ್ನಾನ ಮಾಡಲು ತೆರಳಿದವನು ಕಣ್ಮರೆಯಾಗಿದ್ದನು. ಪುತ್ರಶೋಕ ಸಾಂದೀಪನಿ ದಂಪತಿಗಳನ್ನು ನಿರಂತರವಾಗಿ ಕಾಡುತ್ತಿತ್ತು. ಆದರೆ, ತಮ್ಮ ಮಗ ಎಂದಾದರೂ ಬಂದೇ ಬರುವ ಎಂಬ ದೃಢ ವಿಶ್ವಾಸ ಅವರಿಗಿತ್ತು.

ಶ್ರೀಕೃಷ್ಣ-ಬಲರಾಮರು ತಮ್ಮ ಆಶ್ರಮಕ್ಕೆ ವಿದ್ಯೆ ಕಲಿಯಲು ಬಂದುದರಿಂದ ಸಾಂದೀಪನಿಗಳಿಗೆ ಚಿಂತೆ ಮರೆಯುವಂತಾಯಿತು. ಶ್ರೀಕೃಷ್ಣನು ಸಾಕ್ಷಾತ್ ಮಹಾವಿಷ್ಣುವಿನ ಅವತಾರವೆಂದು ಅವರು ತಿಳಿದಿದ್ದರು. ಸ್ವತಃ ದೇವರಿಗೆ ವಿದ್ಯೆ ಒಪ್ಪಿಸುವುದಕ್ಕಿಂತ ದೊಡ್ಡ ಭಾಗ್ಯವುಂಟೆ?

ಶ್ರೀಕೃಷ್ಣ-ಬಲರಾಮರು ಸಾಂದೀಪಿನಿಗಳಲ್ಲಿ ವೇದಶಾಸ್ತ್ರಗಳನ್ನೆಲ್ಲ ಲೋಕದ ದೃಷ್ಟಿಯಿಂದ ಅಧ್ಯಯನ ಮಾಡಿದರು. ಸಾಂದೀಪನಿ ಮುನಿಗಳ ಗುರುಕುಲದಲ್ಲಿ ಭೇದಭಾವ ಇರಲಿಲ್ಲ. ರಾಜಕುಮಾರರಲ್ಲದೆ, ಬಡವರ ಮಕ್ಕಳೂ ಅಲ್ಲಿ ವಿದ್ಯೆ ಕಲಿಯಬಹುದಾಗಿತ್ತು. ಹಾಗಾಗಿ, ಕೃಷ್ಣ-ಬಲರಾಮರೊಂದಿಗೆ ಕಡು ಬಡವನ ಮಗನಾದ ಕುಚೇಲನೂ ವಿದ್ಯಾರ್ಥಿಯಾಗಿ ಬಂದಿದ್ದ. ಶ್ರೀಕೃಷ್ಣ-ಬಲರಾಮರಿಗೂ ತಾವು ರಾಜಕುಮಾರರೆಂಬ ಅಹಂಭಾವವಿರಲಿಲ್ಲ. ಅವರು ಮೂವರು ಸದಾ ಜೊತೆಯಾಗಿರುತ್ತಿದ್ದರು. ಆಟಪಾಠಗಳಲ್ಲಿ ಸಹಭಾಗಿಗಳಾಗಿದ್ದರು. ಶ್ರೀಕೃಷ್ಣ-ಬಲರಾಮರು ಕುಚೇಲನನ್ನು ಕೂಡ ತುಂಬ ಪ್ರೀತಿಯಿಂದ ಕಾಣುತ್ತಿದ್ದರು.

ಎಲ್ಲ ರೀತಿಯ ವಿದ್ಯೆಗಳನ್ನು ಕಲಿತಾಯಿತು. ಇನ್ನು ಎಲ್ಲರೂ ತಮ್ಮ ಮನೆಗಳಿಗೆ ಮರಳಬೇಕು. ಶ್ರೀಕೃಷ್ಣ-ಬಲರಾಮ-ಕುಚೇಲರು ತಮ್ಮ ಮನೆಗೆ ಹೊರಟು ನಿಲ್ಲುವಾಗ ಸಾಂದೀಪನಿಗಳಿಗೆ ತುಂಬ ದುಃಖವಾಯಿತು. ಗುರುಗಳನ್ನು ಬಿಟ್ಟು ತೆರಳಲು ಶಿಷ್ಯರಿಗೂ ಬೇಸರ. ಶ್ರೀಕೃಷ್ಣ-ಬಲರಾಮರು ಸಾಂದೀಪನಿ ಮುನಿಯ ಪಾದಕ್ಕೆ ನಮಸ್ಕರಿಸಿ ಸಂಪ್ರದಾಯದಂತೆ ಗುರುದಕ್ಷಿಣೆಯನ್ನು ನೀಡಲು ಸಿದ್ಧರಾಗಿ ನಿಂತರು. ಅವರೆಂದರು, 'ಗುರುಗಳೆ ನಮ್ಮಿಂದ ಏನಾದರೂ ಗುರುದಕ್ಷಿಣೆಯನ್ನು ಸ್ವೀಕರಿಸಬೇಕು. ತಮ್ಮ ಅಪೇಕ್ಷೆಯನ್ನು ಹೇಳಬೇಕು'.

ಆದರೆ, ಗುರು ಸಾಂದೀಪನಿಗಳು ತನಗೆ ಯಾವುದೇ ಅಪೇಕ್ಷೆ ಇಲ್ಲವೆಂದು ಹೇಳಿದರು. ಅಲ್ಲಿಯೇ ಗುರುಪತ್ನಿ ಇದ್ದರು. ಬಾಲಕರು ಅವರಿಗೂ ನಮಸ್ಕರಿಸಿ, 'ಅಮ್ಮಾ, ಗುರುಗಳು ನಮ್ಮಿಂದ ಯಾವುದೇ ರೀತಿಯ ಗುರುದಕ್ಷಿಣೆಯನ್ನು ನಿರೀಕ್ಷಿಸುತ್ತಿಲ್ಲ. ಆದರೆ, ತಾವಾದರೂ ನಮ್ಮಿಂದ ದಕ್ಷಿಣೆಯನ್ನು ಪಡೆಯಬೇಕು' ಎಂದು ಕೇಳಿಕೊಂಡರು.

ಗುರುಪತ್ನಿ ಕೊಂಚ ಹೊತ್ತು ಮೌನ ತಾಳಿದಳು. ಬಳಿಕ, 'ನಮ್ಮ ಮಗ ಈ ಹಿಂದೆ ಪ್ರಭಾಸ ಕ್ಷೇತ್ರದಲ್ಲಿ ಜಲದಲ್ಲಿ ಮುಳುಗಿಹೋಗಿದ್ದಾನೆ. ಅವನ ಅಗಲುವಿಕೆ ನಮ್ಮನ್ನು ಕಾಡುತ್ತಿದೆ. ನೀವು ಅವನನ್ನು ಮರಳಿ ತಂದುಕೊಟ್ಟರೆ ಅದೇ ಗುರುದಕ್ಷಿಣೆ ಎನ್ನಿಸಿಕೊಳ್ಳುತ್ತದೆ' ಎಂದಳು.

ಶ್ರೀಕೃಷ್ಣ-ಬಲರಾಮರು ಗುರುಗಳಿಗೂ ಗುರುಪತ್ನಿಗೂ ನಮಿಸಿ ಗುರುಪುತ್ರನನ್ನು ಮರಳಿ ತರುವುದಕ್ಕೆ ಹೊರಟರು. ಪ್ರಭಾಸ ಕ್ಷೇತ್ರಕ್ಕೆ ಬಂದು, 'ನೀನು ನುಂಗಿರುವ ಗುರುಪುತ್ರನನ್ನು ಮರಳಿಸು' ಎಂದು ಸಮುದ್ರರಾಜನಿಗೆ ಆಜ್ಞಾಪಿಸಿದರು. ಆಗ ಸಮುದ್ರರಾಜನು ಹೆದರುತ್ತ, 'ಅವನನ್ನು ಇಲ್ಲಿ ವಾಸಿಸುವ ಪಂಚಜನನೆಂಬ ರಾಕ್ಷಸ ಕೊಂದಿರಬೇಕು' ಎನ್ನುತ್ತಾನೆ. ಅದರಂತೆ ದುಷ್ಟನಾದ ಪಂಕಜನ ರಾಕ್ಷಸನ ಮೇಲೆ ಯುದ್ಧ ಸಾರಿ ಅವನನ್ನು ಕೊಲ್ಲುತ್ತಾರೆ. ಅವನ ಅಸ್ಥಿಯಿಂದ ಪಾಂಚಜನ್ಯವೆಂಬ ಶಂಖವನ್ನು ಸ್ವೀಕರಿಸಿ ಶ್ರೀಕೃಷ್ಣ ತನ್ನಲ್ಲಿ ಇಟ್ಟುಕೊಳ್ಳುತ್ತಾನೆ. ಆದರೆ, ಪಂಚಜನ ನುಂಗಿದ ಗುರುಪುತ್ರ ಅಸು ನೀಗಿ ಯಮನ ಲೋಕ ಸೇರಿರುತ್ತಾನೆ. ಶ್ರೀಕೃಷ್ಣ ಬಲರಾಮರು

ಯಮಧರ್ಮ ರಾಯನಲ್ಲಿಗೆ ಹೋಗಿ ಅವನನ್ನು ಮೆಚ್ಚಿಸಿ ಗುರುಪುತ್ರನನ್ನು ಮರಳಿ ಕರೆತರುತ್ತಾರೆ. ತಮ್ಮ ಮಗನನ್ನು ನೋಡಿ ಸಾಂದೀಪನಿ ಮುನಿ ದಂಪತಿಗೆ ತುಂಬ ಸಂತೋಷವಾಯಿತು. ಶ್ರೀಕೃಷ್ಣ-ಬಲರಾಮರು ಸಾಂದೀಪನಿ ಮುನಿಗಳ ಹೆಮ್ಮೆಯ ಶಿಷ್ಯರೆಂದು ಖ್ಯಾತರಾದರು.

★ ★ ★ ★

## ಜರತ್ಕಾರು

ಜರತ್ಕಾರುವು ಯಾಯಾವರ ವಂಶದ ಒಬ್ಬ ಮಹಾ ತಪಸ್ವಿಯಾದ ಋಷಿ. ಅವನು ಗ್ರಾಮೈಕರಾತ್ರಿ ಸಂಚಾರಮಾಡುತ್ತ ನಿರಾಹಾರದಿಂದ ಸೊರಗಿ ಕೊರಗಿ ಕಟ್ಟಿಗೆಯಂತಾದ ಕೃಶಕಾಯದಿಂದ ಭೂಮಂಡಲದಲ್ಲಿ ಸಂಚಾರಮಾಡುತ್ತಲಿದ್ದಾಗ ಒಂದುದಿನ ಅರಣ್ಯದಲ್ಲಿ ಒಂದು ದೊಡ್ಡ ತೆಗ್ಗಿನಲ್ಲಿ ಹುಲ್ಲುಕಡ್ಡಿಯನ್ನು ಹಿಡಿದುಕೊಂಡು ಕೆಳಗೆ ಮುಖಮಾಡಿ ಜೋತಾಡುತ್ತಿದ್ದ ತನ್ನ ಪಿತೃಪಿತಾಮಹರನ್ನು ಕಂಡನು. ಅವರ ಈ ದುರ್ದಶೆಯನ್ನು ಕಂಡು ಜರತ್ಕಾರುವು "ಸ್ವಾಮಿ ನೀವಾರು! ಹೀಗೇಕೆ ತಲೆ ಕೆಳಗಾಗಿ ನೇತಾಡುತ್ತಿರುವಿರಿ! ನಿಮ್ಮನ್ನು ಈ ದುರವಸ್ಥೆಯಿಂದ ಪಾರು ಮಾಡಲಿಕ್ಕೆ ನನ್ನ ಅರ್ಧ ಅಥವಾ ಈವರೆಗೆ ನಾ ಗೈದ ಸಂಪೂರ್ಣ ತಪಸ್ಸಿನ ಫಲವನ್ನು ಕೊಡಲಿಕ್ಕೂ ನಾನು ಸಿದ್ಧನಿದ್ದೇನೆ. ಅದರಿಂದ ತಮ್ಮ ಈ ದುಃಖವು ಯಾವುದರ ಮೂಲಕವಾಗಿ ಪ್ರಾಪ್ತವಾಗಿದೆ. ದಯಮಾಡಿ ತಿಳಿಸಿರಿ" ಎಂದು ದಯೆದುಂಬಿ ಕೇಳಿದ. ಆಗ ತೆಗ್ಗಿನಲ್ಲಿ ತಲೆಕೆಳಗಾಗಿ ಹಾಳು ಬಾವಿಯಲ್ಲಿ ಜೋತಾಡುತ್ತಿರುವ ಆ ಪಿತೃಗಳು "ಮಗು, ತಪಸ್ಸಿನ ಪುಣ್ಯವು ನಮ್ಮಲ್ಲಿಯೂ ಬೇಕಾದಷ್ಟಿದೆ. ನಿನ್ನ ತಪಃ ಫಲವನ್ನು ತೆಗೆದುಕೊಂಡು ನಮಗೇನಾಗಬೇಕಾಗಿದೆ. ಆದರೆ ನಮ್ಮ ವಂಶದಲ್ಲಿ ಈಗ ಜರತ್ಕಾರು ಎಂಬುವವನೇ ಕೊನೆಯ ಮನುಷ್ಯನಾಗಿದ್ದು ಅವನು ಬ್ರಹ್ಮಚರ್ಯ ವ್ರತದಿಂದಲೇ ಇದ್ದು ತಪಸ್ವಿಯಾಗಿ ಎಲ್ಲೆಲ್ಲಿಯೋ ತಿರುಗುತ್ತಲಿದ್ದಾನೆ. ಅವನೊಬ್ಬ ಮದುವೆಯಾಗದ್ದರಿಂದ ಮುಂದೆ ನಮ್ಮ ವಂಶವೇ ನಿಸ್ಸಂತಾನವಾಗಿ ಹೋಗುವುದು. ಆದುದರಿಂದಲೇ ಹೀಗೆ ಈ ನರಕದಲ್ಲಿ ಒಂದೇ ಒಂದಾದ ಆಶಾತಂತುವನ್ನು ಹಿಡಿದುಕೊಂಡು ಇಲ್ಲಿ ಜೋತಾಡುತ್ತಿದ್ದೇವೆ. ಅವನೂ ಕೂಡ ಈಗ

ಮುದುಕನಾಗಬಂದಿದ್ದು ಅವನೊಬ್ಬ ಸತ್ತು ಹೋದರೆ ನಾವೀಗ ಕೈಯಲ್ಲಿ ಹಿಡಿದ ಈ ಜೇಕಿನ ಗಡ್ಡೆಯ ಪಾಚಿಯಂಥ ಹುಲ್ಲಿನ ಎಳೆಯೂ ಹರಿದುಹೋಗಿ ನಾವು ಈ ನರಕಗರ್ತದಲ್ಲಿ ಬಿದ್ದುಬಿಡುತ್ತೇವೆ. ಪುಣ್ಯಾತ್ಮ ನಿಮಗೆಲ್ಲಿಯಾದರೂ ನಮ್ಮ ವಂಶದ ಏಕಮಾತ್ರ ಒಣಗಿದ ಆಶಾಂಕುರವಾದ ಆ ಜರತ್ಕಾರವು ಕಂಡರೆ ಅವನಿಗೆ ನಿನ್ನ ಪಿತೃಗಳೆಲ್ಲರೂ ನರಕದಲ್ಲಿ ನಿನ್ನ ನೈಷ್ಠಿಕ ಬ್ರಹ್ಮಚರ್ಯದಿಂದಾಗಿ ತಲೆಕೆಳಗಾಗಿ ತೂಗಾಡುತ್ತಿದ್ದಾರೆ'' ಎಂದು ತಿಳಿಸಿರಿ ಎಂದು ಹೇಳಿದರು.

ಅದನ್ನು ಕೇಳಿ ಜರತ್ಕಾರುವು ಅತ್ಯಂತ ದುಃಖದಿಂದ ''ಸ್ವಾಮಿ, ಪಿತೃದ್ರೋಹಿಯಾದ ಆ ಪಾಪಿ ಜರತ್ಕಾರುವು ನಾನೇ. ನನ್ನಿಂದಲೇ ನಿಮಗೆ ಇಂಥ ದುರವಸ್ಥೆ ಒದಗಿ ಬಂದಿದೆ. ನನ್ನನ್ನು ಕ್ಷಮಿಸಿರಿ. ಬೇಕಾದರೆ ಈ ಅಪಚಾರಕ್ಕೆ ದಂಡಿಸಿರಿ'' ಎಂದು ಬಿನ್ನವಿಸಿದನು.

ಆಗ ಪಿತೃಗಳು ''ವತ್ಸ; ನೀನೇ ನಮ್ಮ ವಂಶದ ಕುಡಿಯೇ! ಹಾಗಾದರೆ ಬಹಳ ಸಂತೋಷವಾಯಿತು. ಆದರೆ ವತ್ಸ, ನಿನಗೆ ಇಷ್ಟು ವಯಸ್ಸಾದರೂ ಈವರೆಗೆ ಮದುವೆಯನ್ನು ಏಕೆ ಮಾಡಿಕೊಳ್ಳಲಿಲ್ಲ? ಈಗಲಾದರೂ ವಿವಾಹ ಮಾಡಿಕೊಂಡು ನಮ್ಮನ್ನು ಈ ಪುತ್ ಎಂಬ ನರಕದಿಂದ ಪಾರು ಮಾಡು'' ಎಂದು ಹೇಳಿದರು.

ಅದನ್ನು ಕೇಳಿ ಜರತ್ಕಾರುವು ''ಪೂಜ್ಯ ಪಿತೃಗಳೇ ನಾನು ನೈಷ್ಠಿಕ ಬ್ರಹ್ಮಚರ್ಯವ್ರತದಿಂದ ಆಜನ್ಮ ಅವಿವಾಹಿತನಾಗಿಯೇ ಇದ್ದು ಜಪತಪೋನುಷ್ಠಾನಗಳಿಂದ ನನ್ನ ಜನ್ಮವನ್ನು ಸಾರ್ಥಕವನ್ನಾಗಿ ಮಾಡಿಕೊಳ್ಳಬೇಕೆಂದು ನಿರ್ಧರಿಸಿದ್ದೆ. ಆದರೆ ಈಗ ನಿಮ್ಮ ಈ ದುರವಸ್ಥೆಯನ್ನು ನೋಡಿ ಮದುವೆ ಮಾಡಿಕೊಳ್ಳಬೇಕೆಂದು ಸಂಕಲ್ಪಿಸಿದ್ದೇನೆ. ಆದರೆ ನಾನು ಯಾರನ್ನಾದರೂ ಮದುವೆಯಾಗಬೇಕಾದರೆ ಮೂರು ನಿಬಂಧನೆಗಳಿವೆ. (೧) ನನ್ನ ಕೈ ಹಿಡಿಯಬೇಕಾದ ಕನ್ಯೆಯು ನನ್ನ ಹೆಸರಿನವಳೇ ಇರಬೇಕು. (೨) ಮತ್ತು ಕನ್ಯಾ ಕೊಡಿರಿ ಎಂದು ನಾನು ಯಾರನ್ನೂ ಯಾಚನೆ ಮಾಡುವುದಿಲ್ಲ. ನನ್ನ ಜೋಳಿಗೆಯಲ್ಲಿ ಭಿಕ್ಷೆ ತಂದು ಹಾಕಿದಂತೆ ಯಾರಾದರೂ ನಾನು 'ಕನ್ಯಾ' ಎಂದ ಕೂಡಲೇ ತಂದು ನಿಲ್ಲಿಸಬೇಕು. (೩) ಮತ್ತು ಮುಂದೆ ಆ ಕನ್ಯೆಯನ್ನು ಹೊಟ್ಟೆ

ಬಟ್ಟೆ ಕೊಟ್ಟು ರಕ್ಷಿಸುವ ಭಾರ ನನ್ನ ಮೇಲೆ ಇರಬಾರದು. ಬಸಿರು ಬಾಣಂತಿನ ಮಕ್ಕಳ ಪೋಷಣೆಯ ಭಾರ ಇದಾವುದನ್ನೂ ನಾನು ಹೊರಲಾರೆ. ಕನ್ಯಾ ಕೊಟ್ಟವನೇ ನನ್ನ ಹಾಗೂ ತನ್ನ ಮಗಳ ಸಂಸಾರದ ಭಾರವನ್ನು ಪೂರ್ತಿಯಾಗಿ ಕೊನೆಯವರೆಗೆ ಹೊರಲಿಕ್ಕೆ ಸಿದ್ಧನಿರಬೇಕು.

ನನ್ನ ಈ ಮೂರು ಕರಾರುಗಳಿಗೆ ಒಪ್ಪಿ ಯಾರಾದರೂ ನನಗೆ ಈ ಮುಪ್ಪಿನ ವಯಸ್ಸಿನಲ್ಲಿ ಕನ್ಯೆಯನ್ನು ಕೊಟ್ಟರೆ ನಾನು ನಿಮಗೋಸ್ಕರ ವಿವಾಹವಾಗುತ್ತೇನೆ'' ಎಂದು ಪಿತೃಗಳಿಗೆ ಆಶ್ವಾಸನೆಯನ್ನಿತ್ತು ಅಲ್ಲಿಂದ ಮುಂದೆ ಹೊರಟನು.

ಅವನು ತಾನು ಹೇಳಿದ ಮೂರು ಕರಾರುಗಳಿಗೆ ಒಪ್ಪಿ ಯಾರಾದರೂ ಕನ್ಯಾ ಕೊಡುವರೋ ಎಂಬ ನಿರೀಕ್ಷೆಯಿಂದ ಭೂಮಂಡಲವನ್ನೆಲ್ಲ ಸುತ್ತಿದನು. ಆದರೆ ವಯಸ್ಸಿನಿಂದಲೂ ತಪಸ್ಸಿನಿಂದಲೂ ಒಣಗಿ ಕಾಷ್ಠದಂತಾದ ಈ ಮುದುಕ ಮಹರ್ಷಿಗೆ ತಾವಾಗಿ ಯಾರೂ ಕನ್ಯಾ ಕೊಡಲಿಕ್ಕೆ ಮುಂದೆ ಬರಲಿಲ್ಲ.

ಕೊನೆಗೆ ಅವನು ಬೇಸತ್ತು ''ಅಡವಿಗೆ ಹೋಗಿ ಮೂರು ಸಲ ಕೈಯೆತ್ತಿ ಕನ್ಯಾ ಬೇಕು, ಕನ್ಯೆಬೇಕು, ಕನ್ಯೆ ಬೇಕು'' ಎಂದು ಮೂರುಬಾರಿ ಒದರುವುದು. ಅಷ್ಟರಲ್ಲಿ ಯಾರಾದರೂ ಬಂದರೆ, ಕನ್ಯೆಯನ್ನು ತಂದರೆ, ತನ್ನ ಕರಾರುಗಳಿಗೆಲ್ಲ ಒಪ್ಪಿ ಕೊಡುತ್ತೇನೆ ಎಂದರೆ ಮದುವೆಯಾಗುವುದು. ಇಲ್ಲದಿದ್ದರೆ ಇಲ್ಲ'' ಎಂದು ನಿರ್ಧರಿಸಿ ಅರಣ್ಯಕ್ಕೆ ಹೋದನು.

ಅಲ್ಲಿ ಒಂದು ದೊಡ್ಡ ಕಾಡುಕೋಡುಗಲ್ಲಿನ ಮೇಲೆ ನಿಂತು ''ಪಿತೃಗಳ ಆಜ್ಞೆಯಿಂದ ದರಿದ್ರನೂ ದುಃಖಿತನೂ ಮುದುಕನೂ ಆದ ನಾನು ಮದುವೆಮಾಡಿಕೊಳ್ಳಬೇಕೆಂದು ಮಾಡಿದ್ದೇನೆ. ಯಾರಿಗಾದರೂ ನನ್ನ ಹೆಸರಿನವಳೇ ಕನ್ಯೆ ಇದ್ದರೆ, ಅವಳ ಮುಂದಿನ ಸಂಸಾರದ ಭಾರವನ್ನು ಅವರೇ ಹೊರುತ್ತಿದ್ದರೆ ನಾನು ಕನ್ಯಾಯಾಚನೆ ಮಾಡದೇ ತಾವಾಗಿ ತಂದು ಕೊಡುತ್ತಿದ್ದರೆ, ಕೊಡಲಿ'' ಎಂದು ಕೈಯೆತ್ತಿ ಮೂರು ಬಾರಿ ಕೂಗಿದ.

ಇದೇ ಸಂದರ್ಭವನ್ನು ಕಾಯುತ್ತ ಕುಳಿತ ಸರ್ಪರಾಜ ವಾಸುಕಿ ತನ್ನ ಗುಪ್ತಚಾರ ಹಾವುಗಳ ಮುಖಾಂತರ ಈ ಸಮಾಚಾರ ತಿಳಿದು ಅವನ ಎಲ್ಲ ಕರಾರುಗಳಿಗೂ ಒಪ್ಪಿ

ತನ್ನ ತಂಗಿಯಾದ ಜರತ್ಕಾರುವನ್ನು ಅವನ ಮುಂದೆ ತಂದು ನಿಲ್ಲಿಸಿ, ''ಸ್ವಾಮಿ, ಇವಳನ್ನು ಪಾಣಿಗ್ರಹಣ ಮಾಡಬೇಕು'' ಎಂದು ವಿಜ್ಞಾಪನೆ ಮಾಡಿಕೊಂಡ. ಆಗ ಜರತ್ಕಾರುವು ಮತ್ತೊಮ್ಮೆ ಅವರಿಗೆ ''ನನ್ನ ನಿಯಮ ನಿಬಂಧನೆಗಳನ್ನು ಚೆನ್ನಾಗಿ ಕೇಳಿರುವಿರಾ! ಅವುಗಳನ್ನು ಪಾಲಿಸಲು ಸಿದ್ಧರಿರುವಿರಾ! ಇವಳ ಹೆಸರೇನು!'' ಎಂದು ಕೇಳಿದನು. ಅದಕ್ಕೆ ವಾಸುಕಿಯು ''ಪೂಜ್ಯರೇ, ಇವಳ ಹೆಸರೂ ಜರತ್ಕಾರು ಎಂದೇ ಇದ್ದು ನಿಮ್ಮ ಕರಾರಿನಂತೇ ನಾವು ನಡೆಯುತ್ತೇವೆ. ಇವಳ ಮುಂದಿನ ಸಂಸಾರದ ಭಾರವನ್ನೆಲ್ಲ ನಾವೇ ವಹಿಸಿಕೊಳ್ಳುತ್ತೇವೆ'' ಎಂದು ಆಶ್ವಾಸನೆಯನ್ನು ಕೊಟ್ಟನು. ''ಇಷ್ಟೇ ಅಲ್ಲ'', ಜರತ್ಕಾರುವು ಅವರಿನ್ನೂ ಬಿಗಿಯಾದರೆ ಬಿಟ್ಟು ಹೋಗುವರೇನೋ ಎಂಬ ನಿರೀಕ್ಷೆಯಿಂದ ''ಈ ಮೂರಲ್ಲದೇ ನನ್ನದು ಇನ್ನೂ ಒಂದು ಕರಾರಿದೆ. ಈ ಹೆಣ್ಣು, ಮುಂದೆ ನನ್ನ ಮನಸ್ಸಿಗೆ ಮಾತಿಗೆ ಇಚ್ಛೆಗೆ ವಿರುದ್ಧವಾಗಿ ಏನನ್ನೂ ಮಾಡಬಾರದು ಏನೂ ಆಡಬಾರದು. ನನಗೆ ಬೇಡವಾದದ್ದನ್ನು ಎಂದಾದರೂ ಮಾಡಿದರೆ ನಾನು ಆಗಲೇ ಇವಳನ್ನು ಬಿಟ್ಟು ಹೋಗಿಬಿಡುವೆನು'' ಎಂದು ಹೊಸದೊಂದು ಕರಾರನ್ನು ಹಾಕಿದ. 'ಆಚೆಗೆ ಆಕಲು ಇಲ್ಲ, ಗರಜಿಗೆ ನಾಚಿಕೆಯಿಲ್ಲ' ಎಂಬಂತೆ ವಾಸುಕಿಯು ಅದಕ್ಕೂ 'ಆಗಲಿ' ಎಂದು ಹೇಳಿ ತನ್ನ ತಂಗಿಯನ್ನು ಆ ಜರತ್ಕಾರುಮುನಿಗೆ ಮದುವೆ ಮಾಡಿಕೊಟ್ಟ. ವಿಧಿಪೂರ್ವಕವಾಗಿ ಆ ನಾಗಕನ್ಯೆಯನ್ನು ಮದುವೆಮಾಡಿಕೊಂಡ ಬಳಿಕ ಜರತ್ಕಾರುವು ಪತ್ನಿಯೊಂದಿಗೆ ಸುಖಸಂಸಾರ ಮಾಡಲಿಕ್ಕಾಗಿ ವಾಸುಕಿಯ ನಾಗರಪುರಕ್ಕೇ ತೆರಳಿದನು. ಅಲ್ಲಿ ಅವನಿಗೆ ಸಂಭ್ರಮದ ಸ್ವಾಗತ, ಆದರದ ಉಪಚಾರ, ಪ್ರೇಮಪೂರ್ಣವಾದ ಆತಿಥ್ಯ ಕಾದಿದ್ದವು. ಆ ಭೋಗಿ ಭವನದಲ್ಲಿ ಯಾವ ಭೋಗಕ್ಕೂ ಕೊರತೆ ಇರಲಿಲ್ಲ. ಆ ನಾಗಕನ್ಯೆಯು ಬಹು ಎಚ್ಚರದಿಂದ ಪತಿಯ ಸೇವೆಯನ್ನು ಮಾಡುತ್ತಿದ್ದಳು. ಆ ನಾಗ ಕುಲದ ಅಪೇಕ್ಷೆಯಂತೆ ಅವಳು ವಿಕ್ಷಿಪ್ತ ಸ್ವಭಾವದ ಆ ಶೀಘ್ರ ಕೋಪಿ ಋಷಿಯನ್ನು ಪರಿಪರಿಯಿಂದ ಉಪಚರಿಸಿ ಅವನ ಪ್ರೇಮವನ್ನು ಸಂಪಾದಿಸಿ ಕೊನೆಗೆ ಗರ್ಭಧಾರಣ ಮಾಡಿದಳು.

ಒಂದು ದಿನ ಮಧ್ಯಾನ್ಹದಲ್ಲಿ ತುಸು ಆಯಾಸವೆನಿಸಿದಂತಾದ ಜರತ್ಕಾರುವು ತನ್ನ ಹೆಂಡತಿಯ ತೊಡೆಯ ಮೇಲೆ ತಲೆ ಇಟ್ಟು ವಿಶ್ರಮಿಸಿದ್ದನು. ಅವನಿಗೆ ಅಲ್ಲಿಯೇ

ಗಾಢನಿದ್ದೆ ಹತ್ತಿತು. ಸಾಯಂಕಾಲವಾಗುತ್ತ ಬಂದರೂ ಅವನಿಗೆ ಎಚ್ಚರವಾಗಲಿಲ್ಲ. ಪ್ರತಿನಿತ್ಯವೂ ಜರತ್ಕಾರು ಋಷಿಯು ತಪ್ಪದೇ ಸೂರ್ಯಾಸ್ತ ಸಮಯಕ್ಕೆ ಸಂಧ್ಯಾವಂದನೆ ಮಾಡಿ ರವಿಗೆ ಅರ್ಘ್ಯವನ್ನು ಕೊಡುತ್ತಿದ್ದನು. ಇಂದು ಅವರ ಕರ್ಮಲೋಪವಾಗುವ ಪ್ರಸಂಗ ಬಂದಿತು. ಆ ಋಷಿಪತ್ನಿಗೆ ಏನೂ ತಿಳಿಯದಂತಾಯಿತು. ಪತಿಯನ್ನು ಎಬ್ಬಿಸಿದರೆ ನಿದ್ರಾಭಂಗವಾಗಿ ನನ್ನನ್ನೇಕೆ ಎಬ್ಬಿಸಿದಿ ಎಂದು ಕೋಪದಿಂದ ಎಲ್ಲಿ ಶಪಿಸುವರೋ ಏನೋ! ಎಬ್ಬಿಸದಿದ್ದರೆ 'ನನ್ನ ಧರ್ಮಲೋಪವಾಯಿತು. ಏಕೆ ಸಕಾಲಕ್ಕೆ ನನ್ನನ್ನು ಎಬ್ಬಿಸಲಿಲ್ಲ' ಎಂದು ಕೇಳಬಹುದು. ಈಗೇನು ಮಾಡಬೇಕು! ಎಚ್ಚರಿಸಿದರೂ ಕೋಪ, ಎಚ್ಚರಿಸದಿದ್ದರೂ ಶಾಪ! ಅವಳಿಗೆ ತಿಳಿಯದಂತಾಯಿತು. ಕೊನೆಗೆ ಅವಳು ಒಂದು ನಿರ್ಧಾರಕ್ಕೆ ಬಂದಳು. ನನಗೆ ಶಾಪ ಬಂದರೂ ಚಿಂತೆ ಇಲ್ಲ. ಅವರಿಗೆ ಕೋಪಬಂದರೂ ಅಡ್ಡಿಯಿಲ್ಲ, ಆದರೆ ಅವರ ನಿತ್ಯಾನ್ಹಿಕಕ್ಕೆ ಮಾತ್ರ ಲೋಪಬರುವುದು ಬೇಡ'' ಎಂದು ವಿಚಾರಿಸಿ ಗಾಢವಾಗಿ ನಿದ್ರಿಸುತ್ತಿದ್ದ ತಪಸ್ತೀಕ್ಷ್ಣನಾದ ಆ ಮುನಿಯ ಜಟಾಕರ್ಕಶವಾದ ಮುಂದಲೆಯನ್ನು ಸ್ನೇಹದಿಂದ ನೇವರಿಸುತ್ತ ಮೃದುಮಧುರವಾದ ಮಾತಿನಿಂದ ಮೆಲ್ಲನೆ ''ಸ್ವಾಮಿ ಸೂರ್ಯನು ಅಸ್ತಹೊಂದುತ್ತಲಿದ್ದಾನೆ. ತಾವು ಸ್ನಾನ ಮಾಡಿ ಸಂಧ್ಯಾವಂದನೆ ಮಾಡಿ, ಸೂರ್ಯನಾರಾಯಣನಿಗೆ ಅರ್ಘ್ಯಪ್ರದಾನಮಾಡಿರಿ, ಅಗ್ನಿಹೋತ್ರದ ಸಂಧ್ಯಾಸಮಯವು ಸನ್ನಿಹಿತವಾಗಿದೆ'' ಎಂದು ಎಬ್ಬಿಸಿದಳು.

ಆಗ ನಿದ್ದೆಯಿಂದ ಎದ್ದ ಜರತ್ಕಾರುವು ತನ್ನ ಸವಿನಿದ್ದೆಯನ್ನು ಹಾಳುಮಾಡಿದ್ದಕ್ಕಾಗಿ ಹೆಂಡತಿಯ ಮೇಲೆ ಕನಲಿ ಕೆಂಡನಾದನು. ಅವಳನ್ನು ಉರಿಗಣ್ಣಿನಿಂದ ನೋಡುತ್ತ ''ಮೂಢಳೇ, ನನ್ನನ್ನೇಕೆ ಅರ್ಧನಿದ್ರೆಯಲ್ಲಿ ಎಚ್ಚರಿಸಿದೆ. ಸೂರ್ಯಾಸ್ತದ ಸಮಯ ಬಂದರೆ ನೀನೇಕೆ ಅಷ್ಟು ಗಾಬರಿಯಾದೆ! ನನ್ನ ಅರ್ಘ್ಯವನ್ನು ತೆಗೆದುಕೊಳ್ಳದೇ ಸೂರ್ಯನಿಗೆ ಅಸ್ತಹೊಂದುವ ಶಕ್ತಿಯೆಲ್ಲಿ! ಬೇಕಾದರೆ ನನ್ನ ಅರ್ಘ್ಯದ ದಾರಿ ಕಾಯುತ್ತ ನಿಲ್ಲುತ್ತಿದ್ದ. ನೀನೇಕೆ ನನ್ನ ನಿದ್ರಾಭಂಗ ಮಾಡಿ ನನಗೆ ಅಪ್ರಿಯವಾದದ್ದನ್ನು ಮಾಡಿದೆ. ನಾನಿನ್ನು ನಿನ್ನ ಜೊತೆ ಇರಲಾರೆ. ನಾನು ಮದುವೆಯ ಮೊದಲೇ ನನಗೆ ಅಪ್ರಿಯವಾದದ್ದನ್ನು ನೀನು ಮಾಡಿದರೆ ನಾನು ತಕ್ಷಣ ಬಿಟ್ಟುಹೋಗುತ್ತೇನೆ ಎಂದು

ಕರಾರು ಮಾಡಿದ್ದೆ. ಇಂದು ನೀನು ನನ್ನನ್ನು ಅರನಿದ್ದೆಯಿಂದ ಎಬ್ಬಿಸಿ ಅಪಚಾರ ಗೈದಿರುವೆ. ಆದುದರಿಂದ ಇದೋ ನಾನು ನಿನ್ನನ್ನು ಬಿಟ್ಟುಹೊರಟೆ'' ಎಂದಂದು ಮನೆಬಿಟ್ಟು ಹೊರಟು ನಿಂತನು, ಆಗ ಬೆದರಿ ಬೆವತು ಹೋದ ಆ ನಾಗಕನ್ಯೆಯು ನಡುಗುತ್ತ ಕೈಮುಗಿದು ಕಣ್ಣೀರುದುರಿಸುತ್ತ ಪತಿಗೆ ಅಂಗಲಾಚಿದಳು. ''ಪ್ರಿಯರೆ, ತಮ್ಮ ಮಹಿಮೆಯ್ಸುನ್ನರಿಯದೇ ತಮಗೆ ಧರ್ಮಲೋಪವಾಗಬಾರದೆಂದೇ ನಾನು ತಮ್ಮನ್ನು ಎಚ್ಚರಿಸಿದೆ. ಇದರಲ್ಲಿ ನನ್ನದೇನು ತಪ್ಪಿಲ್ಲ. ನನ್ನನ್ನು ನಾಗಧುರೀಣರು ತಮಗೆ ಯಾವ ಉದ್ದೇಶದಿಂದ ನನ್ನನ್ನು ಧಾರೆಯೆರೆದು ಕೊಟ್ಟಿದ್ದಾರೆ ಎಂಬುದನ್ನು ತಾವು ವಿಚಾರಿಸಬೇಕು. ತಮ್ಮಿಂದ ನನಗೆ ಗರ್ಭಧಾರಣವಾದರೂ ಅದರ ಸರೂಪವು ಎನಿದೆಯೋ! ಈಗ ಗರ್ಭಿಣಿಯಾದ ನನ್ನನ್ನು ಬಿಟ್ಟು ಹೇಗೆ ಹೋಗುವಿರಿ?'' ಎಂದು ಆಲ್ಪರಿದಳು. ಆಗ ಜರತ್ಕಾರುವು ಅವಳಿಗೆ ''ನೀನೇನು ಚಿಂತೆ ಮಾಡಬೇಡ. ನಿನ್ನ ಹೊಟ್ಟೆಯಲ್ಲಿ ಅಗ್ನಿಯಂತೆ ಅತ್ಯಂತ ತೇಜಸ್ವಿಯಾದ ಗರ್ಭವು ಇದೆ. ಆ ನನ್ನ ಮಗನೇ ಮುಂದೆ ವೇದವೇದಾಂತ ವಿದ್ವಾಂಸ ಬ್ರಹ್ಮಜ್ಞಾನಿಯಾದ ಋಷಿಯಾಗುತ್ತಾನೆ'' ಎಂದು ಹೇಳಿ ಆ ಜರತ್ಕಾರು ಮಹರ್ಷಿಯು ಅತ್ಯಂತ ಉಗ್ರವಾದ ತಪೋನುಷ್ಠಾನಕ್ಕಾಗಿ ಅರಣ್ಯಕ್ಕೆ ಪ್ರಯಾಣ ಮಾಡಿದನು.

ಇದನ್ನು ಕೇಳಿ ವಾಸುಕಿ ಮೊದಲಾದ ಹಾವುಗಳೆಲ್ಲರೂ ಅಲ್ಲಿಗೆ ಧಾವಿಸಿ ಬಂದು ಸಂಭ್ರಾಂತರಾಗಿ ತಂಗಿಗೆ ''ಸೋದರಿ ಮುಂದೇನು ಗತಿ! ನಿನ್ನನ್ನು ಮದುವೆಮಾಡಿಕೊಟ್ಟು ನಮ್ಮ ಉದ್ದೇಶವೇ ವಿಫಲವಾಯಿತಲ್ಲ!'' ಎಂದು ಕೇಳಿದರು. ಅದಕ್ಕೆ ಜರತ್ಕಾರುವು ''ಅಣ್ಣ ವಾಸುಕಿ, ಗಾಬರಿಯಾಗಬೇಡ. ಋಷಿಗಳು ನನ್ನಲ್ಲಿ ತಮ್ಮ ಗರ್ಭದಾನ ಮಾಡಿ ಅಗ್ನಿಯಂತೆ ಅತ್ಯಂತ ವರ್ಚಸ್ಸಿಯಾದ ಋಷಿಕುಮಾರನು ನನ್ನಿಂದ ಜನಿಸುತ್ತಾನೆಂದು ಹೇಳಿ ಹೋಗಿದ್ದಾರೆ. ಪರಿಹಾಸ ವಿನೋದಗಳಲ್ಲಿ ಸಹಜವಾಗಿ ಆಡಿದ ಅವರ ಮಾತೂ ಕೂಡ ಎಂದೂ ಸುಳ್ಳಾದದ್ದಿಲ್ಲ. ಅಂದ ಬಳಿಕ ನನ್ನನ್ನು ತೊರೆದು ಹೋಗುವಾಗ ಹೇಳಿದ ಮಾತು ಹೇಗೆ ಸುಳ್ಳಾದೀತು! ಆದುದರಿಂದ ನೀವೇನೂ ದುಃಖಪಡುವ ಕಾರಣವಿಲ್ಲ'' ಎಂದು ಹೇಳಿದಳು. ಅವಳ ಮಾತನ್ನು ಕೇಳಿ ಹಾವುಗಳೆಲ್ಲ ಸಮಾಧಾನದ ಉಸಿರನ್ನು ಬಿಟ್ಟವು.

ಮುಂದೆ ದಿನ ತುಂಬಿದ ಬಳಿಕ ಜರತ್ಕಾರುವು ತೇಜಃ ಪುಂಜನಾದ ಒಬ್ಬ ಗಂಡು ಮಗುವನ್ನು ಹೆತ್ತಳು. ಅವನ ತಂದೆಯು ವನಕ್ಕೆ ಹೋಗುವಾಗ "ನಿನ್ನ ಹೊಟ್ಟೆಯಲ್ಲಿ ಋಷಿಯು 'ಅಸ್ತಿ' ಇರುತ್ತಾನೆ ಎಂದು ಹೇಳಿದ್ದರಿಂದ ಅವನಿಗೆ ಆಸ್ತಿಕನೆಂದೇ ಹೆಸರಾಯಿತು. ಆ ಹುಡುಗನು ಅಲ್ಲಿ ನಾಗರಾಜ ವಾಸುಕಿಯ ಮನೆಯಲ್ಲಿಯೇ ಬೆಳೆದು ದೊಡ್ಡವನಾದನು. ಮತ್ತು ಮಹರ್ಷಿ ಚ್ಯವನ ಮುನಿಯಿಂದ ಎಲ್ಲ ವೇದ ವೇದಾಂಗಗಳನ್ನು ಕಲಿತು ಮಹಾಪಂಡಿತನೂ ಬ್ರಹ್ಮವರ್ಚಸ್ವಿಯೂ ಆದನು. ಬಾಲ್ಯದಿಂದಲೇ ಬ್ರಹ್ಮಚರ್ಯ ವ್ರತವನ್ನು ನಿಯಮ ನಿಷ್ಠುರನಾಗಿ ಪಾಲಿಸತಕ್ಕ ಆ ಋಷಿಕುಮಾರನ ತೇಜಸ್ಸು ಹಾಗೂ ತಪಸ್ಸಿದ್ಧಿಗಳು ಕ್ರಮೇಣ ಅಭಿವೃದ್ಧವಾದವು. ನಾಗಗಳೆಲ್ಲವೂ ಅವನನ್ನು ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಮಹಾಪ್ರಯತ್ನಪೂರ್ವಕವಾಗಿ ಕಾಯುತ್ತಲಿದ್ದವು. ಜನಮೇಜಯ ಮಹಾರಾಜನು ಸರ್ಪಯಾಗವನ್ನು ಪ್ರಾರಂಭಿಸಿ ಹಾವುಗಳನ್ನು ಅಗ್ನಿಗೆ ಆಹುತಿಕೊಡುವಾಗ ಜರತ್ಕಾರುವಿನ ಮಗನಾದ ಈ ಆಸ್ತಿಕನು ಅಲ್ಲಿಗೆ ಹೋಗಿ ಆ ಯಜ್ಞವನ್ನು ತಡೆದುನಿಲ್ಲಿಸಿ ಹಾವುಗಳನ್ನೆಲ್ಲ ಬದುಕಿಸಿದನು.

★ ★ ★ ★

## ಉದ್ಧಾಲಕ ಶ್ವೇತಕೇತು

ಬಹಳ ಪೂರ್ವಕಾಲದಲ್ಲಿ ಈಗಿನಂತೆ ಹೆಂಗಸರಿಗೆ ಯಾವ ಕಟ್ಟುಪಾಡೂ ಇರಲಿಲ್ಲ. ಅವರು ತಮಗೆ ಇಷ್ಟಬಂದ ಪುರುಷರೊಡನೆ ತಮ್ಮ ಇಷ್ಟಬಂದಂತೆ ರಮಿಸುವ ಸ್ವಾತಂತ್ರ್ಯವಿದ್ದಿತು. ಅದು ಪೂರ್ವಕಾಲದ ಧರ್ಮವಾಗಿದ್ದುದರಿಂದ, ಆ ಸ್ತ್ರೀಯರು ತಮ್ಮ ಯೌವನದಲ್ಲಿ ಗಂಡಂದಿರನ್ನು ಲಕ್ಷ್ಯಮಾಡದೆ, ಪರಪುರುಷರಲ್ಲಿ ವ್ಯಭಿಚರಿಸಿದರೂ ಅವರು ಪಾಪಕ್ಕೆ ಗುರಿಯಾಗುತ್ತಿರಲಿಲ್ಲ. ಆ ಪುರಾತನ ಧರ್ಮವೇ ಈಗಲೂ ಮನುಷ್ಯೇತರಗಳಾದ ತಿರ್ಯಗ್ಜಂತುಗಳಲ್ಲಿ ನಡೆದುಬರುತ್ತಿವೆ. ಆದರೆ, ಕಾಮಕ್ರೋಧಗಳನ್ನು ಮುಂದಿಟ್ಟುಕೊಂಡು ಅವು ಆ ಕಾರ್ಯಗಳನ್ನು ಮಾಡತಕ್ಕವುಗಳಲ್ಲ. ಎಲೆ ಭಾವಿನಿ! ಇದು ಪ್ರತ್ಯಕ್ಷವಾಗಿ ಕಣ್ಣಾರೆ ಕಂಡ ಧರ್ಮವು. ಋಷಿಗಳಿಂದಲೂ ಅಂಗೀಕರಿಸಲ್ಪಟ್ಟಿದೆ. ಉತ್ತರ ಕುರುದೇಶಗಳಲ್ಲಿ ಈಗಲೂ ಈ

ಧರ್ಮವನ್ನೇ ಕೊಂಡಾಡುತ್ತಿರುವರು. ಈ ಸನಾತನಧರ್ಮದಿಂದ ಸ್ತ್ರೀಯರಿಗೆ ಸಂತಾನಾದಿ ವಿಷಯಗಳಲ್ಲಿಯೂ ಅನುಕೂಲವಿತ್ತು. ಅಲ್ಲದೆ ಅವರಿಗೆ ಯಥೇಚ್ಛವಾಗಿ ಕಾಮವನ್ನು ತೃಪ್ತಿಗೊಳಿಸುವುದಕ್ಕೂ ಸೌಕರ್ಯವಿದ್ದಿತು. ಆದರೇನು? ಸೌದೆಗಳಿಂದ ಅಗ್ನಿಗೆ ಎಂದಿಗೂ ತೃಪ್ತಿಯಿಲ್ಲ. ನದಿಗಳಿಂದ ಸಮುದ್ರಕ್ಕೆ ತೃಪ್ತಿಯಿಲ್ಲ. ಪ್ರಾಣಗಳ ಕೊಲೆಯಿಂದ ಯಮನಿಗೆ ತೃಪ್ತಿಯಿಲ್ಲ. ಎಷ್ಟು ಮಂದಿ ಪುರುಷರಿದ್ದರೂ ಸ್ತ್ರೀಯರ ಕಾಮಕ್ಕೆ ತೃಪ್ತಿಯಿಲ್ಲ. ಹೀಗೆ ಸ್ತ್ರೀಯರ ಕಾಮತೃಷ್ಣೆಯೆಂಬುದು ಮೇಲೆಮೇಲೆ ವರ್ಧಿಸುತ್ತಲೇ ಇರುವುದು. ಎಲೆ ಶುಚಿಸ್ಮಿತೆ! ಸ್ತ್ರೀಯರಿಗೆ ಪುರುಷರಲ್ಲಿ ತಾವು 'ಇಂತವರನ್ನು ಸೇರಬಹುದು. ಇಂತಹವರನ್ನು ಸೇರಬಾರದು' ಎಂಬ ನಿಯಮವೂ ಇಲ್ಲ. ಕೆಲವು ಸ್ತ್ರೀಯರಿಗೆ ಮಗನಾಗಿರಲಿ, ಮೊಮ್ಮಗನಾಗಿರಲಿ, ಒಡಹುಟ್ಟಿದ ಸಹೋದರನಾಗಿರಲಿ, ಅಂತವರನ್ನು ಏಕಾಂತಸ್ಥಳದಲ್ಲಿ ನೋಡಿದಾಗ, ಅವರಿಗೆ ಮನಸ್ಸು ಕದಲಿ ಕಾಮರಸವು ಸ್ರವಿಸುವುದು. ಇದು ಹೆಂಗಸರಿಗೆ ಸ್ವಾಭಾವಿಕವು. ಇದು ಒಂದು ಕಾರಣದಿಂದ ಬರತಕ್ಕುದಲ್ಲ. ಈ ಲೋಕದಲ್ಲಿ ಸ್ತ್ರೀಯರಿಗೆ ಈಗಿರುವ ಪಾತಿವ್ರತ್ಯದ ವ್ಯವಸ್ಥೆಯು, ಈಚೆಗೆ ಕೆಲವು ದಿವಸಗಳಿಂದಲೇ ಏರ್ಪಟ್ಟಿತು. ಈ ವ್ಯವಸ್ಥೆಯನ್ನು ಯಾರು, ಯಾವ ಕಾರಣಕ್ಕಾಗಿ ಮಾಡಿದರೆಂಬುದನ್ನು ವೈಶಂಪಾಯನರು ತಿಳಿಸಿದ್ದಾರೆ.

ಪೂರ್ವದಲ್ಲಿ ಉದ್ದಾಲಕನೆಂಬ ಮಹರ್ಷಿಯೊಬ್ಬನು ಇದ್ದುದಾಗಿ ಕೇಳುವೆವು. ಆ ಉದ್ದಾಲಕನಿಗೆ ಶ್ವೇತಕೇತುವೆಂಬ ಮಗನಿದ್ದನು. ಆ ಶ್ವೇತಕೇತುವೇ ಸ್ತ್ರೀಯರಿಗೆ ಧರ್ಮಯುಕ್ತವಾದ ಈ ಮರ್ಯಾದೆಯನ್ನು ನೆಲೆಗೊಳಿಸಿದನು. ಅವನು ತನ್ನ ಪತ್ನಿಯ ಮೇಲಿನ ಕೋಪದಿಂದ ಸ್ತ್ರೀಯರೆಲ್ಲರಿಗೂ ಈ ನಿರ್ಬಂಧವನ್ನು ಕಲ್ಪಿಸಿಟ್ಟನು. ಅವನ ಕೋಪಕಾರಣಗಳೇನೆಂಬುದನ್ನು ತಿಳಿಸುವೆನು ಕೇಳು. ಶ್ವೇತಕೇತುವಿನ ತಂದೆಯಾದ ಉದಾಲಕನು ಅತಿಕಠಿಣವಾದ ಒಂದು ತಪಸ್ಸನ್ನು ಹಿಡಿದಿದ್ದನು. ಅವನು ತನ್ನ ತಪಸ್ಸಿಗಾಗಿ ಬಿಸಿಲುಗಾಲದಲ್ಲಿ ಪಂಚಾಗ್ನಿ ಮಧ್ಯದಲ್ಲಿ ಕುಳಿತಿರುವನು. ಮಳೆಬೀಳುತ್ತಿರುವಾಗ ಮೈದಾನಗಳಲ್ಲಿ ಕುಳಿರುವನು. ಚಳಿಗಾಲದಲ್ಲಿ ನೀರಿನಲ್ಲಿ ಕುಳಿತಿರುವನು. ಹೀಗೆ ಪತ್ನಿಸಮೇತನಾಗಿ ಉಗ್ರತಪಸ್ಸನ್ನು ಮಾಡುತ್ತಿದ್ದನು. ಆತನಿಗೆ ಅವನ ಮಗನಾದ ಶ್ವೇತಕೇತುವು ಸಮೀಪದಲ್ಲಿಯೇ ಇದ್ದು, ಶುಶ್ರೂಷೆ

ಮಾಡುತ್ತಿದ್ದನು. ಹೀಗಿರುವಲ್ಲಿ ತಲೆಕೂದಲು ನೆರೆತು, ಮೈಯೆಲ್ಲಾ ಸುಕ್ಕುಬಿದ್ದ ಬ್ರಾಹ್ಮಣೋತ್ತಮನೊಬ್ಬನು ಆ ತಂದೆ ಮಕ್ಕಳಿದ್ದಲ್ಲಿಗೆ ಬಂದನು. ಆ ಬ್ರಾಹ್ಮಣನನ್ನು ಕಂಡೊಡನೆ ಆ ಮುನಿಯು ಸಂತೋಷದಿಂದ ಸುಖಾಗಮನವನ್ನು ಕೇಳಿ, ವಿದ್ಯುಕ್ತವಾಗಿ ಅರ್ಘ್ಯಾಪಾದ್ಯಗಳಿಂದಲೂ, ಪ್ರಿಯವಾಕ್ಕುಗಳಿಂದಲೂ, ಗಡ್ಡೆಗೆಣಸು ಮುಂತಾದ ಉಪಹಾರಗಳಿಂದಲೂ ಅವನನ್ನು ಉಪಚರಿಸಿದನು.' ಆಗ ಆ ಬ್ರಾಹ್ಮಣನು ಆ ಸತ್ಕಾರಗಳನ್ನು ಹೊಂದಿ ವಿಶ್ರಾಂತಿಯನ್ನು ತೆಗೆದುಕೊಂಡಮೇಲೆ, ಉದ್ದಾಲಕಮುನಿಯ ಬಳಿಗೆ ಬಂದು ಹೀಗೆಂದು ಪ್ರಶ್ನೆ ಮಾಡುವನು. 'ಓ ಮಹರ್ಷೀ! ಈಗ ನೀನು ನನ್ನಲ್ಲಿ ಸುಳ್ಳಾಡದೆ ನಿಜವನ್ನು ತಿಳಿಸಬೇಕು. ಈ ಋಷಿಕುಮಾರನು ಅತ್ಯಂತ ಸುಂದರನಾಗಿರುವನು. ಇವನು ನಿನ್ನ ಮಗನೆಂದು ತೋರುವುದು. ಇಂತಹ ಮಗನನ್ನು ಪಡೆದ ನೀನಲ್ಲವೇ ಧನ್ಯನು! ಇವನು ನಿನ್ನ ಮಗನಷ್ಟೆ?'' ಎಂದನು. ಅದಕ್ಕೆ ಆ ಉದ್ದಾಲಕನು ''ಓ ಮಹಾಪ್ರಾಜ್ಞಾ! ನನ್ನ ಹೆಂಡತಿಯು ಕುಶಿಕನ ಮಗಳು. ಯಾವಾಗಲೂ ಅವಳು ನನ್ನನ್ನೇ ಅನುವರ್ತಿಸಿ ನಡೆಯತಕ್ಕವಳು. ಸ್ತ್ರೀಯರಲ್ಲಿ ಅರುಂಧತಿಯು ಹೇಗೋ ಹಾಗೆ ತಪಸ್ಸಿನಿಂದ ತನ್ನ ದೇಹವನ್ನೆಲ್ಲ ಕಂದಿಸಿರುವಳು. ಮಹಾತಪಸ್ವಿಯಾದ ನನ್ನ ಪುತ್ರನು ಅವಳಲ್ಲಿ ಹುಟ್ಟಿದವನೇ. ಇವನಿಗೆ ಶ್ವೇತಕೇತುವೆಂದು ಹೆಸರು. ಈ ಪುತ್ರನು ವೇದವೇದಾಂಗಗಳನ್ನೆಲ್ಲ ಬಲ್ಲವನು. ನನ್ನ ಅನುಜ್ಞೆಯನ್ನು ಶಿರಸಾವಹಿಸಿ ನಡೆಯತಕ್ಕವನು. ಲೋಕವ್ಯವಹಾರಗಳನ್ನೆಲ್ಲ ತಿಳಿದವನು. ಎಲ್ಲಾ ಲೋಕಗಳಲ್ಲಿಯೂ ಪ್ರಸಿದ್ಧನು. ಸತ್ಯವಾಕ್ಕುಳ್ಳವನು. ದಯಾಶೀಲನು' ಎಂದನು. ಅದಕ್ಕೆ ಆ ಬ್ರಾಹ್ಮಣನು ''ಓ ಮಹರ್ಷೀ! ನನಗಾದರೋ ಪುತ್ರರಿಲ್ಲ. ಭಾರ್ಯೆಯೂ ಇಲ್ಲ. ನನಗೆ ಸಂತಾನಕ್ಕಾಗಿ ಭಾರ್ಯೆಯು ಬೇಕಾಗಿರುವಳು. ನಾನೋ ವಯಸ್ಸಿನಲ್ಲಿ ಮುದುಕನು. ನನಗೆ ಮುಪ್ಪಿನಿಂದ ದೃಷ್ಟಿಪಾಟವವೂ ತಪ್ಪಿಹೋಯಿತು. ನನಗೆ ಪಿತೃಋಣವು ತೀರುವ ಮಾರ್ಗವಿಲ್ಲ. ನಾನು ಮೊದಲೇ ವಿವಾಹಮಾಡಿಕೊಳ್ಳದೆ ಹೋದುದು ತಪ್ಪಾಯಿತು. ಸಂತತಿಗೆ ಅರಣಿಯಂತೆ ಪರಿಶುದ್ಧಳೂ, ಒಳ್ಳೇ ಗುಣಶೀಲವತಿಯೂ, ಕುಲೀನಳೂ ಆದ ನಿನ್ನ ಭಾರ್ಯೆಯು ಗೋತ್ರದಲ್ಲಿ ನನಗೆ ತಕ್ಕವಳಾಗಿರುವಳು. ಅವಳನ್ನು ನಾನು ಸಂತಾನಾರ್ಥವಾಗಿ ಕರೆದುಕೊಂಡು

ಹೋಗುವೆನು. ನೀನು ನನ್ನನ್ನು ಮನ್ನಿಸಬೇಕು'' ಎಂದು ಹೇಳುತ್ತ, ಆ ಉದ್ದಾಲಕನ ಭಾರ್ಯೆಯ ಬಳಿಗೆ ಹೋಗಿ, ಅವಳ ಗಂಡನೂ, ಮಗನಾದ ಶ್ವೇತಕೇತುವೂ ಇದಿರಾಗಿ ನಿಂತುನೋಡುತ್ತಿರುವಾಗಲೇ, ಅವಳ ಕೈಯ್ಯನ್ನು ಹಿಡಿದುಕೊಂಡನು. ಅವಳಾದರೋ ವಯಸ್ಸು ಕಳೆದವಳು. ಜಿಂಕೆಯ ಮರಿಯ ಕಣ್ಣಿನಂತೆ ಬೆದರಿ ತತ್ತಳಿಸುವ ಕಣ್ಣುಗ್ಗಳಿಂದ ನೋಡುತ್ತಿರುವಳು. ಮೈಮೇಲೆ ಅಜಿನವನ್ನೂ, ವಲ್ಕಲವನ್ನೂ ಉಟ್ಟಿರುವಳು. ಸ್ವಕಾರ್ಯವನ್ನೂ ಮಾಡಿಕೊಳ್ಳಲು ಶಕ್ತಿಯಿಲ್ಲದವಳು. ಮತ್ತು ಆ ಆಗುಂತುಕನಾದ ವೃದ್ಧ ಬ್ರಾಹ್ಮಣನಲ್ಲಿ ಸ್ವಲ್ಪವಾದರೂ ಮನಸ್ಸಿಲ್ಲದವಳು. ಅಂತವಳನ್ನು ಆ ಬ್ರಾಹ್ಮಣನು ಕೈಹಿಡಿದುಕೊಂಡು ''ನಡೆ! ನಾವು ಹೋಗುವೆವು'' ಎಂದು ಎಳೆಯುತ್ತಿದ್ದನು. ಆ ಬ್ರಾಹ್ಮಣನೋ ಮುದುಕನು. ಚೆನ್ನಾಗಿ ಕಣ್ಣುಕಾಣದವನು. ಕೈಯಲ್ಲಿ ಕೋಲೂರಿಕೊಂಡೇ ನಡೆಯತಕ್ಕವನು. ಮುಪ್ಪಿನಿಂದ ಅವನ ಮೈಯೆಲ್ಲ ಶಿಥಿಲವಾಗಿರುವುದು. ಅವನಿಗೆ ಬುದ್ಧಿಯೂ ಸರಿಯಾಗಿ ಸ್ವಾಧೀನವಿಲ್ಲ.

ಇಂತಹ ಬ್ರಾಹ್ಮಣನೊಬ್ಬನು ಬಂದು ತನ್ನ ತಾಯಿಯ ಕೈಯನ್ನು ಹಿಡಿದು ಬಲಾತ್ಕಾರದಿಂದ ಕರೆದುಕೊಂಡು ಹೋಗಲು ಪ್ರಯತ್ನಿಸುತ್ತಿರುವುದನ್ನು ಕಂಡಾದ ಆ ಶ್ವೇತಕೇತುವು ಸಹಿಸಲಾರದೆ ಹೋದನು. ಆಗ ಅವನು ತನ್ನ ತಾಯಿಯನ್ನು ಬಿಡದೆ ಅವಳ ಕೈಯನ್ನು ಹಿಡಿದು ತಡೆದು ನಿಲ್ಲಿಸಿಕೊಂಡು ''ಎಲಾ ದುಷ್ಟಬ್ರಾಹ್ಮಣಾ! ಕೈ ಬಿಡು! ಮಹಾಪತಿವ್ರತೆಯಾದ ನನ್ನ ತಾಯಿಯನ್ನು ಮುಟ್ಟುವೆಯಾ? ನನ್ನ ತಂದೆಯು ಸ್ವಭಾವದಿಂದಲೇ ಬಹಳ ತಾಳ್ಮೆಯುಳ್ಳವನು. ಮತ್ತು ಬ್ರಹ್ಮಜ್ಞಾನವುಳ್ಳ ಬ್ರಹ್ಮರ್ಷಿ. ಶಾಪದಿಂದ ಎಂತವರನ್ನಾದರೂ ಕೆಡಿಸುವುದಕ್ಕೂ, ಅನುಗ್ರಹದಿಂದ ಬದುಕಿಸುವುದಕ್ಕೂ ಸಮರ್ಥನು. ಅವನು ಉಗ್ರ ತಪಸ್ಸಿನಲ್ಲಿರುವುದರಿಂದ ಬಾಯೆತ್ತದೆ ಮೌನದಿಂದಿರುವನು. ಇವಳು ಅಂತಹ ಧರ್ಮಾತ್ಮನ ಪತ್ನಿ. ಇಂದ್ರಿಯಗಳನ್ನು ಜಯಿಸಿದವಳು. ಎಲ್ಲಕ್ಕಿಂತಲೂ ಮೇಲೆ ನನ್ನ ತಾಯಿ! ಮಹಾಪತಿವ್ರತೆ! ತಪಸ್ಸಿನಲ್ಲಿ ಮೇಲೆನಿಸಿದವಳು! ಸದಾಚಾರ ಶೀಲಳು! ಅಂತವಳನ್ನು ನೀನು ಕೈ ಹಿಡಿದೆಳೆಯುವೆಯಾ? ಎಲಾ ಬ್ರಾಹ್ಮಣಾ! ಇವಳು ನಿನಗೆ ತಾಯಿಯಂತಿರುವಳು. ಅಂತವಳಲ್ಲಿ ನೀನು ಅತ್ಯಾಚಾರವನ್ನು ನಡೆಸಿ ಪ್ರಮಾದಕ್ಕೆ

ಸಿಕ್ಕಬೇಡ! ಬಿಟ್ಟುಬಿಡು!'' ಎಂದನು. ಹೀಗೆ ಶ್ವೇತಕೇತುವು ಆ ಬ್ರಾಹ್ಮಣನನ್ನು ಗದರಿಸುತ್ತಲೂ, ಆಗಾಗ ಮೃದುವಾಕ್ಯದಿಂದ ಬೇಡುತ್ತಲೂ ''ಬಿಡು! ಬಿಡು!'' ಎಂದು ಬಾರಿಬಾರಿಗೂ ನಿರ್ಬಂಧಿಸುತ್ತಿರಲು, ಆ ಬ್ರಾಹ್ಮಣನು ಹೆದರಿಕೆಯೊಡನೆ ಆ ಶ್ವೇತಕೇತುವನ್ನು ಕುರಿತು ''ಕುಮಾರಾ! ನಾನು ವೃದ್ಧನು. ಸರಿಯಾಗಿ ಕಣ್ಣು ಕಾಣಿಸುವುದೂ ಇಲ್ಲ. ನಿನ್ನತಂದೆಯು ಇವಳಲ್ಲಿ ನಿನ್ನಂತಹ ಕುಮಾರನನ್ನು ಪಡೆದು ಋಣವಿಮುಕ್ತನಾದನು. ನಾನಾದರೋ ಇನ್ನೂ ಪಿತೃಋಣದಿಂದ ಮುಕ್ತನಾಗಲಿಲ್ಲ. ನನಗೆ ವಯಸ್ಸು ಕಳೆದುಹೋಯಿತು. ಲೋಕದಲ್ಲಿ ಯಾವ ವಿಷಯೋಪಭೋಗದಲ್ಲಿಯೂ ನಾನು ಆಶೆಯಿಲ್ಲದವನು. ಈ ವಯಸ್ಸಿನಲ್ಲಿ ನನಗೆ ಮದುವೆಯಾಗಿ ಯುವತಿಯಾದ ತನ್ನ ಕನ್ಯೆಯನ್ನು ದಾನಮಾಡಲು ಯಾವನು ತಾನೇ ಇಷ್ಟಪಡುವನು? ಆದುದರಿಂದ ನನ್ನ ಸಂತಾನಕ್ಕಾಗಿ ಇವಳನ್ನು ನೀನು ನನ್ನ ಪತ್ನಿಯಾಗಿರಲು ಬಿಟ್ಟುಕೊಡು. ನನಗೆ ಒಂದು ಸಂತತಿಯಾದರೆ ಸಾಕು. ಆದರಿಂದ ನಾನು ಕೃತಾರ್ಥನಾಗಿ ನಿನ್ನ ತಾಯಿಯನ್ನು ತಿರುಗಿ ಇಲ್ಲಿಯೇ ತಂದು ಬಿಡುವೆನು. ಪ್ರಜೋತ್ಪತ್ತಿಗೆ ಅರಣಿಯಂತಿರುವ ಈಕೆಯನ್ನು ನನ್ನಲ್ಲಿ ಸ್ವಲ್ಪ ದಿನಗಳಿಗೆ ಬಿಟ್ಟುಕೊಡು'' ಎಂದನು. ಈ ಮಾತುಗಳನ್ನು ಕೇಳುತ್ತಿದ್ದ ಹಾಗೆಲ್ಲ ಶ್ವೇತಕೇತುವು ನಾಚಿಕೆಯಿಂದ ತಲೆತಗ್ಗಿಸುತ್ತ, ಕೋಪವನ್ನು ತಡೆಯಲಾರದೆ ಬುಸುಗುಟ್ಟುತ್ತಿರಲು, ಉದ್ದಾಲಕನು ಆಗ ಪುತ್ರನನ್ನು ನೋಡಿ ''ಕುಮಾರಾ! ನೀನು ಹೀಗೆ ಕೋಪಿಸಬಾರದು. ಇದು ಪುರಾತನವಾದ ಧರ್ಮವೇ ಹೊರತು ತಪ್ಪಿಲ್ಲ. ಭೂಮಿಯಲ್ಲಿ ಯಾವ ವರ್ಣದಲ್ಲಿಯೂ ಸ್ತ್ರೀಯರಿಗೆ ನಿಯಮವಿಲ್ಲ. ಮೃಗಗಳಂತೆಯೇ ಮನುಷ್ಯರೂ ತಮ್ಮ ತಮ್ಮ ಇಷ್ಟದಂತೆಯೇ ಇರುವರು. ಹಾಗಿದ್ದರೂ ಅವರು ಕುಟುಂಬಗಳಲ್ಲಿ ತಪ್ಪುದಾರಿಗೆ ಹೋದವರಲ್ಲ. ಋತುಕಾಲವು ಬಂದಾಗ ಅವರು ತಮ್ಮ ಪತಿಯನ್ನು ಬಿಟ್ಟವರಲ್ಲ'' ಎಂದನು. ಶ್ವೇತಕೇತುವಿಗೆ ಈ ನ್ಯಾಯವೇನೂ ಸರಿಬೀಳಲಿಲ್ಲ. ಈ ಧರ್ಮವು ಅವನಿಗೆ ದುಸ್ಸಹವಾಯಿತು. ಅದು ಮೊದಲು ಶ್ವೇತಕೇತುವು ಮನುಷ್ಯಜಾತಿಯಲ್ಲಿ ಸ್ತ್ರೀಪುರುಷರ ವಿಷಯವಾಗಿ ಈ ಕೆಳಗೆ ಕಂಡ ಕೆಲವು ವಿಧಿಗಳನ್ನು ನಿರ್ಣಯಿಸಿದನು. ಇತರ ಪ್ರಾಣಿಗಳಿಗೂ, ಮನುಷ್ಯರಿಗೂ ಈ ವಿಷಯದಲ್ಲಿ ಭೇದವನ್ನು ಕಲ್ಪಿಸಿ, ತಿರ್ಯಗ್ಜಂತುಗಳನ್ನು ಅವುಗಳ

ದಾರಿಗೆ ಬಿಟ್ಟು, ಮನುಷ್ಯರಿಗೆ ಮಾತ್ರ ಈ ವಿಧಿಗಳನ್ನು ನಿರ್ಣಯಿಸಿದನು. ಆ ಶ್ವೇತಕೇತುವಿನ ಕಾಲದಿಂದಲೇ ಸ್ತ್ರೀಯರಿಗೆ ಇಂತಹ ಕಟ್ಟುಪಾಡು ಏರ್ಪಟ್ಟಿತೆಂದು ನಾನು ಕೇಳಿರುವೆನು. ಆಮೇಲೆ ಶ್ವೇತಕೇತುವು "ಇನ್ನು ಮೇಲೆ ಯಾವ ಸ್ತ್ರೀಯೇ ಆದರೂ, ತನ್ನ ಪತಿಯನ್ನು ಬಿಟ್ಟು ಇತರ ಪುರುಷನಲ್ಲಿ ವ್ಯಭಿಚರಿಸಿದರೆ, ಅವಳಿಗೆ ಗರ್ಭಹತ್ಯಾ ಪಾತಕಕ್ಕೆ ಸಮಾನವಾದ ಘೋರಪಾತಕವು ಪ್ರಾಪ್ತವಾಗಲಿ! ಈ ನಿಯಮವು ಸ್ತ್ರೀಯರಿಗೆ ಮಾತ್ರವಲ್ಲ! ಸ್ವಭಾರ್ಯೆಯನ್ನು ಬಿಟ್ಟು ಬೇರೆ ಸ್ತ್ರೀಯರಲ್ಲಿ ವ್ಯಭಿಚರಿಸತಕ್ಕ ಪುರುಷನಿಗೂ ಅದೇ ಪಾತಕವುಂಟು. ಮೊದಲಿನಿಂದಲೂ ತನ್ನಲ್ಲಿ ಭಕ್ತಿಯುಳ್ಳವಳಾಗಿ, ನಿಯಮನಿಷ್ಠೆಯಾಗಿರುವ ಭಾರ್ಯೆಯಿರುವಾಗ, ಪರಸ್ತ್ರೀಯರಲ್ಲಿ ಪ್ರವರ್ತಿಸುವುದು ಪುರುಷನಿಗೆ ಮಹಾಪಾತಕವು. ಒಂದುವೇಳೆ ಪತಿಯೇ ಸಂತಾನಾರ್ಥವಾಗಿ ಪತ್ನಿಗೆ ಆಜ್ಞೆ ಮಾಡಿದಾಗ, ಅವಳು ಅದರಂತೆ ನಡೆಸದೆ ಹೋದರೆ ಆಗ ಪಾಪಕ್ಕೆ ಗುರಿಯಾಗುವಳು".

★ ★ ★ ★

## ನಚಿಕೇತ

ವಾಜಶ್ರವ ಮುನಿಗಳ ಮೊಮ್ಮಗ ಉದ್ದಾಲಕ ಮುನಿಗಳು ಯಜ್ಞದಲ್ಲಿ ಅನುಪಯುಕ್ತಗಳಾದ ಬಡಕಲು ದನಗಳನ್ನು ದಾನ ಮಾಡುವುದನ್ನು ಕಂಡು ಅವರ ಪುತ್ರನಾದ ಬಾಲಕ ನಚಿಕೇತನಿಗೆ ಸಮಾಧಾನವಾಗಲಿಲ್ಲ. ಇಂತಹ ಗೋವುಗಳನ್ನು ದಾನ ಮಾಡುವುದಕ್ಕಿಂತ ನನ್ನನ್ನೇ ಯಾರಿಗಾದರೂ ದಾನ ಮಾಡಬಹುದಲ್ಲವೇ? ತನ್ನಿಂದ ದಾನ ಪಡೆದವರಿಗೆ ಏನಾದರೂ ಉಪಯೋಗವಾಗಬಹುದೆಂದು ನಚಿಕೇತನು ಎರಡು ಮೂರು ಸಲ ಹೇಳಿದಾಗ ಸಿಟ್ಟಿನ ಆವೇಶದಲ್ಲಿ ಉದ್ದಾಲಕರು ಮೃತ್ಯುವಿಗೆ ನಿನ್ನನ್ನು ನೀಡುವನೆಂದು ಶಪಿಸಿದರು. ಆದರೆ ನಚಿಕೇತನು ಮೃತ್ಯುವಿಗೆ ಹೆದರಲಿಲ್ಲ. ಸಾರ್ಥಕ ಜೀವನವನ್ನು ನಡೆಸುವವರಿಗೆ ಮೃತ್ಯುವಿನ ಭಯವೇಕೆ? ನಿರ್ಭೀತಿಯಿಂದ ತನ್ನ ಬಳಿಗೆ ಬಂದ ನಚಿಕೇತನ ಧೈರ್ಯ-ಶ್ರದ್ಧೆಗಳನ್ನು ಕಂಡು ಯಮನಿಗೆ ಆಶ್ಚರ್ಯವಾಯಿತು. ಅವನಿಗೆ ಮೆಚ್ಚಿ ಮೂರು ವರಗಳನ್ನು ಕೊಡಲು ಯಮನು ಸಿದ್ಧನಾದನು. ಮೊದಲನೆಯ ವರವಾಗಿ ತನ್ನ ತಂದೆಯ ಸೌಮನಸ್ಯವನ್ನು

ನಚಿಕೇತನು ಕೇಳಿದನು. ಎರಡನೆಯ ವರವಾಗಿ ಯಜ್ಞದಲ್ಲಿ ನಾವು ಆರಾಧನೆ ಮಾಡುವ ಅಗ್ನಿಯ ಅಂತರ್ಗತನಾದ ಭಗವಂತನ ಸ್ವರೂಪವನ್ನು ನಚಿಕೇತನು ಕೇಳಿದನು. ಯಮದೇವರು ಅದನ್ನು ನಚಿಕೇತನಿಗೆ ಚೆನ್ನಾಗಿ ವಿವರಿಸಿ ಉಪದೇಶಿಸಿದರು.

ನಚಿಕೇತನು ಮೂರನೆಯ ವರವಾಗಿ ಮುಕ್ತಿಯಲ್ಲೂ ಜೀವರಿಗೆ ನಿಯಾಮಕನಾಗಿರುವ ಭಗವಂತನ ವಿಷಯವನ್ನು ಪ್ರಶ್ನಿಸುವನು. ನಚಿಕೇತನ ಈ ಪ್ರಶ್ನೆಯನ್ನು ಯಮದೇವರು ಬೇಗನೆ ಉತ್ತರಿಸುವುದಿಲ್ಲ. ಸಂಸಾರದಲ್ಲೂ ಮುಕ್ತಿಯಲ್ಲೂ ಜೀವರಿಗೆ ನಿಯಾಮಕನಾದ ಭಗವಂತನ ರೂಪದ ಜ್ಞಾನ ಮತ್ತು ಉಪಾಸನೆಗೆ ಬೇಕಾದ ಅರ್ಹತೆಯು ನಚಿಕೇತನಿಗೆ ಇದೆಯೇ ಎಂಬುದನ್ನು ಪರೀಕ್ಷಿಸುವರು. ಅತ್ಯಂತ ರಹಸ್ಯವಾದ ಈ ಭಗವತ್ತತ್ತ್ವದ ಉಪದೇಶದ ಬದಲು ಬೇರೆ ಭೌತಿಕ ಸುಖ ಸಂಪತ್ತುಗಳನ್ನು ನೀಡುವುದಾಗಿ ಈ ಪ್ರಶ್ನೆಯ ಬಗ್ಗೆ ಹಠ ಹಿಡಿಯಬಾರದೆಂದೂ ಒತ್ತಾಯಿಸುವರು. ಸಂಸಾರದಲ್ಲಿ ಅಲಭ್ಯವಾದ ಸಕಲ ಸುಖಸಾಧಕಗಳನ್ನು ಭೂಮಿ, ಐಶ್ವರ್ಯ, ಧನ, ಕನಕ, ರತ್ನಗಳು ಚಿರಜೀವನ ಮೊದಲಾದ ಸಕಲಭೋಗ ಭಾಗ್ಯಗಳನ್ನು ನಚಿಕೇತನು ಮನಸ್ಸು ಮಾಡಿದ್ದರೆ ಯಮನಿಂದ ಪಡೆಯಬಹುದಿತ್ತು. ಆದರೆ ನಚಿಕೇತನು ಈ ಯಾವ ಆಮಿಷ, ಆಕರ್ಷಣೆಗಳಿಗೂ ಒಳಗಾಗಲಿಲ್ಲ. ಈ ಭೋಗ ಸಾಮಗ್ರಿಗಳಿಂದ ದೊರೆಯುವ ಸುಖದ ಇತಿಮಿತಿಗಳನ್ನು ಆತನು ಚೆನ್ನಾಗಿ ತಿಳಿದಿದ್ದನು. ವಿಷಯ ಭೋಗದಿಂದ ನಮ್ಮ ಕಾಮನೆಯು ತಣಿಯುವುದಿಲ್ಲ. ಅದು ಇನ್ನೂ ಹೆಚ್ಚು ಪ್ರಜ್ವಲಿತವಾಗುವುದು. ಮನಸ್ಸನ್ನು ಪ್ರಸನ್ನಗೊಳಿಸುವ ಬದಲು ಉದ್ರಿಕ್ತಗೊಳಿಸುವ ಈ ಸಾಂಸಾರಿಕ ಸುಖಭೋಗದಿಂದ ಶಾಂತಿಯು ದೊರಕಲಾರದು. ಹಳೆಯ ಸುಖ ಸನ್ನಿವೇಶಗಳನ್ನು ನೆನೆಯುತ್ತಾ ಕಳೆಯುವ ದೀರ್ಘಜೀವನವು 'ಬೋರ್' ಆಗಿ ಪರಿಣಮಿಸಬಹುದು. ಎಷ್ಟು ಧನ ಸಂಪತ್ತು ದೊರಕಿದರೂ ಎಷ್ಟು ಕಾಲ ಬದುಕಿದರೂ ಯಾರಿಗೂ ಸಾಕೆಂಬ ತೃಪ್ತಿ ಉಂಟಾಗಲಾರದು. ಇಂದ್ರಿಯ ಮನಸ್ಸುಗಳನ್ನು ಕೆರಳಿಸಿ ಶರೀರವನ್ನು ಕರಗಿಸುವ ಈ ಎಲ್ಲಾ ಭೋಗ ಸಾಮಗ್ರಿಗಳು ನಿನಗೇ ಇರಲಿ. ನಾನು ಕೇಳಿದ ಈ ಭಗವತ್ತತ್ತ್ವದ

ಹೊರತು ಬೇರೆ ಯಾವುದನ್ನೂ ಬಯಸಲಾರೆನೆಂದು ಖಡಾಖಂಡಿತವಾಗಿ ಯಮದೇವರ ಕೊಡುಗೆಯನ್ನು ನಚಿಕೇತನು ನಿರಾಕರಿಸುವನು. ನಚಿಕೇತನ ಈ ತ್ಯಾಗ ವೈರಾಗ್ಯಗಳನ್ನು ಕಂಡು ಯಮದೇವರು ಅತ್ಯಂತ ಪ್ರಸನ್ನರಾಗಿ ಅವನ ಈ ನಿಷ್ಠೆಯನ್ನು ತುಂಬಾ ಪ್ರಶಂಸಿಸುವರು. ಅಧ್ಯಾತ್ಮ ವಿದ್ಯೆಯನ್ನು ಉಪದೇಶಿಸುವರು.

★ ★ ★ ★

## ಆರುಣಿ

ಹಿಂದೆ ಆಶ್ರಮವೊಂದರಲ್ಲಿ ಮಹಾತಪಸ್ವಿಗಳೂ, ಪ್ರಭಾವಶಾಲಿಗಳೂ, ಮಹಾಜ್ಞಾನಿಗಳೂ ಆದ 'ಧೌಮ್ಯ' ಎಂಬ ಮಹರ್ಷಿಗಳಿದ್ದರು. ಅವರಿಗೆ ಆರುಣಿ, ಉಪಮನ್ಯು ಮತ್ತು ಬೈದ ಎಂಬ ಮೂವರು ಶಿಷ್ಯರಿದ್ದರು. ಈ ಮೂವರೂ ಕೂಡ ಗುರುಗಳ ದಿವ್ಯ ಅನುಗ್ರಹಕ್ಕೆ ಹೇಗೆ ಪಾತ್ರರಾದರು ಎಂಬುದನ್ನು ಕಥೆಯ ಮೂಲಕ ತಿಳಿಯೋಣ.

ಉಪಾಧ್ಯಾಯರಾದ ಧೌಮ್ಯರು ತಮ್ಮ ನಿತ್ಯಾನುಷ್ಠಾನಗಳಲ್ಲಿ ತೊಡಗಿ ಭಗವಂತನಲ್ಲಿ ಆಸಕ್ತರಾಗಿ ತಮ್ಮ ಜೀವನವನ್ನು ಸಾರ್ಥಕಗೊಳಿಸುತ್ತಿದ್ದಾರೆ. ಅದೊಂದು ದಿವಸ ತನ್ನ ಮೂವರು ಶಿಷ್ಯರ ನಡುವೆ ಆರುಣಿಯನ್ನು ಕರೆದಿದ್ದಾರೆ.

ಎಲೈ ಆರುಣಿ ! ಇಲ್ಲಿ ಬಾ. ಇಂದು ನೀನು ಗದ್ದೆಗೆ ತೆರಳಿ ಗದ್ದೆಯ ಬದುವನ್ನು ಕಟ್ಟಿ ನೀರನ್ನು ನಿಲ್ಲಿಸು ಎಂದು ಆಜ್ಞೆ ಮಾಡಿದ್ದಾರೆ.

ಉಪಾಧ್ಯಾಯರ ಆಜ್ಞೆಯನ್ನು ಶಿರಸಾವಹಿಸಿದ ಆರುಣಿಯು ನೇರವಾಗಿ ಗದ್ದೆಯ ಕಡೆ ಓಡೋಡಿ ಹೋಗುತ್ತಿದ್ದಾನೆ. ಗದ್ದೆಯಲ್ಲಿ ಬದುವನ್ನು ಒಡೆದು ನೀರು ಕೊಚ್ಚಿಹೋಗುತ್ತಿದೆ. ಆರುಣಿಯು ಅಲ್ಲಿ ತೆರಳಿ ಬದುವನ್ನು ಸರಿಪಡಿಸಲು ಬಹಳ ಪ್ರಯತ್ನಿಸುತ್ತಿದ್ದಾನೆ. ತನ್ನ ಶಕ್ತಿಯಿರುವಷ್ಟು ಶತಪ್ರಯತ್ನ ಪಟ್ಟರೂ ಬದುವನ್ನು ಸರಿಪಡಿಸಲು ಅದೇಕೋ ಆಗುತ್ತಿಲ್ಲ. ಎಲ್ಲಾ ಪ್ರಯತ್ನಗಳು ವ್ಯರ್ಥವಾಗುತ್ತಿವೆ. ಛಲ ಬಿಡದೆ ಬಹುಕಷ್ಟದಿಂದ ಬೆವರು ಸುರಿಸಿ ತನ್ನ ಪ್ರಯತ್ನವನ್ನು ಮುಂದೊರೆಸುತ್ತಿರುವ ಆರುಣಿಗೆ ಕೊನೆಯದಾದ ಉಪಾಯವೊಂದು ಹೊಳೆಯಿತು.

''ಹ್ಹಾ! ಇದೇ ಸರಿಯಾದ ಮಾರ್ಗ, ಹೀಗೇ ಮಾಡುತ್ತೇನೆ'' ಎಂದು ನಿಟ್ಟುಸಿರು ಬಿಟ್ಟು ರಭಸವಾಗಿ ಹರಿಯುತ್ತಿರುವ ಗದ್ದೆಯ ಬದುವಿನಲ್ಲಿ ಸ್ವತಃ ತಾನೇ ಮಲಗಿಕೊಂಡು ಬಿಟ್ಟನು. ರಭಸವಾಗಿ ಹರಿಯುವ ನೀರು ನಿಂತಿದೆ. ನಾಟಿ ಮಾಡಿರುವ ಹಸಿರು ಗದ್ದೆಯ ತುಂಬಾ ನೀರು ತುಂಬಿದೆ.

''ಗುರುಗಳ ಆಜ್ಞೆಯನ್ನು ನಾನು ಪಾಲಿಸಿದಂತಾಯಿತು. ನನಗೆ ಜೀವನದಲ್ಲಿ ಇನ್ನೇನು ಬೇಕು'' ಎಂಬ ಭಾವನೆಯಿಂದ ಗದ್ದೆಯ ಬದುವಿನ ಅವಿಭಾಜ್ಯ ಅಂಗವಾಗಿಬಿಟ್ಟ ಆರುಣಿ.

ಸಾಯಂಕಾಲದ ಸಮಯವಾದರೂ ಆಶ್ರಮಕ್ಕೆ ಆರುಣಿ ಇನ್ನೂ ಕೂಡ ಮರಳಿಲ್ಲ. ಗುರುಗಳಿಗೆ ಆರುಣಿ ಎಲ್ಲಿ ಹೋಗಿದ್ದಾನೆಂದು ಆತಂಕವಾಗಿದೆ. ಉಳಿದ ಇಬ್ಬರು ಶಿಷ್ಯರನ್ನು ಕರೆದಿದ್ದಾರೆ. ''ಆರುಣಿಯು ಎಲ್ಲಿ ಹೋಗಿದ್ದಾನೆ. ನಿಮಗೆ ತಿಳಿದಿದೆಯೇ?''

''ಗುರುಗಳೇ ತಾವೇ ಆರುಣಿಯನ್ನು ಗದ್ದೆಯ ಬದುವನ್ನು ಕಟ್ಟಿಬಾ ಎಂದು ಆಜ್ಞೆಮಾಡಿ ಕಳುಹಿಸಿಕೊಟ್ಟಿರಿ ಅಲ್ಲವೇ!''

ಹೌದು ! ಆರುಣಿ ಬಹುಶಃ ಅಲ್ಲಿಯೇ ಉಳಿದಿರಬಹುದು. ನನ್ನೊಡನೆ ಬನ್ನಿ ಅವನನ್ನು ಹುಡುಕೋಣ ಎನ್ನುತ್ತಾ ಶಿಷ್ಯಸಹಿತರಾಗಿ ಗುರುಗಳು ಆರಣಿಯನ್ನು ಅರಸಿ ಹೊರಟೇ ಬಿಟ್ಟರು. ಮಾತೃಹೃದಯವನ್ನೂ ಕೂಡ ಮೀರಿಸುವ ಕಾರುಣ್ಯರಸವನ್ನು ಹೃದಯದಲ್ಲಿ ತುಂಬಿಕೊಂಡ ಧೌಮ್ಯರು ಗಟ್ಟಿಯಾಗಿ ಆರುಣಿಯನ್ನು ಕರೆಯುತ್ತಿದ್ದಾರೆ.

ಆರುಣಿ ! ಪಾಂಚಾಲ !! ಮಗು ! ಶಿಷ್ಯ ! ಎಲ್ಲಿರುವೆ? ಎಲ್ಲಿ ಹೋಗಿರುವೆ ? ಇಲ್ಲಿ ಬಾ.

ತನ್ನ ಗುರುಗಳ ವಾಕ್ಯವನ್ನು ಕೇಳಿದಾಕ್ಷಣ ಗದ್ದೆಯ ಬದುವಾಗಿದ್ದ ಆರುಣಿ ಇದ್ದಕ್ಕಿದ್ದಂತೆ ಮೇಲೆದ್ದಿದ್ದಾನೆ. ಸಂಪೂರ್ಣ ಮಣ್ಣಿನಿಂದ ಮೆತ್ತಿರುವ ಅದೇ ದೇಹದಲ್ಲಿ ಹಾಗೆಯೇ ಓಡೋಡಿ ಬಂದು ಗುರುಗಳಿಗೆ ನಮಿಸಿ ಕೈಮುಗಿಯುತ್ತಿದ್ದಾನೆ.

ಪೂಜ್ಯರೇ! ಗದ್ದೆಯ ಬದುವು ಮುರಿದುಹೋಗಿ ನೀರು ಕೊಚ್ಚಿಹೋಗುತ್ತಿತ್ತು. ಅದನ್ನು ಕಟ್ಟಲು ಎಷ್ಟೇ ಪ್ರಯತ್ನಪಟ್ಟರು ನನ್ನಿಂದ ಸಾಧ್ಯವಾಗಲಿಲ್ಲ. ಅದಕ್ಕಾಗಿ ನಾನೇ ಅಡ್ಡವಾಗಿ ಮಲಗಿಬಿಟ್ಟಿದ್ದೆ. ಪರಮಪೂಜ್ಯರಾದ ತಮ್ಮ ಮಾತುಗಳನ್ನು ಕೇಳಿ ಆ ಗದ್ದೆಯ ಭಾಗವನ್ನು ಸೀಳಿಕೊಂಡು ತಮ್ಮ ಬಳಿಗೆ ಬಂದಿದ್ದೇನೆ. ಗುರುಗಳಾದ ತಮ್ಮ ಪಾದಗಳಲ್ಲಿ ನಾನು ನಮಸ್ಕರಿಸುತ್ತೇನೆ. ನಾನು ಮುಂದೇನು ಮಾಡಬೇಕು ? ಆದೇಶ ಮಾಡಿರಿ.

ಶಿಷ್ಯನಾದ ಆರುಣಿಯ ಸೇವೆಯನ್ನು ಗಮನಿಸಿದ ಧೌಮ್ಯರಿಗೆ ಅಪಾರ ಆನಂದವಾಗಿದೆ. ಹೃದಯ ಅರಳಿದೆ. ಅವನನ್ನು ಉದ್ಧಾರ ಮಾಡಬೇಕೆಂಬ ಹೆಬ್ಬಯಕೆ ಅವರಲ್ಲಿ ಅಂಕುರಿಸುತ್ತಿದೆ.

''ಆರುಣಿಯೇ'' ಗದ್ದೆಯನ್ನು (ಕೇದಾರಖಂಡವನ್ನು) ಸೀಳಿಕೊಂಡು ಮೇಲೆ ಬಂದಿರುವ ಕಾರಣ ನೀನು 'ಉದ್ದಾಲಕ' ಎಂದೇ ಪ್ರಸಿದ್ಧನಾಗು. ನಿನ್ನ ಹೆಸರಿನಿಂದಲೇ ನಿನ್ನ ಗುರುಸೇವೆಯು ಜಗತ್ತಿನಲ್ಲಿ ಬೆಳಕಿಗೆ ಬರಲಿ. ನನ್ನ ಆಜ್ಞೆಯನ್ನು ಚಾಚೂ ತಪ್ಪದೇ ಪಾಲಿಸಿದ ಕಾರಣ ನಿನಗೆ ಮಂಗಳವಾಗಲಿ. ಸಮಸ್ತ ವೇದಗಳು, ಧರ್ಮಶಾಸ್ತ್ರಗಳು, ಇತಿಹಾಸ ಪುರಾಣಗಳು ನಿನಗೆ ಪ್ರತಿಭಾತವಾಗಲಿ. ಇನ್ನು ಮುಂದೆ ನೀನು ಮಹಾಜ್ಞಾನಿಯಾಗು !'' ಹೀಗೆ ಹೇಳುತ್ತಾ ಶಿಷ್ಯನ ತಲೆಯ ಮೇಲೆ ಕೈಯನ್ನಿಟ್ಟು ಆಶೀರ್ವದಿಸಿದರು. ಅವನನ್ನು ಉದ್ಧಾರ ಮಾಡಿದರು.

ಗುರುಗಳ ಅಪಾರ ಆಶೀರ್ವಾದವನ್ನು ಪಡೆದಿರುವ ಉದ್ದಾಲಕನು ಕೃತಕೃತ್ಯನಾಗಿ ತನ್ನ ದೇಶಕ್ಕೆ ಪ್ರಯಾಣ ಬೆಳೆಸಿದನು.

★ ★ ★

## ಉಪಮನ್ಯು

ಧೌಮ್ಯಋಷಿಗಳಿಗೆ ಉಪಮನ್ಯು ಎಂಬ ಮತ್ತೊಬ್ಬ ಶಿಷ್ಯನಿದ್ದನು. ಇವನೂ ಸಹ ಬಹಳ ಗುಣವಂತನೂ, ವಿನೀತನೂ ಆಗಿದ್ದನು. ಗುರುಗಳು ಒಮ್ಮೆ ಅವನನ್ನು ಕರೆದು ಅವನು ಮಾಡಬೇಕಾದ ಗುರುಸೇವೆಯನ್ನು ಆಜ್ಞೆ ಮಾಡಿದರು.

ಮಗು ಉಪಮನ್ಯು ! ಇಂದಿನಿಂದ ನೀನು ಗೋವುಗಳನ್ನುಸಂಪೂರ್ಣ ರಕ್ಷಣೆ ಮಾಡಬೇಕು.

ಗುರುಗಳ ಆಜ್ಞೆಯನ್ನು ಶಿರಸಾವಹಿಸಿದ ಉಪಮನ್ಯು ಗೋವುಗಳ ರಕ್ಷಣೆಯಲ್ಲಿ ತೊಡಗಿದನು. ಹಗಲೆಲ್ಲಾ ಗೋವುಗಳನ್ನು ರಕ್ಷಣೆ ಮಾಡಿ ಸಾಯಂಕಾಲದ ವೇಳೆಯಲ್ಲಿ ಹಿಂದಿರುಗುತ್ತಿದ್ದನು. ಸಾಯಂಕಾಲದಲ್ಲಿ ಗುರುಗಳಿಗೆ ನಮಸ್ಕರಿಸಿ ಅವರು ಮತ್ತೇನಾದರೂ ಆಜ್ಞೆ ಮಾಡಬಹುದೆಂದು ನಿರೀಕ್ಷಿಸುತ್ತಿದ್ದನು.

ಅವನ ಗುರುಭಕ್ತಿಯನ್ನು ಪರೀಕ್ಷಿಸಬೇಕೆಂದು ಗುರುಗಳಾದ ಧೌಮ್ಯರು ಇಚ್ಛಿಸಿದರು. ಒಂದು ದಿನ ದಷ್ಟಪುಷ್ಟನಾದ ಉಪಮನ್ಯುವನ್ನು ಕುರಿತು 'ಮಗು ಉಪಮನ್ಯು ! ಯಾವ ಆಹಾರವನ್ನು ಸ್ವೀಕರಿಸಿ ಜೀವನವನ್ನು ನಡೆಸುತ್ತಿರುವಿ, ಇತ್ತೀಚೆಗೆ ನೀನು ದಷ್ಟಪುಷ್ಟನಾಗಿ ಕಾಣಿಸಿರುತ್ತಿರುವೆಯಲ್ಲಾ?'

ಗುರುಗಳೇ ! ಗೋವುಗಳನ್ನು ರಕ್ಷಿಸುವಾಗ ಮಧ್ಯದಲ್ಲಿ ಭಿಕ್ಷೆ ಬೇಡುವೆನು; ಆ ಭಿಕ್ಷಾನ್ನದಿಂದ ಜೀವನವನ್ನುಸಾಗಿಸುತ್ತಾ ದಷ್ಟಪುಷ್ಟನಾಗಿರುವೆನು.

ನೀನು ಬೇಡುವ ಭಿಕ್ಷಾನ್ನವು ನನಗೆ ಸೇರಿದ್ದು. ನನಗೆ ನಿವೇದನೆ ಮಾಡದೇ ಭಿಕ್ಷಾನ್ನವನ್ನು ಊಟ ಮಾಡುವ ಅಧಿಕಾರ ನಿನಗಿಲ್ಲ. ಬ್ರಹ್ಮಚಾರಿಗಳು ಭಿಕ್ಷಾನ್ನವನ್ನು ಬೇಡಿ ಗುರುಗಳಿಗೆ ಸಮರ್ಪಿಸಬೇಕೆಂಬುದು ಧರ್ಮ. ಗುರುಗಳ ಆಜ್ಞೆಯಂತೆ ಮರುದಿವಸದಿಂದ ಭಿಕ್ಷಾನ್ನವನ್ನು ಬೇಡಿ ಗುರುಗಳಿಗೆ ಸಮರ್ಪಿಸಿದನು. ಮತ್ತು ಗೋವುಗಳನ್ನು ಕಾಯುತ್ತಾ ಗುರುಸೇವೆಯಲ್ಲಿ ತತ್ಪರನಾದನು. ಸಾಯಂಕಾಲದ ಸಮಯದಲ್ಲಿ ಗುರುಗಳ ಎದುರು ಬಂದು ನಮಸ್ಕರಿಸಿದನು.

ಗುರುಗಳಾದ ಧೌಮ್ಯರು ಉಪಮನ್ಯುವು ಪುನಃ ದಷ್ಟಪುಷ್ಟನಾಗಿರುವುದನ್ನು ಗಮನಿಸಿದರು. ವತ್ಸ ಉಪಮನ್ಯು! ನೀನು ಬೇಡುವ ಭಿಕ್ಷಾನ್ನವನ್ನೆಲ್ಲಾ ನಾನೇ ಊಟ ಮಾಡುತ್ತಿದ್ದೇನೆ. ಅದರಲ್ಲಿ ಸ್ವಲ್ಪಭಾಗವನ್ನೂ ಕೂಡ ನಾನು ನಿನಗೆ ನೀಡುತ್ತಿಲ್ಲ. ಆದರೂ ನೀನು ದಷ್ಟಪುಷ್ಟನಾಗಿರುವೆಯಲ್ಲಾ?

ಗುರುಗಳೇ ! ಒಮ್ಮೆ ಭಿಕ್ಷೆಯನ್ನು ಬೇಡಿ ನಿಮಗೆ ನಿವೇದನೆ ಮಾಡುತ್ತಿದ್ದೇನೆ. ಅನಂತರ ಪುನಃ ಮತ್ತೊಮ್ಮೆ ಭಿಕ್ಷೆಯನ್ನು ಬೇಡುತ್ತೇನೆ. ಆದರಿಂದ ನನ್ನ ಜೀವನವು ನಡೆಯುತ್ತಿದೆ.

''ನೈಷಾ ನ್ಯಾಯ್ಯಾ ಗುರುವೃತ್ತಿಃ. ಅನ್ಯೇಷಾಮಪಿ ಭೈಕ್ಷೋಪಜೀವಿನಾಂ ತ್ವಂ ವೃತ್ತ್ಯುಪರೋಧಂ ಕರೋಷಿ ಏವಂ ವರ್ತಮಾನೋ ಲುಬ್ಧೋಽಸಿ''

ನೀನು ಎರಡನೆಯ ಬಾರಿ ಭಿಕ್ಷೆಯನ್ನು ಬೇಡುವುದು ಅನ್ಯಾಯ. ಇದು ಗುರುಗಳ ಸೇವೆಯೆನಿಸುವುದಿಲ್ಲ. ಮನೆಮನೆಗಳಲ್ಲಿ ಭಿಕ್ಷಾನ್ನವನ್ನು ಬೇಡುವ ಬ್ರಹ್ಮಚಾರಿಗಳು ನೀನೊಬ್ಬನೇ ಅಲ್ಲ. ಬೇರೆಯವರೂ ಇದ್ದಾರೆ. ಎರಡನೆಯ ಬಾರಿ ನೀನು ಭಿಕ್ಷೆಯನ್ನು ಬೇಡುವುದರಿಂದ ಉಳಿದ ಬ್ರಹ್ಮಚಾರಿಗಳ ಜೀವನಕ್ಕೆ ತೊಂದರೆಯಾಗುತ್ತದೆ. ಹೀಗೆ ಮಾಡುತ್ತಿರುವ ನೀನು ಲೋಭ ಎಂಬ ದೋಷಕ್ಕೆ ಒಳಗಾಗುತ್ತಿರುವಿ.

ಗುರುಗಳ ಅಭಿಪ್ರಾಯವನ್ನು ತಿಳಿದ ಉಪಮನ್ಯು ಮರುದಿವಸದಿಂದ ಒಮ್ಮೆ ಭಿಕ್ಷೆಯನ್ನು ಬೇಡಿ ಗುರುಗಳಿಗೆ ಸಮರ್ಪಿಸುತ್ತಿದ್ದನು. ಮತ್ತೊಮ್ಮೆ ಭಿಕ್ಷೆ ಬೇಡುವುದನ್ನು ನಿಲ್ಲಿಸಿದನು. ಹಗಲೆಲ್ಲಾ ಗೋವುಗಳನ್ನು ರಕ್ಷಣೆ ಮಾಡಿ ಸಾಯಂಕಾಲದ ಸಮಯದಲ್ಲಿ ಗುರುಗಳಿಗೆ ನಮಸ್ಕರಿಸಿ ನಿಂತುಕೊಂಡನು.

ಗುರುಗಳಾದ ಧೌಮ್ಯರು ಶಿಷ್ಯನು ಮೊದಲಿನಂತೆ ದಷ್ಟಪುಷ್ಟನಾಗಿರುವುದನ್ನು ಗಮನಿಸಿದರು. ಪುನಃ ಉಪಮನ್ಯುವನ್ನು ಕುರಿತು ಆಶ್ಚರ್ಯದಿಂದ ಪ್ರಶ್ನಿಸಿದರು. ಎರಡನೆಯ ಬಾರಿ ನೀನು ಭಿಕ್ಷಾನ್ನವನ್ನು ಬೇಡುತ್ತಿಲ್ಲ. ಆದರೂ ಕೂಡ ಹೇಗೆ ದಷ್ಟಪುಷ್ಟನಾಗಿರುವಿ?

ಗುರುಗಳೇ ! ಹಸುಗಳು ತಮ್ಮ ಕರುಗಳಿಗೆ ಹಾಲನ್ನು ಕುಡಿಸಿದ ಮೇಲೆ ಹಾಲನ್ನು ಕರೆದು ನಾನು ಕುಡಿಯುತ್ತಿದ್ದೇನೆ. ಆದ್ದರಿಂದ ಉತ್ಸಾಹದಿಂದಲೇ ನನ್ನ ಜೀವನವು ಸಾಗುತ್ತಿದೆ.

'ನೈತನ್ನ್ಯಾಯಂ ಪಯ ಉಪಯೋಕ್ತುಂ ಭವತೋ ಮಯಾ ನಾನುಜ್ಞಾತಮಿತಿ'

ನನ್ನ ಅನುಮತಿಯಿಲ್ಲದೇ ಹಸುಗಳ ಹಾಲನ್ನು ಕುಡಿಯುವ ಅಧಿಕಾರ ನಿನಗಿಲ್ಲ. ನಿನ್ನ ಈ ಪ್ರವೃತ್ತಿಯು ಅನ್ಯಾಯವಾಗಿದೆ. ಗುರುಗಳ ಆಜ್ಞೆಯಂತೆ ಮರುದಿವಸದಿಂದ ಹಾಲನ್ನೂ ಕೂಡ ಸ್ವೀಕರಿಸುವುದನ್ನು ನಿಲ್ಲಿಸಿದನು.

ಕೆಲವು ದಿವಸಗಳ ಅನಂತರ ಗುರುಗಳ ಬಳಿಗೆ ಬಂದು ನಮಸ್ಕರಿಸಿ ನಿಂತುಕೊಂಡನು. ಗುರುಗಳಾದ ಧೌಮ್ಯರು ಉಪಮನ್ಯು ಮೊದಲಿನಂತೆ ದಷ್ಟಪುಷ್ಟನಾಗಿರುವುದನ್ನು ಗಮನಿಸಿದರು.

ಮಗು ಉಪಮನ್ಯು ! ಭಿಕ್ಷಾನ್ನವನ್ನು ನೀನು ತಿನ್ನುತ್ತಿಲ್ಲ. ಎರಡನೆ ಬಾರಿ ಭಿಕ್ಷಾಟನೆ ಮಾಡುವುದನ್ನೂ ಕೂಡ ನಿಲ್ಲಿಸಿರುವಿ. ಹಸುಗಳ ಹಾಲನ್ನೂ ಕೂಡ ಕುಡಿಯುತ್ತಿಲ್ಲ. ಹೀಗಿದ್ದರೂ ದಷ್ಟಪುಷ್ಟನಾಗಿರಲು ಏನು ಕಾರಣ ?

ಗುರುಗಳೇ ! ತಮ್ಮ ಆಜ್ಞೆಯಂತೆಯೇ ನಾನು ಹಾಲು ಕುಡಿಯುವುದನ್ನೂ ಕೂಡ ನಿಲ್ಲಿಸಿರುವೆ. ಹಸಿವೆಯನ್ನು ತಡೆಯಲು ಆಗದಿದ್ದಾಗ ಕರುಗಳು ತಾಯಿಯ ಹಾಲನ್ನು ಕುಡಿಯುತ್ತಾ ಬಾಯಿಂದ ಹಾಲನ್ನು ಸುರಿಸುತ್ತವೆ. ಬಾಯಿಂದ ಸುರಿಯುವ ನೊರೆಯನ್ನು ಕುಡಿದು ಬದುಕುತ್ತಿದ್ದೇನೆ.

ಉಪಮನ್ಯು ! ನೀನು ಮಾಡುತ್ತಿರುವುದು ತಪ್ಪು. ಕರುಗಳು ಬಹಳ ಒಳ್ಳೆಯ ಗುಣಗಳಿಂದ ಕೂಡಿದವುಗಳಾಗಿವೆ. ನಿನ್ನ ಮೇಲಿರುವ ಅನುಕಂಪದಿಂದ ತಾವು ಹಾಲನ್ನು ಕುಡಿಯುವುದನ್ನು ಕಮ್ಮಿ ಮಾಡಿ ತುಂಬಾ ಹಾಲನ್ನು ನೊರೆಯಾಗಿ ಸುರಿಸುತ್ತವೆ. ಆದ್ದರಿಂದ ನಿನ್ನ ಈ ಪ್ರವೃತ್ತಿಯಿಂದ ಕರುಗಳ ಜೀವನಕ್ಕೆ ತೊಂದರೆಯಾಗುತ್ತದೆ. ನೊರೆಯನ್ನು ಕುಡಿಯಲೂ ಕೂಡ ನಿನಗೆ ಅಧಿಕಾರವಿಲ್ಲ.

ಮರುದಿವಸದಿಂದ ಉಪಮನ್ಯು ನಿರಾಹಾರನಾಗಿ ಹಸುಗಳನ್ನು ಕಾಯಲು ಪ್ರಾರಂಭಿಸಿದನು. ಭಿಕ್ಷಾನ್ನವನ್ನು ಬೇಡಿ ಗುರುಗಳಿಗೆ ಸಮರ್ಪಿಸುತ್ತಿದ್ದನು. ಎರಡನೆಯ ಬಾರಿ ಭಿಕ್ಷಾನ್ನವನ್ನು ಬೇಡುತ್ತಿರಲಿಲ್ಲ. ಹಾಲನ್ನೂ ಕೂಡ

ಕುಡಿಯುತ್ತಿರಲಿಲ್ಲ. ಹಾಲಿನ ನೊರೆಯನ್ನೂ ಕೂಡ ಬಿಟ್ಟುಬಿಟ್ಟನು. ಕೆಲವು ದಿವಸಗಳ ಕಾಲ ಹೀಗೆ ಉಪವಾಸದಲ್ಲಿಯೇ ಗುರುಸೇವೆಯನ್ನು ಮುಂದೊರೆಸಿದನು.

ಒಮ್ಮೆ ಅವನು ಕಾಡಿನಲ್ಲಿ ಹಸಿವೆಯಿಂದ ಬಳಲಿ ಎಕ್ಕದ ಗಿಡದ ಎಲೆಗಳನ್ನು ತಿಂದುಬಿಟ್ಟನು. ಆ ಎಲೆಗಳು ಕ್ಷಾರ, ಕಟು ಮತ್ತು ಉಷ್ಣತೆಯ ಪ್ರಭಾವವನ್ನು ಹೊಂದಿದ್ದವು. ಅದರ ಪ್ರಭಾವದಿಂದ ಉಪಮನ್ಯು ಎರಡೂ ಕಣ್ಣುಗಳನ್ನು ಕಳೆದುಕೊಂಡು ಕುರುಡನಾದನು.

ಕುರುಡನಾದರೂ ಕೂಡ ಗೋ-ಸೇವೆಯನ್ನು ಬಿಡಲಿಲ್ಲ. ಸಾಯಂಕಾಲದ ಸಮಯದಲ್ಲಿ ಹಸುಗಳನ್ನು ಗುರುಗಳ ಮನೆಗೆ ಕರೆದುಕೊಂಡು ಹೋಗುವಾಗ ಕುರುಡನಾದ ಅವನು ಒಂದು ಹಾಳುಬಾವಿಯಲ್ಲಿ ಬಿದ್ದುಬಿಟ್ಟನು.

ಎಂದಿನಂತೆ ಹಸುಗಳ ಜೊತೆಗೆ ಉಪಮನ್ಯು ಬಾರದಿರುವುದನ್ನು ಗಮನಿಸಿದ ಧೌಮ್ಯರು ಉಳಿದ ಶಿಷ್ಯರನ್ನು ಕರೆದು 'ಉಪಮನ್ಯು ಏಕೆ ಬರಲಿಲ್ಲ ?' ಎಂದು ಪ್ರಶ್ನಿಸಿದರು. ಶಿಷ್ಯರು ಗುರುಗಳನ್ನು ಕುರಿತು ಹಸುಗಳನ್ನು ಕಾಯಲು ಕಾಡಿಗೆ ಹೋಗಿದ್ದಾನೆ ಎಂದು ಹೇಳಿದರು. ನಾನು ಉಪಮನ್ಯುವಿಗೆ ಎಲ್ಲಾ ಬಗೆಯ ಆಹಾರಗಳನ್ನು ನಿಷೇಧ ಮಾಡಿದ್ದೇನೆ. ಆಹಾರವಿಲ್ಲದೇ ಬಳಲಿ ಕಾಡಿನಿಂದ ಅವನು ಹಿಂದಿರುಗಿಲ್ಲ. ನಾನೇ ಸ್ವತಃ ತೆರಳುತ್ತೇನೆ.

ಹೀಗೆ ಹೇಳಿ ಧೌಮ್ಯರು ಕಾಡಿಗೆ ಹೊರಟಿಯೇ ಬಿಟ್ಟರು. ಕಾಡಿನಲ್ಲಿ ಜೋರಾಗಿ ಕೂಗುತ್ತಾ 'ಎಲೈ ಉಪಮನ್ಯು ! ಎಲ್ಲಿರುವಿ ? ಮಗು, ನಿನ್ನನ್ನು ನಾನು ಹುಡುಕುತ್ತಾ ಇಲ್ಲಿಗೆ ಬಂದಿರುವೆನು. ಬೇಗ ಬಾ !!'

ಗುರುಗಳ ಮಾತನ್ನು ಕೇಳುತ್ತಾ ಬಾವಿಯಲ್ಲಿದ್ದ ಉಪಮನ್ಯು ಗಟ್ಟಿಯಾಗಿ ಹೇಳಿದನು.

ಗುರುಗಳೇ ! ನಾನು ಹಾಳುಬಾವಿಯಲ್ಲಿ ಬಿದ್ದುಬಿಟ್ಟಿದ್ದೇನೆ.

ಬಾವಿಯಲ್ಲಿ ಏಕೆ ಬಿದ್ದಿರುವಿ ?

ಹಸಿವು ತಾಳಲಾರದೇ ಎಕ್ಕದ ಎಲೆಗಳನ್ನು ತಿಂದು ಕಣ್ಣುಗಳನ್ನು ಕಳೆದುಕೊಂಡೆ. ದಾರಿಕಾಣದೇ ಅಲೆದಾಡುತ್ತಾ ಈ ಕೂಪದಲ್ಲಿ ಬಿದ್ದಿದ್ದೇನೆ.

ಮಗು, ಉಪಮನ್ಯು ! ಚಿಂತಿಸಬೇಡ. ಅಶ್ವಿನೀ ದೇವತೆಗಳನ್ನು ಈಗಲೇ ಸ್ತೋತ್ರಮಾಡು. ದೇವವೈದ್ಯರಾದ ಅವರು ನಿನಗೆ ದೃಷ್ಟಿಯನ್ನು ಕರುಣಿಸುತ್ತಾರೆ.

ಗುರುಗಳ ಆದೇಶದಂತೆ ಋಗ್ವೇದ ಮಂತ್ರಗಳಿಂದ ಉಪಮನ್ಯುವು ಅಶ್ವಿನಿದೇವತೆಗಳನ್ನು ಸ್ತೋತ್ರಮಾಡಲು ಪ್ರಾರಂಭಿಸಿದನು.

ಪ್ರ ಪೂರ್ವಗೌ ಪೂರ್ವಜೌ ಚಿತ್ರಭಾನೂ
ಗಿರಾ ಶಂಸಾಮಿ ತಪನಾವನಂತೌ ।
ದಿವ್ಯೌ ಸುಪರ್ಣಾವರಜೌ ವಿಮಾನಾ-
ವಧಿಕ್ಷಿಪಂತೌ ಭುವನಾನಿ ವಿಶ್ವಾ ॥

ಎಲ್ಲರಿಗಿಂತಲೂ ಮುಂದೆ ಸಂಚರಿಸುವ, ಜಗತ್ತಿನಲ್ಲಿ ಮೊದಲೇ ಜನ್ಮವನ್ನು ಪಡೆದ, ವಿಚಿತ್ರವಾದ ಪ್ರಕಾಶವನ್ನು ಹೊಂದಿದ, ಶತ್ರುಗಳಿಗೆ ಸಂತಾಪವನ್ನು ಉಂಟುಮಾಡುವ, ಅಮೃತಪಾನ ಮಾಡಿದ ಕಾರಣದಿಂದ ನಾಶರಹಿತರಾದ, ದೇವತಾಗಣದಲ್ಲಿ ಸೇರಿರುವ, ಒಳ್ಳೆಯ ರಥವನ್ನು ಹೊಂದಿರುವ, ರಜೋಗುಣರಹಿತರಾದ, ಇಚ್ಛಾಜ್ಞಾನ- ಸಹಿತರಾದ, ಎಲ್ಲ ಲೋಕಗಳನ್ನು ತಮ್ಮ ಪ್ರಭೆಯಿಂದ ಧಿಕ್ಕರಿಸುವ, ಎಲೈ ಅಶ್ವಿನೀ ದೇವತೆಗಳೇ! ಶ್ರುತಿರೂಪವಾಕ್ಯಗಳಿಂದ ನಿಮ್ಮನ್ನು ಪ್ರಶಂಸಿಸುತ್ತೇನೆ.

ಹಿರಣ್ಮಯೌ ಶಕುನೀ ಸಾಂಪರಾಯೌ
ನಾಸತ್ಯದಸ್ರೌ ಸುನಸೌ ವೈಜಯಂತೌ ।
ಶುಕ್ರಂ ವಯಂತೌ ತರಸಾ ಸುವೇಪಾ-
ವಭಿವ್ಯಯಂತಾವಸಿತಂ ವಿವಸ್ವತ್ ॥

ಸುವರ್ಣಾಭರಣಗಳಿಂದ ಅಲಂಕೃತರಾದ, ಆರೋಗ್ಯವನ್ನು ದಯಪಾಲಿಸಿ ಶಕ್ತಿಯನ್ನು ಉಂಟುಮಾಡುವ, ಭಕ್ತರ ಆಪತ್ತಿನಲ್ಲಿ ಅವರನ್ನು ರಕ್ಷಣೆಮಾಡಲು ಬರುವ, ಸುಂದರವಾದ ನಾಸಿಕವನ್ನುಳ್ಳ, ವಿಶೇಷವಾಗಿ ಜಯಶೀಲರಾದ,

ಶೋಕರಹಿತನಾದ ಪರಮಾತ್ಮನ ಜ್ಞಾನವನ್ನು ಹೊಂದಿರುವ, ವೇಗದಿಂದ ಶತ್ರುಗಳಿಗೆ ಭಯಕಂಪವನ್ನುಂಟುಮಾಡುವ, ಕೃಷ್ಣವರ್ಣದ ಸೂರ್ಯಮಂಡಲವನ್ನು ಪಿತೃಸೇವೆಗಾಗಿ ಸಮೀಪಿಸುವ, ನಾಸತ್ಯದಸ್ರರನ್ನು ಪ್ರಶಂಸಿಸುತ್ತೇನೆ.

ಸಂತೌ ನಾಸತ್ಯಾವಶ್ವಿನಾವಾಹ್ವಯೇ ವಾಂ
ತತಃ ಸ್ರಜಂ ಬಿಭೃಥಃ ಪುಷ್ಕರಸ್ಯ ।
ಯೌ ನಾಸತ್ಯಾವಮೃತಾವೃತಾವೃಧಾ-
ವೃತೇ ದೇವಾಸ್ತತ್ಪ್ರಪದೇನ ಸೂತೇ ॥

ಅಸಜ್ಜನರಿಗೆ ನಿಲುಕದ ಎಲೈ ಅಶ್ವಿನಿದೇವತೆಗಳೇ ! ಸತ್ಯವಾದ ನನ್ನ ಕಳೆದುಹೋದ ದೃಷ್ಟಿಯ ಪುನಃ ಪ್ರಾಪ್ತಿಯ ಸಲುವಾಗಿ ವಿಷ್ಣ್ವಾದಿ ದೇವತೆಗಳ ಜೊತೆಯಲ್ಲಿ ಅರವಿಂದಮಾಲೆಯನ್ನು ಧರಿಸಿದಂತಹ ಅಮೃತಪಾನವನ್ನು ಮಾಡುವುದರಿಂದ ಮರಣರಹಿತರಾದಂತಹ ಸತ್ಯದಿಂದ ಅಭಿವೃದ್ಧರಾದಂತಹ ನಿಮ್ಮನ್ನು ಸ್ಪರ್ಶಮಾತ್ರದಿಂದ ಗರ್ಭರಕ್ಷಣೆಯನ್ನು ಮಾಡಲು ಸಮರ್ಥವಾದ ಆ ನಿಮ್ಮ ಅರವಿಂದ ಮಾಲೆಯ ಜೊತೆಯಲ್ಲಿ ವಿಷ್ಣುಃವೀರ್ಯಂ ಕಲ್ಪಯತು ಎಂಬ ಮಂತ್ರದಿಂದ ಆಹ್ವಾನಿಸುತ್ತೇನೆ.

ಮುಖೇನ ಗರ್ಭಂ ಲಭತಾಂ ಯುವಾನೌ
ಗತಾಸುರಿತ್ಥಂ ಪ್ರಪದೇನ ಸೂತೇ ।
ಸದ್ಯೋ ಜಾತೋ ಮಾತರಮತ್ತಿ ಗರ್ಭ-
ಸ್ತಾವಶ್ವಿನೌ ಮುಂಚಥೋ ಬೀಜಸೇಕಮ್ ॥

ಎಲೈ ಅಶ್ವಿನಿದೇವತೆಗಳೇ ! ನಿಮ್ಮ ಅನುಗ್ರಹದಿಂದ ಯುವದಂಪತಿಗಳು ಗರ್ಭವನ್ನು ಹೊಂದಲಿ. ತಾಯಿಯು ಮೃತವಲ್ಲದ ಗರ್ಭವನ್ನು ಪಾದಗಳನ್ನು ಮುಂದೆ ಮಾಡಿಕೊಂಡು ಪ್ರಸವಿಸಲಿ. ಏಕೆಂದರೆ ಸುಖದಿಂದ ಹೊರಗೆ ಬರದ ಆ ಗರ್ಭವು ಕೆಲವು ಸಲ ತಾಯಿಯನ್ನೇ ಕೊಲ್ಲುತ್ತದೆ. ಮತ್ತು ತಾನೂ ಮೃತವಾಗುತ್ತದೆ. ಆದ್ದರಿಂದ ಅಶ್ವಿನಿದೇವತೆಗಳೇ ಆ ತಾಯಿ ಮತ್ತು ಗರ್ಭದ ಮೇಲೆ ಜೀವನಹೇತುಭೂತವಾದ ನಿಮ್ಮಿಂದ ಅಭಿಮಂತ್ರಿತವಾದ ಜಲವನ್ನು ಪ್ರೋಕ್ಷಣ

ಮಾಡಿ. ಕಳೆದು ಹೋದ ನನ್ನ ಕಣ್ಣುಗಳಿಗೆ ಅಂತಹ ಅಮೃತಸೇಕವನ್ನು ಮಾಡಿ ನನಗೆ ದೃಷ್ಟಿಯನ್ನು ನೀಡಿ ಎಂದು ನಿಮ್ಮನ್ನು ಆಹ್ವಾನಿಸುತ್ತಿದ್ದೇನೆ.

ಉಪಮನ್ಯುವಿನ ಸ್ತೋತ್ರಕ್ಕೆ ಅಶ್ವಿನಿದೇವತೆಗಳು ಪ್ರತ್ಯಕ್ಷರಾದರು. ಮಗು ನಿನ್ನ ಭಕ್ತಿಗೂ ಸ್ತೋತ್ರಕ್ಕೂ ನಾವು ಮೆಚ್ಚಿದ್ದೇವೆ. ನಿನಗೆ ಶುಭವಾಗಲಿ. ನಿನಗೋಸ್ಕರ ತಂದಿರುವ ಈ ಅಪೂಪವನ್ನು ತಿಂದಕೂಡಲೇ ನಿನಗೆ ಕಣ್ಣುಗಳು ಬಂದುಬಿಡುತ್ತದೆ.

ದೇವತೆಗಳೇ ! ನಿಮಗೆ ನನ್ನ ಅನಂತ ನಮಸ್ಕಾರಗಳು. ನೀವು ನನ್ನ ಮೇಲಿನ ಪ್ರೀತಿಯಿಂದ ಅಪೂಪವನ್ನು ತಂದಿದ್ದೀರಿ. ಇದನ್ನು ತಿನ್ನುವುದರಿಂದ ಕಣ್ಣುಗಳು ಬರುತ್ತವೆಂದು ಸತ್ಯವನ್ನೇ ನುಡಿದಿರುವಿರಿ. ಆದರೆ ಗುರುಗಳಿಗೆ ಸಮರ್ಪಣೆ ಮಾಡದೇ ಇದನ್ನು ತಿನ್ನಲು ನಾನಂತೂ ಬಯಸುವುದಿಲ್ಲ.

ಉಪಮನ್ಯುವಿನ ಉತ್ತರವನ್ನು ಕೇಳಿ ಅಶ್ವಿನಿದೇವತೆಗಳಿಗೆ ಬಹಳ ಸಂತೋಷವಾಯಿತು. ಆದರೂ ಕೂಡ ಅವನ ಗುರುಭಕ್ತಿಯನ್ನು ಮತ್ತಷ್ಟೂ ಪರೀಕ್ಷಿಸಿದರು.

ಹಿಂದೆ ನಿನ್ನ ಗುರುಗಳು ನಮ್ಮನ್ನು ಕುರಿತು ಸ್ತೋತ್ರ ಮಾಡಿದಾಗ ಪ್ರಸನ್ನರಾಗಿ ಬಂದು ನಾವು ಅಪೂಪವನ್ನು ನೀಡಿದೆವು. ಅವರು ತಮ್ಮ ಗುರುಗಳಿಗೆ ಸಮರ್ಪಣೆ ಮಾಡದೇ ಸ್ವೀಕರಿಸಿದ್ದರು. ನೀನೂ ಕೂಡ ಹಾಗೆಯೇ ಮಾಡು. ಗುರುಗಳಿಗೆ ಸಮರ್ಪಣೆ ಮಾಡಬೇಕೆಂದು ಕಣ್ಣುಗಳನ್ನು ಕಳೆದುಕೊಳ್ಳಬೇಡ.

ದೇವತೆಗಳೇ ! ನಿಮ್ಮನ್ನು ಪ್ರತ್ಯಕ್ಷೀಕರಿಸಿಕೊಳ್ಳುವಂತೆ ಗುರುಗಳು ನನಗೆ ಆಜ್ಞೆ ಮಾಡಿದ್ದರು. ಆದಕಾರಣ ನಾನು ನಿಮ್ಮನ್ನು ಸ್ತೋತ್ರಮಾಡಿ ಅಪೂಪವನ್ನು ವರವನ್ನಾಗಿ ಪಡೆದಿರುವೆ. ಆದರೆ ನಮ್ಮ ಗುರುಗಳು ಯಾರಿಂದಲೂ ಪ್ರೇರಿತರಾಗದೇ ಹಿಂದೆ ನಿಮ್ಮನ್ನು ಸ್ತೋತ್ರಮಾಡಿದ್ದರು. ಆದ್ದರಿಂದ ಗುರುಗಳಿಗೆ ಸಮರ್ಪಣೆ ಮಾಡದೇ ನಾನು ಅಪೂಪಗಳನ್ನು ತಿನ್ನಲಾರೆ.

ಉಪಮನ್ಯುವಿನ ಗುರುಭಕ್ತಿಯಿಂದ ಅತ್ಯಂತ ಪ್ರಸನ್ನರಾದ ಅಶ್ವಿನಿದೇವತೆಗಳು ಕಣ್ಣುಗಳನ್ನು ದಯಪಾಲಿಸಿದರು. ನಿನ್ನ ಗುರುಗಳಿಗೆ ನಾವು ಕಬ್ಬಿಣದ ದೇಹವನ್ನು

ನೀಡಿದ್ದೇವೆ. ನಿನಗೆ ಸುವರ್ಣಮಯವಾದ ದೇಹವನ್ನು ನೀಡುತ್ತಿದ್ದೇವೆ. ನಿನಗೆ ಬಾಹ್ಯವಾದ ಕಣ್ಣುಗಳಷ್ಟೇ ಅಲ್ಲದೇ ಅಂತರಂಗದ ಕಣ್ಣುಗಳನ್ನೂ ಕೂಡ ನೀಡಿದ್ದೇವೆ. ನಿನಗೆ ಶ್ರೇಯಸ್ಸಾಗಲಿ. ಅಶ್ವಿನಿದೇವತೆಗಳ ವರವನ್ನು ಪಡೆದ ಉಪಮನ್ಯುವು ದಿವ್ಯಜ್ಞಾನಿಯಾಗಿ ನೇತ್ರಗಳನ್ನು ಪಡೆದು ಗುರುಗಳ ಬಳಿ ಬಂದು ನಮಸ್ಕರಿಸಿ ಎಲ್ಲವನ್ನೂ ತಿಳಿಸಿದನು.

ಸ ಚಾಸ್ಯ ಪ್ರೀತಿಮಾನಭೂತ್ ।
ಆಹ ಚೈನಂ ಯಥಾಶ್ವಿನಾವಾಹತುಸ್ತಥಾತ್ವಂ ಶ್ರೇಯೋಽವಾಪ್ಸ್ಯಸಿ ।
ಸರ್ವೇ ವೇದಾಃ ಪ್ರತಿಭಾಸ್ಯಂತೀತಿ ॥

ಉಪಾಧ್ಯಾಯರು ಅವನಿಗೆ ಪ್ರಸನ್ನರಾದರು. ಅವರು ಅವನನ್ನು ಕುರಿತು ಅಶ್ವಿನಿದೇವತೆಗಳು ಹೇಳಿದಂತೆ ನಿನಗೆ ಶ್ರೇಯಸ್ಸು ಉಂಟಾಗುವುದು. ಎಲ್ಲಾ ವೇದಗಳೂ ನಿನಗೆ ಪ್ರತಿಭಾತವಾಗುವವು ಎಂದು ಹೇಳಿದರು.

ಮಗು ಉಪಮನ್ಯು ! ಅಶ್ವಿನಿದೇವತೆಗಳು ಹೇಳಿದಂತೆ ನಿನಗೆ ಶ್ರೇಯಸ್ಸುಂಟಾಗಲಿ.

★ ★ ★ ★

## ಉದಂಕ

ಬೈದ ಎಂಬ ಈ ಗುರುಗಳಿಗೂ ಮೂವರು ಶಿಷ್ಯರಿದ್ದರು. ತಾನು ಗುರುಕುಲದಲ್ಲಿ ಪಟ್ಟಿರುವ ಕಷ್ಟಕಾರ್ಪಣ್ಯಗಳನ್ನು ಮನಸ್ಸಿಗೆ ತಂದುಕೊಂಡು ತನ್ನ ಶಿಷ್ಯಂದಿರಿಗೆ ಯಾವುದೇ ಕೆಲಸವನ್ನು ಹೇಳುತ್ತಿರಲಿಲ್ಲ. ಅಥವಾ ಸೇವೆಯನ್ನೂ ಮಾಡಿಸಿಕೊಳ್ಳುತ್ತಿರಲಿಲ್ಲ. ಕಠಿಣವಾದ ಯಾವುದೇ ಮಾತುಗಳನ್ನೂ ಕೂಡ ಆಡುತ್ತಿರಲಿಲ್ಲ. ತಾನು ಅನುಭವಿಸಿದ ದುಃಖ ತನ್ನ ಶಿಷ್ಯಂದಿರಿಗೆ ಬರಬಾರದೆಂಬುದು ಇವರ ಉದ್ದೇಶವಾಗಿತ್ತು.

ಒಮ್ಮೆ ಜನಮೇಜಯನ ಯಜ್ಞನಿರ್ವಹಣೆಗಾಗಿ ತಾವು ಆಶ್ರಮವನ್ನು ಬಿಟ್ಟುಹೋಗಬೇಕಾದ ಪ್ರಸಂಗ ಬಂತು. ಇಲ್ಲಿಯ ತನಕ ಶಿಷ್ಯಂದಿರಿಗೆ ಯಾವ

ಕೆಲಸಗಳನ್ನೂ ಹೇಳಿರಲಿಲ್ಲ. ಆದರೆ ಬೇರೆ ಮಾರ್ಗವಿಲ್ಲದೇ ಮನೆಯ ಸಕಲ ಕಾರ್ಯಗಳ ಜವಾಬ್ದಾರಿಯನ್ನು ಉದಂಕ ಎಂಬ ಶಿಷ್ಯನಿಗೆ ವಹಿಸಿದರು.

ವತ್ಸ ಉದಂಕನೇ ! ನಾನು ಮನೆಯಲ್ಲಿ ಇಲ್ಲದಿರುವಾಗ ಏನಾದರೂ ನ್ಯೂನ್ಯತೆಯುಂಟಾದರೆ ಅದನ್ನು ಪರಿಪೂರ್ಣಗೊಳಿಸು.

ಇಷ್ಟನ್ನು ಮಾತ್ರ ಆದೇಶಿಸಿ ಪ್ರವಾಸಕ್ಕೆ ಹೊರಟರು. ಗುರುಗಳಾದ ಬೈದರ ಆಜ್ಞೆಯನ್ನು ಶಿರಸಾವಹಿಸಿ ಉದಂಕನು ಮನೆಯಲ್ಲಿ ಶುಶ್ರೂಷೆಯನ್ನು ಮಾಡುತ್ತಾ ಕಾಲ ಕಳೆದನು.

ಒಮ್ಮೆ ವಿಚಿತ್ರ ಪ್ರಸಂಗ ಬಂದೊದಗಿತು. ಆ ಆಶ್ರಮದಲ್ಲಿರುವ ಸ್ತ್ರೀ ಜನರೆಲ್ಲರೂ ಉದಂಕನ ಬಳಿ ಬಂದು ಹೀಗೆ ನಿವೇದಿಸಿದರು -

ನಿನ್ನ ಗುರುಪತ್ನಿಯು ಋತುಮತಿಯಾಗಿದ್ದಾಳೆ. ನಿನ್ನ ಗುರುಗಳು ಪ್ರವಾಸಕ್ಕೆ ಹೋಗಿದ್ದಾರೆ. ಗುರುಪತ್ನಿಯ ಋತುವು ವ್ಯರ್ಥವಾಗಬಾರದು. ಮನೆಯಲ್ಲಿ ನಡೆಯುವ ನ್ಯೂನತೆಗಳನ್ನು ಪೂರ್ಣಗೊಳಿಸಬೇಕೆಂದು ನಿನಗೆ ಗುರುಗಳ ಆಜ್ಞೆಯಿದೆ. ಆದ್ದರಿಂದ ಗುರುಪತ್ನಿಯ ಋತುಕಾಲವು ವ್ಯರ್ಥವಾಗದಂತೆ ನೀನು ನೋಡಿಕೊಳ್ಳಬೇಕು.

ಆಗ ಸ್ತ್ರೀಯರನ್ನು ಕುರಿತು ಉದಂಕನು ಉತ್ತರಿಸಿದನು.

ಮಾತೆಯರೇ ! ನಿಮ್ಮ ಮಾತಿನಂತೆ ನಾನು ನೀಚಕಾರ್ಯವನ್ನು ಮಾಡಲಾರೆ. ನನಗೆ ಗುರುಗಳು ಧರ್ಮಕಾರ್ಯದಲ್ಲಷ್ಟೇ ಆದೇಶಿಸಿದ್ದಾರೆ. ಅಧರ್ಮ-ಕಾರ್ಯವನ್ನೆಸಗಲು ಅವರು ಆದೇಶಿಸಿಲ್ಲ.

ಕೆಲವು ಸಮಯದ ಅನಂತರ ಗುರುಗಳಾದ ಬೈದರು ಪ್ರವಾಸದಿಂದ ಮನೆಗೆ ಹಿಂದಿರುಗಿದರು. ಮನೆಯಲ್ಲಿ ನಡೆದ ವೃತ್ತಾಂತವನ್ನೆಲ್ಲವನ್ನು ಕೇಳಿ ತಿಳಿದರು. ಶಿಷ್ಯನಾದ ಉದಂಕನ ಇಂದ್ರಿಯನಿಗ್ರಹ ಧರ್ಮಾಧರ್ಮಗಳ ವಿವೇಚನೆ ಎಲ್ಲವನ್ನೂ ಗಮನಿಸಿ ಬಹಳ ಸಂತೋಷಪಟ್ಟರು. ಪರಮಪ್ರೀತರಾಗಿ ಗುರುಗಳಾದ ಬೈದರು ಉದಂಕನಿಗೆ ಆಶೀರ್ವದಿಸಿದರು.

ವತ್ಸ ಉದಂಕ! ನಿನ್ನ ವಿವೇಕದಿಂದ ಕೂಡಿರುವ ಗುರುಶುಶ್ರೂಷೆಯಿಂದ ನನಗೆ ಸಂತೋಷವಾಗಿದೆ. ಇದರಿಂದ ನಮ್ಮಿಬ್ಬರಲ್ಲಿ ಪರಸ್ಪರ ಪ್ರೀತಿಯುಂಟಾಗಿದೆ. ನೀನು ನನ್ನ ಅನುಗ್ರಹಕ್ಕೆ ಪಾತ್ರನಾಗಿರುವಿ. ನಿನ್ನ ಅಭೀಷ್ಟಗಳೆಲ್ಲವೂ ನೆರವೇರಲಿ. ಉತ್ತಮ ತತ್ವಜ್ಞಾನಿಯಾಗು. ನಾನು ಅನುಮತಿಯನ್ನು ನೀಡುತ್ತಿದ್ದೇನೆ ಹೋಗಿ ಬಾ ಎಂದು ಹರಸಿದರು.

ತಮಗೆ ನಾನು ಯಾವ ಗುರುದಕ್ಷಿಣೆಯನ್ನು ನೀಡಲಿ ದಯವಿಟ್ಟು ತಿಳಿಸಿರಿ. ವಿದ್ಯಾಭ್ಯಾಸವನ್ನು ಮುಗಿಸಿದ ಮೇಲೆ ಗುರುದಕ್ಷಿಣೆಯನ್ನು ನೀಡುವುದು ಶಿಷ್ಯನಾದ ನನ್ನ ಕರ್ತವ್ಯ. ಗುರುಗಳಾದ ಬೈದರು ಉದಂಕನ ಪ್ರಾರ್ಥನೆಗೆ ಮುಗುಳ್ನಗೆಯನ್ನು ಬೀರಿ ಇನ್ನೂ ಸ್ವಲ್ಪ ಸಮಯ ಇಲ್ಲಿಯೇ ವಾಸಮಾಡು ಎಂದು ಹೇಳಿದರು. ಕೆಲವು ದಿನಗಳ ಅನಂತರ ಉದಂಕನು ಪುನಃ ಗುರುಗಳನ್ನು ಪ್ರಾರ್ಥಿಸಿದನು. ಗುರುಗಳೇ, ತಮಗೆ ಪ್ರಿಯವಾದ ಯಾವ ವಸ್ತುವನ್ನು ಗುರುದಕ್ಷಿಣೆಯನ್ನಾಗಿ ಕೊಡಲಿ ಎಂದು ಆಜ್ಞೆಮಾಡಿರಿ.

ವತ್ಸ ಉದಂಕ, ಗುರುದಕ್ಷಿಣೆಯನ್ನು ಕೊಡಬೇಕೆಂದು ಬಹಳ ಒತ್ತಾಯ ಮಾಡುತ್ತಿರುವಿ. ಆದರೆ ನಿನ್ನ ಬಳಿ ಗುರುದಕ್ಷಿಣೆಯನ್ನು ತೆಗೆದುಕೊಳ್ಳಲು ನನಗೆ ಮನಸ್ಸಿಲ್ಲ. ಆದ್ದರಿಂದ ನೀನು ನನ್ನ ಪತ್ನಿಯ ಬಳಿ ಹೋಗಿ ಅವಳಿಗೆ ಇಷ್ಟವಾದ ವಸ್ತುವನ್ನು ತೆಗೆದುಕೊಂಡು ಬಾ.

ಗುರುಗಳ ಆಜ್ಞೆಯಂತೆ ಉದಂಕನು ಗುರುಪತ್ನಿಯ ಬಳಿ ಧಾವಿಸಿ ಪ್ರಾರ್ಥಿಸಿದನು - "ಗುರುಗಳು ಅನುಮತಿ ನೀಡಿ ನನ್ನನ್ನು ಗುರುಕುಲದಿಂದ ಕಳುಹಿಸುತ್ತಿದ್ದಾರೆ. ನಿಮಗೆ ಇಷ್ಟವಾದ ವಸ್ತುವನ್ನು ಗುರುದಕ್ಷಿಣೆಯನ್ನಾಗಿ ಕೊಟ್ಟು ತೆರಳಬೇಕೆಂಬುದು ನನ್ನ ಬಯಕೆ. ಪೂಜ್ಯರಾದ ನೀವು ನಾನು ಯಾವ ವಸ್ತುವನ್ನು ಗುರುದಕ್ಷಿಣೆಯನ್ನಾಗಿ ನೀಡಬೇಕೆಂಬುದನ್ನು ಅಪ್ಪಣೆ ಮಾಡಿರಿ.

ಮಗು! ಪೌಷ್ಯರಾಜನ ಬಳಿ ನೀನು ತೆರಳಬೇಕು. ಅವನ ಹೆಂಡತಿಯು ಕಿವಿಗಳಲ್ಲಿ ಕರ್ಣಕುಂಡಲಗಳನ್ನು ಧರಿಸಿದ್ದಾಳೆ. ಆ ಕುಂಡಲಗಳನ್ನು ಯಾಚನೆ ಮಾಡಿ ತೆಗೆದುಕೊಂಡು ಬಾ. ಇವತ್ತಿನಿಂದ ನಾಲ್ಕನೆಯ ದಿವಸದಲ್ಲಿ ಮನೆಯಲ್ಲಿ

ಪುಣ್ಯಕರ್ಮವಿದೆ. ಆ ಕುಂಡಲಗಳನ್ನು ಧರಿಸಿ ನಾನು ಬ್ರಾಹ್ಮಣರಿಗೆ ಭೋಜನವನ್ನು ಬಡಿಸಬೇಕು. ನನ್ನ ಈ ಬಯಕೆಯನ್ನು ಈಡೇರಿಸಿದರೆ ನನಗೆ ಮತ್ತು ನಿನ್ನ ಗುರುಗಳಿಗೆ ಬಹಳ ಸಂತೋಷವಾಗುತ್ತದೆ. ಈ ಗುರುದಕ್ಷಿಣೆಯನ್ನು ನೀಡುವುದರಿಂದ ನಿನಗೆ ಬಹಳ ಶ್ರೇಯಸ್ಸಾಗುತ್ತದೆ.

ಗುರುಪತ್ನಿಯಿಂದ ಅಪ್ಪಣೆ ಪಡೆದ ಉದಂಕನು ಕ್ಷಣಮಾತ್ರದಲ್ಲಿಯೇ ಕರ್ಣಕುಂಡಲಗಳನ್ನು ತರಲು ಹೊರಟೇ ಬಿಟ್ಟನು. ದಾರಿಯಲ್ಲಿ ತೆರಳುವಾಗ ಎತ್ತರದ ವೃಷಭವನ್ನು ಕಂಡನು. ಅದರ ಮೇಲೆ ದೊಡ್ಡಪ್ರಮಾಣದ ಪುರುಷನನ್ನು ನೋಡಿದನು.

ಉದಂಕನನ್ನು ನೋಡಿ ಆ ಪುರುಷನು ಮಾತನಾಡಿದನು. ಎಲೈ ಉದಂಕನೇ, ಈ ವೃಷಭದ ಸಗಣಿಯನ್ನು ತಿನ್ನು. ವಿಚಾರ ಮಾಡಬೇಡ. ನಿನ್ನ ಗುರುಗಳೂ ಕೂಡ ಈ ವೃಷಭದ ಸಗಣಿಯನ್ನು ಭಕ್ಷಿಸಿದ್ದಾರೆ.

ಹಾಗೆಯೇ ಆಗಲಿ ಎಂದು ಉದಂಕನು ಗೋಮಯವನ್ನು ಮತ್ತು ಗೋಮೂತ್ರವನ್ನು ಸ್ವೀಕರಿಸಿ ಪೌಷ್ಯರಾಜನ ಕಡೆ ಹೊರಟನು.

ಪೌಷ್ಯರಾಜನ ಸಮೀಪಕ್ಕೆ ತೆರಳಿ ಜಯಕಾರದಿಂದ ಅವನನ್ನು ಅಭಿನಂದಿಸಿದನು. ಬಂದಿರುವ ಉದಂಕನನ್ನು ಕುರಿತು ಪೌಷ್ಯರಾಜನು ನಮಸ್ಕರಿಸಿ ಸಂಭಾಷಣೆ ಮಾಡಿದನು.

ಪೂಜ್ಯರೇ ! ನನ್ನಿಂದ ಏನಾಗಬೇಕು. ನೀವು ಆಜ್ಞೆ ಮಾಡಿದ್ದನ್ನು ನಾನು ನೀಡುವೆನು.

ರಾಜನೇ, ನಿನ್ನ ಪತ್ನಿ ಧರಿಸಿರುವ ಕರ್ಣಕುಂಡಲಗಳನ್ನು ಅಪೇಕ್ಷಿಸಿ ನಾನು ಬಂದಿರುವೆನು. ಅದನ್ನು ನನ್ನ ಗುರುಪತ್ನಿಗೆ ಗುರುದಕ್ಷಿಣೆಯನ್ನಾಗಿ ನೀಡಬೇಕಾಗಿದೆ.

ಬ್ರಾಹ್ಮಣಶ್ರೇಷ್ಠರೇ ! ತಾವು ನನ್ನ ಪತ್ನಿಯ ಬಳಿ ಹೋಗಿ ಯಾಚನೆ ಮಾಡಿರಿ. ಅವಳು ಖಂಡಿತವಾಗಿಯೂ ಅದನ್ನು ನೀಡುತ್ತಾಳೆ.

ಪೌಷ್ಯರಾಜನು ಹೇಳಿದಂತೆ ಉದಂಕನು ಅಂತಃಪುರವನ್ನು ಪ್ರವೇಶಿಸಿದನು. ಆದರೆ ಪೌಷ್ಯರಾಜನ ಪತ್ನಿಯನ್ನು ಅಲ್ಲಿ ಕಾಣಲೇ ಇಲ್ಲ.

ಪುನಃ ಪೌಷ್ಯರಾಜನ ಬಳಿ ಬಂದು ನೀನು ನನಗೆ ಸುಳ್ಳನ್ನು ಹೇಳುತ್ತಿರುವಿ. ಅಂತಃಪುರದಲ್ಲಿ ನಿನ್ನ ಪತ್ನಿಯೇ ಇಲ್ಲ.

ಬ್ರಾಹ್ಮಣರೇ ! ಖಂಡಿತವಾಗಿಯೂ ನನ್ನ ಪತ್ನಿಯು ಅಲ್ಲಿಯೇ ಇದ್ದಾಳೆ. ಅವಳು ಮಹಾಪತಿವ್ರತೆಯಾದ್ದರಿಂದ ಅಶುಚಿಯಾದವರಿಗೆ ಕಾಣಿಸಿಕೊಳ್ಳುವುದಿಲ್ಲ. ತಾವು ಬಹುಶಃ ಅಶುಚಿಯಾಗಿರುವಿರಿ. ತಾವು ಶುಚಿರ್ಭೂತರಾಗಿ ಹೋದರೆ ಖಂಡಿತವಾಗಿಯೂ ಕಾಣಿಸುತ್ತಾಳೆ.

ರಾಜನ ಮಾತನ್ನು ಕೇಳಿ ತಾನು ಶುಚಿಯಾಗದಿರುವುದಕ್ಕೆ ಕಾರಣವನ್ನು ಉದಂಕನು ತಿಳಿದುಕೊಂಡನು. "ಹೌದು ನಾನು ದಾರಿಯಲ್ಲಿ ಬರಬೇಕಾದರೆ ಗೋಮಯವನ್ನು ಭಕ್ಷಣೆ ಮಾಡಿದೆ. ಆದರೆ ಕೈಕಾಲುಗಳನ್ನು ಮಾತ್ರ ತೊಳೆದುಕೊಳ್ಳಲಿಲ್ಲ".

ಪೂರ್ವಾಭಿಮುಖವಾಗಿ ಕುಳಿತು ಕೈಕಾಲುಗಳನ್ನು ಮತ್ತು ಮುಖವನ್ನು ತೊಳೆದು ಶುದ್ಧವಾದ, ಹೃದಯದ ತನಕ ಮಾತ್ರ ಹೋಗುವ, ನೊರೆಯಿಲ್ಲದ, ಸುರಿಯದಿರುವ, ಶಬ್ದರಹಿತವಾದ ನೀರಿನಿಂದ ಎರಡು ಬಾರಿ ಉಪಸ್ಪರ್ಶನೆ ಮಾಡಿ, ಮೂರು ಬಾರಿ ಆಚಮನ ಮಾಡಿದನು. ಎಲ್ಲಾ ಇಂದ್ರಿಯಗಳನ್ನು ಪರಿಮಾರ್ಜನೆ ಮಾಡಿ ಅಂತಃಪುರವನ್ನು ಪ್ರವೇಶಿಸಿದನು. ಆವಾಗ ಪೌಷ್ಯರಾಜನ ಪತ್ನಿಯನ್ನು ಕಂಡನು.

ಪೌಷ್ಯರಾಜನ ಪತ್ನಿಯು ಉದಂಕನನ್ನು ನೋಡಿ, ಬಹಳ ಸಂತೋಷದಿಂದ ತಾನು ಮೇಲೆದ್ದು ಆಸನ ನೀಡಿ ನಮಸ್ಕರಿಸಿದಳು. ಪೂಜ್ಯರೇ ! ನಿಮಗೆ ಸ್ವಾಗತ. ನನ್ನಿಂದ ಏನಾಗಬೇಕು. ತಮ್ಮ ಆಜ್ಞೆಯಂತೆ ಏನನ್ನು ಬೇಕಾದರೂ ಮಾಡಲು ಸಿದ್ಧಳಿರುವೆ.

ಮಹಾರಾಣಿ ! ನೀನು ಕಿವಿಗಳಲ್ಲಿ ಧರಿಸಿರುವ ಕರ್ಣಕುಂಡಲಗಳನ್ನು ಗುರುದಕ್ಷಿಣೆಯ ರೂಪವಾಗಿ ಬೇಡುತ್ತಿದ್ದೇನೆ. ಅವುಗಳನ್ನು ಕೊಡುವುದರಿಂದ ನನಗೆ ಬಹಳ ಸಂತೋಷವಾಗುತ್ತದೆ.

ಮಹಾರಾಣಿಯು ಉದಂಕನ ಗುರುಭಕ್ತಿಯನ್ನು ಕಂಡು ಬಹಳ ಸಂತೋಷಪಟ್ಟಳು. ಸತ್ಪಾತ್ರನು ದೊರೆತಾಗ ಅವಕಾಶವನ್ನು ಕಳೆದುಕೊಳ್ಳಬಾರದು. ವಿಚಾರ ಮಾಡದೇ ತನ್ನ ಕಿವಿಗಳಲ್ಲಿರುವ ಅತ್ಯಮೂಲ್ಯವಾದ ಕರ್ಣಕುಂಡಲಗಳನ್ನು ಕಳಚಿ ಉದಂಕನಿಗೆ ನೀಡಿದಳು.

ಬ್ರಾಹ್ಮಣಶ್ರೇಷ್ಠರೇ ! ನಾಗರಾಜನಾದ ತಕ್ಷಕನು ಈ ಕರ್ಣಕುಂಡಲಗಳನ್ನು ಅಪಹರಿಸಲು ಸತತವಾಗಿ ಪ್ರಯತ್ನಿಸುತ್ತಿದ್ದಾನೆ. ಬಹಳ ಎಚ್ಚರಿಕೆಯಿಂದ ತಾವು ಇದನ್ನು ತೆಗೆದುಕೊಂಡು ನಿಮ್ಮ ಗುರುಪತ್ನಿಗೆ ಸಮರ್ಪಿಸಿರಿ.

ಮಹಾರಾಣಿ ! ಇದರ ವಿಷಯದಲ್ಲಿ ಚಿಂತಿಸಬೇಡ. ನಾಗರಾಜನಾದ ತಕ್ಷಕನು ನನ್ನನ್ನು ಎದುರಿಸಲು ಅಸಮರ್ಥನಾಗಿದ್ದಾನೆ. ನಾನು ಜೋಪಾನವಾಗಿಯೇ ತೆಗೆದುಕೊಂಡು ಹೋಗುತ್ತೇನೆ. ನಿನಗೆ ಮಂಗಳವಾಗಲಿ.

ಪೌಷ್ಯರಾಣಿಗೆ ಆಶ್ವಾಸನೆಯನ್ನು ನೀಡಿ ಉದಂಕನು ರಾಜನ ಬಳಿ ನಡೆದನು.

ರಾಜನೇ ! ನಿನ್ನ ಪತ್ನಿಯು ಸಂತೋಷದಿಂದ ಕರ್ಣಕುಂಡಲಗಳನ್ನು ನೀಡಿದ್ದಾಳೆ. ನಾನು ಬಹಳ ಸುಪ್ರೀತನಾಗಿದ್ದೇನೆ. ನಾನು ಪ್ರಯಾಣವನ್ನು ಮುಂದೊರೆಸುತ್ತೇನೆ.

ಬ್ರಾಹ್ಮಣರೇ ! ತಮ್ಮಂತಹ ಸತ್ಪಾತ್ರರು ನಮ್ಮಲ್ಲಿಗೆ ಬಂದಿದ್ದು ನಮ್ಮ ಸೌಭಾಗ್ಯ. ಇಂತಹ ಶ್ರೇಷ್ಠರಾದ ಅತಿಥಿಗಳು ಬಂದಾಗಲೇ ಪಿತೃಶ್ರಾದ್ಧಾದಿ ಕ್ರಿಯೆಗಳನ್ನು ಮಾಡಬೇಕೆಂದು ಧರ್ಮಗ್ರಂಥಗಳು ಘೋಷಿಸುತ್ತವೆ. ತಾವು ಸ್ವಲ್ಪ ಸಮಯವನ್ನು ಮಾಡಿಕೊಂಡರೆ ಕೂಡಲೇ ಶ್ರಾದ್ಧವನ್ನು ನೆರವೇರಿಸುತ್ತೇನೆ. ನನ್ನ ಅಲ್ಪವಾದ ಸತ್ಕಾರವನ್ನು ಸ್ವೀಕರಿಸಿ ತಾವು ಮುಂದೆ ಪ್ರಯಾಣವನ್ನು ಬೆಳೆಸಬಹುದು. ಹಾಗೆಯೇ ಆಗಲಿ.

ಕೃತಕ್ಷಣ ಏವಾಸ್ಮಿ ಶೀಘ್ರಮಿಚ್ಛಾಮಿ ।
ಯಥೋಪಪನ್ನಮನ್ನಮುಪಹೃತಂ ಭವತೇತಿ ॥

ಸ್ವಲ್ಪಸಮಯವನ್ನು ಇಟ್ಟುಕೊಂಡೇ ಬಂದಿದ್ದೇನೆ. ಸಿದ್ಧವಾಗಿರುವ ಅನ್ನವನ್ನು ಆದಷ್ಟು ಜಾಗ್ರತೆಯಾಗಿ ನೀನು ನನಗೆ ಕೊಡಬೇಕೆಂದು ನಾನು ಬಯಸುತ್ತೇನೆ.

ಸಿದ್ಧವಾದ ಅನ್ನದಿಂದಲೇ ಪೌಷ್ಯರಾಜನು ಶ್ರಾದ್ಧವನ್ನು ಮಾಡಿ ಭೋಜನಕ್ಕಾಗಿ ಬಡಿಸಿದನು. ಆಶ್ಚರ್ಯವೆಂದರೆ ಬಡಿಸಿದ ಅನ್ನವು ತಣ್ಣಗಾಗಿತ್ತು. ಕೂದಲಿನಿಂದ ಕೂಡಿತ್ತು. ಅಶುದ್ಧವಾದ ಈ ಅನ್ನವನ್ನು ಕಂಡು ಕುಪಿತನಾದ ಉದಂಕನು "ನೀನು ಕುರುಡನಾಗು" ಎಂದು ಶಪಿಸಿಯೇ ಬಿಟ್ಟನು.

ಉದಂಕನ ಶಾಪವನ್ನು ಸಹಿಸಲಾಗದ ರಾಜನು ನನ್ನ ಅರಮನೆಯಲ್ಲಿ ಇಂತಹ ದೋಷವಿರಲು ಸಾಧ್ಯವೇ ಇಲ್ಲ. ಪರಿಶುದ್ಧವಾದ ಅನ್ನವನ್ನು ಬಡಿಸಿದ್ದರೂ ವಿನಾಕಾರಣ ಶಾಪಕೊಟ್ಟಿರುವುದರಿಂದ "ನಿನಗೆ ಮುಂದೆ ಮಕ್ಕಳಾಗದಿರಲಿ" ಎಂದು ಪ್ರತಿಯಾಗಿ ಬ್ರಾಹ್ಮಣನಿಗೆ ಶಪಿಸಿದನು.

ಉದಂಕನು ರಾಜನನ್ನು ಕರೆದು ಅನ್ನವು ಅಶುಚಿಯಾಗಿರುವುದನ್ನು ತೋರಿಸಿದನು. ಅರಮನೆಯಲ್ಲಿರುವ ಸ್ತ್ರೀಯರು ಕೂದಲುಗಳನ್ನು ಕೆದರಿಕೊಂಡು ಅನ್ನವನ್ನು ಸಿದ್ಧಪಡಿಸಿದ್ದರು. ಅದನ್ನು ತಿಳಿದ ರಾಜನು ಉದಂಕನನ್ನು ಸಮಾಧಾನ ಪಡಿಸಲು ಬಹಳ ಪ್ರಯತ್ನಿಸಿದನು. ದಯವಿಟ್ಟು ನನ್ನನ್ನು ಕ್ಷಮಿಸಿರಿ. ನಾನು ಕುರುಡನಾಗದಂತೆ ಶಾಪವನ್ನು ಮರಳಿ ಪಡೆಯಿರಿ.

ರಾಜನೇ ! ನನ್ನ ಮಾತು ಸುಳ್ಳಾಗಲು ಸಾಧ್ಯವಿಲ್ಲ. ಸ್ವಲ್ಪ ಸಮಯ ನೀನು ಕುರುಡನಾಗಿದ್ದರೂ ಪುನಃ ಶೀಘ್ರವಾಗಿ ದೃಷ್ಟಿಯನ್ನು ಹೊಂದುವಿ. ನೀನೂ ಕೂಡ ನನಗೆ ನೀಡಿದ ಶಾಪವನ್ನು ಹಿಂದೆ ತೆಗೆದುಕೋ.

ಬ್ರಾಹ್ಮಣರೇ ! ಶಾಪವನ್ನು ಹಿಂದೆ ತೆಗೆದುಕೊಳ್ಳಲು ನಾನು ಸಮರ್ಥನಲ್ಲ. ನಿಮ್ಮಂತೆ ಶುದ್ಧಹೃದಯನು ನಾನಲ್ಲ. ತಾವು ಬ್ರಾಹ್ಮಣರು, ನಾನಾದರೋ ಕ್ಷತ್ರಿಯನು. ನಮ್ಮಿರ್ವರ ಮನಸ್ಸಿನಲ್ಲಿ ಬಹಳಷ್ಟು ವ್ಯತ್ಯಾಸವಿದೆ.

ನವನೀತಂ ಹೃದಯಂ ಬ್ರಾಹ್ಮಣಸ್ಯ
ವಾಚಿ ಕ್ಷುರೋ ನಿಹಿತಸ್ತೀಕ್ಷ್ಣಧಾರಃ ।
ವಿಪರೀತಮೇತದುಭಯಂ ಕ್ಷತ್ರಿಯಸ್ಯ
ವಾಙ್‌ನವನೀತಂ ಹೃದಯಂ ತೀಕ್ಷ್ಣಧಾರಮ್ ॥

ಬ್ರಾಹ್ಮಣನ ಮನಸ್ಸು ನವನೀತದಂತಿರುವುದು. ಅವನ ಮಾತಿನಲ್ಲಿ ಹರಿತವಾದ ಅಲುಗುಳ್ಳ ಕತ್ತಿಯು ಇಡಲ್ಪಟ್ಟಿದೆ. ಕ್ಷತ್ರಿಯನಿಗೆ ಎರಡೂ ವಿಪರೀತವಾದುದು. ಮಾತು ಬೆಣ್ಣೆಯಂತಿರುವುದು, ಹೃದಯವು ಮಾತ್ರ ಕತ್ತಿಯಂತೆ ತೀಕ್ಷ್ಣವಾದುದು.

ರಾಜನೇ ! ನಿನ್ನ ಶಾಪಕ್ಕೆ ನಾನು ಹೆದರುವುದಿಲ್ಲ. ದುಷ್ಟವಾದ ಅನ್ನವನ್ನು ಗಮನಿಸದೇ ನೀನು ನನಗೆ ಶಪಿಸಿರುವಿ. ನಿನ್ನ ಶಾಪದ ಕಾರಣವು ಸುಳ್ಳಾಗಿರುವುದರಿಂದ ನನಗೆ ಅದು ತಟ್ಟುವುದಿಲ್ಲ. ನಾನು ಹೋಗಿ ಬರುತ್ತೇನೆ.

ಅವಸರದಲ್ಲಿ ಅರಮನೆಯಿಂದ ಉದಂಕನು ಹೊರಟನು. ದಾರಿಯಲ್ಲಿ ಹೋಗುತ್ತಿರುವಾಗ ಉದಂಕನನ್ನು ಒಬ್ಬ ನಗ್ನನಾದ ಸನ್ಯಾಸಿಯು ಹಿಂಬಾಲಿಸುತ್ತಿದ್ದನು. ಆಶ್ಚರ್ಯವೆಂದರೆ ಒಮ್ಮೊಮ್ಮೆ ಕಣ್ಣಿಗೆ ಕಾಣಿಸುತ್ತಿದ್ದನು. ಒಮ್ಮೊಮ್ಮೆ ಅದೃಶ್ಯನಾಗುತ್ತಿದ್ದನು. ಮಾರ್ಗಮಧ್ಯದಲ್ಲಿ ಕರ್ಮಾನುಷ್ಠಾನಕ್ಕಾಗಿ ಕರ್ಣಕುಂಡಲಗಳನ್ನು ನದಿಯ ದಡದಲ್ಲಿಟ್ಟು ನೀರಿಗಾಗಿ ಉದಂಕನು ಹೊರಟನು. ನಗ್ನನಾದ ಸನ್ಯಾಸಿಯು ತನಗೆ ಇದೇ ಸರಿಯಾದ ಸಮಯವೆಂದು ಭಾವಿಸಿ ಕರ್ಣಕುಂಡಲಗಳನ್ನು ಅಪಹರಿಸಿಕೊಂಡು ಓಡಿಹೋದನು.

ಸನ್ಯಾಸಿಯು ತನ್ನ ರೂಪವನ್ನು ತ್ಯಜಿಸಿ ತಕ್ಷಕನಾಗಿ ಇದ್ದಕ್ಕಿದ್ದಂತೆ ಒಂದು ಬಿಲದ ಮೂಲಕ ಭೂಮಿಯ ಒಳಗಡೆ ಪ್ರವೇಶ ಮಾಡಿದನು. ಪಾತಾಳಲೋಕದಲ್ಲಿರುವ ತನ್ನ ಮನೆಯಾದ ನಾಗಲೋಕಕ್ಕೆ ಕ್ಷಣಮಾತ್ರದಲ್ಲಿ ಹೋಗಿ ಸೇರಿಕೊಂಡನು.

ಉದಂಕನು ತನ್ನ ಕೈಯಲ್ಲಿರುವ ದಂಡದಿಂದಲೇ ಬಿಲವನ್ನು ಅಗೆಯಲು ಪ್ರಾರಂಭಿಸಿದನು. ಉದಂಕನ ಕಷ್ಟವನ್ನು ದೇವೇಂದ್ರನು ಕಾರುಣ್ಯದಿಂದ ಗಮನಿಸಿದನು. ಉದಂಕನಿಗೆ ಸಹಾಯ ಮಾಡಬೇಕೆಂದು ಭಾವಿಸಿ ತನ್ನ ವಜ್ರಾಯುಧವನ್ನು ಉದಂಕನ ದಂಡದಲ್ಲಿ ಕಳುಹಿಸಿದನು. ಕ್ಷಣಮಾತ್ರದಲ್ಲಿ ಉದಂಕನು ಆ ಬಿಲವನ್ನು ಪಾತಾಳಲೋಕದ ತನಕ ಸೀಳಿ ನಾಗಲೋಕವನ್ನು ತಲುಪಿದನು. ಅಲ್ಲಿ ಅನೇಕ ಪ್ರಾಸಾದಗಳನ್ನೂ, ಅರಮನೆಗಳನ್ನೂ ನೋಡಿ ಆಶ್ಚರ್ಯಚಕಿತನಾದನು. ಆದರೆ ಎಲ್ಲೆಡೆಯು ಸರ್ಪಗಳೇ ತುಂಬಿದ್ದ ಕಾರಣ ಎಲ್ಲಾ ಬಗೆಯ ಸರ್ಪಗಳನ್ನು ಉದಂಕನು ಸ್ತುತಿಸಲು ಪ್ರಾರಂಭಿಸಿದನು.

ಯಾವಂತೋ ನಾಗರಾಜಾನಃ ಸರ್ಪಾಸ್ತ್ವಮಿತವಿಕ್ರಮಾಃ ।
ವರ್ಷಂತ ಇವ ಜೀಮೂತಾಃ ಸವಿದ್ಯುತ್ಪವನೇರಿತಾಃ ॥

ಮಿಂಚು ಮತ್ತು ಗಾಳಿಯಿಂದ ಪ್ರೇರಿತವಾದ ಮಳೆಯನ್ನು ಸುರಿಸುವ ಮೋಡದಂತಿರುವ ಅಮಿತವಿಕ್ರಮವನ್ನು ಹೊಂದಿದ ಎಷ್ಟು ಸರ್ಪಗಳು ಮತ್ತು ಶ್ರೇಷ್ಠವಾದ ನಾಗಗಳು ಇವೆಯೋ ಅವುಗಳಿಗೆಲ್ಲಾ ನಮಸ್ಕರಿಸುತ್ತೇನೆ.

ಯಸ್ಯ ವಾಸಃ ಕುರುಕ್ಷೇತ್ರೇ ಖಾಂಡವೇ ಚಾಭವತ್ ಸದಾ ।
ತಂ ಕಾದ್ರವೇಯಮಸ್ತೌಷಂ ಕುಂಡಲಾರ್ಥಾಯ ತಕ್ಷಕಮ್ ॥

ಯಾವ ತಕ್ಷಕನು ಕುರುಕ್ಷೇತ್ರದಲ್ಲಿ ಖಾಂಡವವನದಲ್ಲಿ ವಾಸಮಾಡುತ್ತಾನೆಯೋ, ಅಂತಹ ಕದ್ರುದೇವಿಯ ಮಗನಾದ ತಕ್ಷಕನನ್ನು ಕುಂಡಲಗಳನ್ನು ಪಡೆಯುವ ಸಲುವಾಗಿ ನಾನು ಸ್ತೋತ್ರ ಮಾಡುತ್ತಿದ್ದೇನೆ.

ಹೀಗೆ ಅನೇಕ ಬಗೆಯಲ್ಲಿ ಸ್ತೋತ್ರ ಮಾಡಿದರೂ ಕೂಡ ಉದಂಕನಿಗೆ ಕಳೆದುಹೋದ ಕರ್ಣಕುಂಡಲಗಳು ದೊರೆಯಲೇ ಇಲ್ಲ. ಮುಂದೇನು ಮಾಡಬೇಕೆಂದು ತಿಳಿಯದೇ ದಿಗ್ಭ್ರಾಂತನಾಗಿಬಿಟ್ಟಿದ್ದ. ಆ ಸಂದರ್ಭದಲ್ಲಿ ರಾಟೆಯಲ್ಲಿ ಬಟ್ಟೆಯನ್ನು ನೇಯುತ್ತಿರುವ ಇಬ್ಬರು ಸ್ತ್ರೀಯರನ್ನು ಕಂಡನು. ಬಿಳಿ ಮತ್ತು ಕರಿ ನೂಲುಗಳನ್ನು ಚಕ್ರಗಳನ್ನು ಆರು ಕುಮಾರರಿಂದ ತಿರುಗಿಸಲ್ಪಟ್ಟ ಹನ್ನೆರಡು ಅರಗಳನ್ನು, ಅಶ್ವಾರೂಢನಾದ ಪುರುಷನೊಬ್ಬನನ್ನು ನೋಡಿದನು.

ಉದಂಕನು ಅವರೆಲ್ಲರನ್ನು ಪುನಃ ಮಂತ್ರಗಳಿಂದ ಸ್ತುತಿಸಿದನು. ಆರುಜನ ಮಕ್ಕಳು, ಹನ್ನೆರಡು ಗೂಟಗಳುಳ್ಳ ಒಂದು ಚಕ್ರವನ್ನು ತಿರುಗಿಸುತ್ತಿದ್ದಾರೆ. ಚಕ್ರವು ಸಂವತ್ಸರದಂತಿದೆ. ಅದರ ಮಧ್ಯದಲ್ಲಿ ಮೂನ್ನರರವತ್ತು ದಿವಸಗಳೆಂಬ ಗೂಟಗಳಿವೆ. ಆರು ಋತುಗಳ ಅಭಿಮಾನಿದೇವತೆಗಳೇ ಅದನ್ನು ತಿರುಗಿಸುತ್ತಿದ್ದಾರೆ. ಒಂದು ಸಂವತ್ಸರದಲ್ಲಿ ಹನ್ನೆರಡು ಹುಣ್ಣಿಮೆಗಳು, ಹನ್ನೆರಡು ಅಮಾವಾಸ್ಯೆಗಳು ಸೇರಿ ಇಪ್ಪತ್ತಾಲ್ಕು ಪರ್ವಗಳಾಗುತ್ತವೆ.

ಇಬ್ಬರು ಸ್ತ್ರೀಯರು ಕಪ್ಪು ಮತ್ತು ಬಿಳುಪಾದ ದಾರಗಳಿಂದ ಪ್ರಪಂಚದಲ್ಲಿರುವ ಎಲ್ಲಾ ಪ್ರಾಣಿಗಳನ್ನು ಮತ್ತು ಎಲ್ಲಾ ಲೋಕಗಳನ್ನು ಪರಿಣಾಮಗೊಳಿಸುತ್ತಿದ್ದಾರೆ.

ವೃತ್ರಾಸುರನನ್ನು ಸಂಹಾರ ಮಾಡಿರುವ ಭೂಮಿಯನ್ನು ರಕ್ಷಣೆ ಮಾಡುವ ವಜ್ರಾಯುಧವನ್ನು ಧರಿಸಿದ ದೇವೇಂದ್ರನು ಕೃಷ್ಣವಸ್ತ್ರಗಳೆರಡನ್ನು ಧಾರಣೆ ಮಾಡಿ ಸತ್ಯ ಮತ್ತು ಅನೃತವನ್ನು ಲೋಕದಲ್ಲಿ ವಿವೇಚನೆ ಮಾಡುತ್ತಾನೆ.

ಇಂತಹ ಪುರಂದರನಿಗೆ ನನ್ನ ನಮಸ್ಕಾರಗಳು. ಹೀಗೆ ಉದಂಕನು ಸ್ತೋತ್ರ ಮಾಡಿದನು.

ಎಲೈ ಉದಂಕನೇ ! ನಿನ್ನ ಸ್ತೋತ್ರಗಳಿಗೆ ನಾನು ಮೆಚ್ಚಿರುವೆನು. ನನ್ನಿಂದ ನಿನಗೆ ಏನಾಗಬೇಕು. ನೀನು ಕೇಳಿದ್ದನ್ನು ಕೊಡುವೆನು ಎಂಬುದಾಗಿ ಅಶ್ವಾರೋಹಿಯಾದ ಪುರುಷನು ಹೇಳಿದನು.

ಎಲೈ ಪುರುಷನೇ ! ಈ ನಾಗಗಳೆಲ್ಲವೂ ನನ್ನ ವಶವಾಗಬೇಕು.

ಹಾಗೆಯೇ ಆಗಲಿ. ಆದರೆ ನೀನು ನಾನು ಕುಳಿತಿರುವ ಅಶ್ವದ ಗುದದ್ವಾರವನ್ನು ಜೋರಾಗಿ ಊದಬೇಕು.

ಉದಂಕನು ಅಶ್ವದ ಗುದದ್ವಾರದಲ್ಲಿ ಜೋರಾಗಿ ಊದಿದನು. ಆವಾಗ ಅಶ್ವದ ಎಲ್ಲ ನವದ್ವಾರಗಳಿಂದ ಹೊಗೆಯಿಂದ ಕೂಡಿರುವ ಅಗ್ನಿಯ ಜ್ವಾಲೆಗಳು ಹೊರಹೊಮ್ಮಿದವು. ಅಗ್ನಿಯ ಜ್ವಾಲೆಯಿಂದ ನಾಗಲೋಕವೆಲ್ಲವೂ ದಹಿಸಲಾರಂಭಿಸಿತು. ಮತ್ತು ಹೊಗೆಯಿಂದ ತುಂಬಿತು. ಈ ಸನ್ನಿವೇಶದಿಂದ ದಿಗ್ಭ್ರಾಂತನಾದ ತಕ್ಷಕನು ಕುಂಡಲಗಳನ್ನು ತೆಗೆದುಕೊಂಡು ತನ್ನ ಮನೆಯಿಂದ ಓಡೋಡಿ ಬಂದನು. ಉದಂಕನಿಗೆ ನಮ್ಕಸರಿಸಿ ಇದೇ ನಿನ್ನ ಕರ್ಣಕುಂಡಲಗಳು. ಇದನ್ನು ಸ್ವೀಕರಿಸು ಎಂದು ಕರ್ಣಕುಂಡಲಗಳನ್ನು ಒಪ್ಪಿಸಿ ಹೊರಟುಹೋದನು.

ಕರ್ಣಕುಂಡಲಗಳನ್ನು ಸ್ವೀಕರಿಸಿದ ಉದಂಕನ ಆನಂದಕ್ಕೆ ಪಾರವೇ ಇಲ್ಲ. ಆದರೆ ಮರುಕ್ಷಣದಲ್ಲಿಯೇ ಅವನಿಗೆ ದೊಡ್ಡ ಚಿಂತೆಯೇ ಒದಗಿಬಂತು. ನನ್ನ ಗುರುಪತ್ನಿಯು ನಾಲ್ಕು ದಿವಸಗಳಲ್ಲಿ ಈ ಕರ್ಣಕುಂಡಲಗಳನ್ನು ತೆಗೆದುಕೊಂಡು ಬರಲು ತಿಳಿಸಿದ್ದಳು. ಇಂದಿಗೆ ಮೂರು ದಿನಗಳಾಗಿವೆ. ಬಹಳಷ್ಟು ದೂರ ಬಂದಿರುವ ನನಗೆ ಇಂದೇ ಆಶ್ರಮವನ್ನು ತಲುಪಲು ಸಾಧ್ಯವೇ ಇಲ್ಲ. ನಾನು ಪಟ್ಟಿರುವ

ಶ್ರಮವೆಲ್ಲವು ನಿರರ್ಥಕವಾಯಿತು. ನನ್ನ ಮಾತೆಯ ಶಾಪಕ್ಕೆ ಗುರಿಯಾಗಬೇಕಾಗುತ್ತದೆ. ಚಿಂತಿಸುತ್ತಿರುವ ಉದಂಕನ ಸ್ಥಿತಿಯನ್ನು ಗಮನಿಸಿ ಅಶ್ವಾರೋಹಿಯಾದ ಪುರುಷನು ಉಪಕರಿಸಲು ಮುಂದಾದನು. ಉದಂಕನೇ ಚಿಂತಿಸಬೇಡ. ಈ ಕುದುರೆಯನ್ನು ಏರು. ಮನೋವೇಗದಲ್ಲಿ ನಿನ್ನನ್ನು ಗುರುಗಳ ಮನೆಗೆ ಇದು ತಲುಪಿಸುತ್ತದೆ.

ಆದರಂತೆ ಉದಂಕನು ಕುದುರೆಯನ್ನು ಏರಿ ಮನೋವೇಗದಲ್ಲಿ ಪ್ರಯಾಣ ಮಾಡಿ ತನ್ನ ಆಶ್ರಮವನ್ನು ಸೇರಿದನು. ತನ್ನ ಗುರುಪತ್ನಿಯ ಎದುರು ಬಂದುನಿಂತನು. ಗುರುಪತ್ನಿಯು ಸ್ನಾನವನ್ನು ಮಾಡಿ ತಲೆಯನ್ನು ಬಾಚಿಕೊಳ್ಳುತ್ತಿದ್ದಳು. ಉದಂಕನು ಇನ್ನೂ ಕೂಡ ಬರುತ್ತಿಲ್ಲ. ಸಮಯ ಮೀರುತ್ತಿದೆ. ಸಹನೆಯೂ ಕೂಡ ಮಿತಿಮೀರಿದೆ. ಉದಂಕನಿಗೆ ಶಾಪಕೊಡಲೇ ಬೇಕು ಎಂದು ನಿಶ್ಚಯಿಸಿದ್ದಳು. ಆದೇ ಕ್ಷಣದಲ್ಲಿ ಉದಂಕನು ಪ್ರವೇಶಿಸಿ ತನ್ನ ಗುರುಗಳಿಗೆ ನಮಿಸಿ ಗುರುಪತ್ನಿಗೆ ಕರ್ಣಕುಂಡಲಗಳನ್ನು ಸಮರ್ಪಣೆ ಮಾಡಿದನು.

ಎಲೈ ಉದಂಕನೇ ! ನಿನಗೆ ಸುಸ್ವಾಗತ. ನೀನು ನಿರಪರಾಧಿಯಾಗಿರುವಿ ಸ್ವಲ್ಪ ತಡವಾಗಿದ್ದರೂ ನಿನಗೆ ಶಾಪಕೊಟ್ಟುಬಿಡುತ್ತಿದ್ದೆ. ನಿನಗೆ ಶ್ರೇಯಸ್ಸು ಸನ್ನಿಹಿತವಾಗಿದೆ. ನೀನು ಎಲ್ಲಾ ಸಿದ್ಧಿಗಳನ್ನು ಪಡೆಯುತ್ತಿ. ನಿನಗೆ ಶುಭವಾಗಲಿ ಎಂದು ಗುರುಪತ್ನಿಯು ಸಂಪೂರ್ಣವಾಗಿ ಆಶೀರ್ವದಿಸಿದಳು.

ಉದಂಕನು ತನ್ನ ಗುರುಗಳಿಗೆ ನಮಸ್ಕರಿಸಿದನು.

ಮಗು ಉದಂಕ ! ನಿನಗೆ ಸ್ವಾಗತ. ಏಕೆ ತಡಮಾಡಿದೆ?

ಪೂಜ್ಯರೇ ! ನಾನು ಶೀಘ್ರವಾಗಿ ಕರ್ಣಕುಂಡಲಗಳನ್ನು ತರುವಾಗ ತಕ್ಷಕನು ವಿಘ್ನವನ್ನುಂಟುಮಾಡಿದನು. ಅದನ್ನು ತರಲು ನಾನು ನಾಗಲೋಕಕ್ಕೆ ಹೋಗಬೇಕಾಯಿತು. ಅಲ್ಲಿ ವಿಚಿತ್ರ ದೃಶ್ಯಗಳನ್ನು ನೋಡಿದೆನು. ನನಗೆ ಅದು ಏನೆಂದು ಅರ್ಥವಾಗಲೇ ಇಲ್ಲ.

ರಾಟೆಯಲ್ಲಿ ನೂಲುಗಳನ್ನು ಸೇರಿಸಿ ಬಟ್ಟೆಗಳನ್ನು ನೇಯುತ್ತಿರುವ ಇಬ್ಬರು ಸ್ತ್ರೀಯರನ್ನು ನೋಡಿದೆ. ರಾಟೆಯಲ್ಲಿ ಕಪ್ಪು-ಬಿಳುಪಾದ ದಾರಗಳಿದ್ದವು. ಇವು ಏನು?

ಹನ್ನೆರಡು ಅರಗಳುಳ್ಳ ಸುತ್ತುತ್ತಿರುವ ಒಂದು ಚಕ್ರವನ್ನು ನೋಡಿದೆನು. ಆರು ಮಂದಿ ಹುಡುಗರು ಅದನ್ನು ತಿರುಗಿಸುತ್ತಿದ್ದರು ಅದು ಏನು ?

ಒಬ್ಬ ಪುರುಷನು ಮಹಾಅಶ್ವದ ಮೇಲೆ ಕುಳಿತಿದ್ದನು. ಆ ಪುರುಷನು ಯಾರು? ಆ ಅಶ್ವವು ಯಾವುದು ?

ನಾನು ಕರ್ಣಕುಂಡಲಗಳನ್ನು ತರಲು ಇಲ್ಲಿಂದ ತೆರಳುವಾಗ ಒಬ್ಬ ಪುರುಷನು ವೃಷಭದ ಮೇಲೆ ಕುಳಿತಿದ್ದನು. ಅವನನ್ನು ಉಪಚರಿಸುತ್ತಾ ಈ ವೃಷಭದ ಸಗಣಿಯನ್ನು ತಿನ್ನು, ಗೋಮೂತ್ರವನ್ನು ಪಾನಮಾಡು. ನಿನ್ನ ಗುರುಗಳೂ ಕೂಡ ಹಿಂದೆ ಇದನ್ನು ಸ್ವೀಕರಿಸಿದ್ದರು ಎಂದು ಹೇಳಿದನು. ಅದರಂತೆ ನಾನು ನಡೆದುಕೊಂಡೆ. ಇದೆಲ್ಲಾ ಏಕೆ ನಡೆಯಿತು ?

ಗುರುಗಳೇ! ಒಗಟಿನಂತಿರುವ ಈ ಎಲ್ಲಾ ಸನ್ನಿವೇಶಗಳನ್ನು ನನಗೆ ಬಿಡಿಸಿ ಹೇಳಿರಿ.

ವತ್ಸಾ ಉದಂಕ ! ಎಲ್ಲವನ್ನು ವಿಷದವಾಗಿ ಹೇಳುತ್ತೇನೆ ಕೇಳು. ಹಗಲು ಮತ್ತು ರಾತ್ರಿಗೆ ಅಭಿಮಾನಿ ದೇವತೆಗಳಾದ ಧಾತೃ ಮತ್ತು ವಿಧಾತೃ ಎಂಬ ದೇವತೆಗಳೇ ಆ ಇಬ್ಬರು ಸ್ತ್ರೀಯರು.

ಕಪ್ಪು ಮತ್ತು ಬಿಳಿಯ ದಾರಗಳು ಜಗತ್ತಿನ ರಾತ್ರಿ ಮತ್ತು ಹಗಲುಗಳು. ಆರು ಋತುಗಳೇ ಆರುಮಂದಿ ಹುಡುಗರು. ಹನ್ನೆರಡು ಅರಗಳು ದ್ವಾದಶಮಾಸಗಳು. ತಿರುಗುತ್ತಿರುವ ಚಕ್ರವೇ ಮೂನ್ನರರವತ್ತು ದಿವಸದ ಸಂವತ್ಸರವು. ಪುರುಷನು ಪರ್ಜನ್ಯನು. ಅಗ್ನಿಯೇ ಕುದುರೆ. ಇಲ್ಲಿಂದ ನೀನು ತೆರಳುವಾಗ ನೋಡಿದ ವೃಷಭವು ದೇವೇಂದ್ರನ ಐರಾವತ. ಅದರ ಮೇಲೆ ಕುಳಿತಿರುವ ಪುರುಷನು ಸಾಕ್ಷಾತ್ ಪುರಂದರನು. ನೀನು ತಿಂದ ಗೋಮಯವು ಅಮೃತ. ಆ ಕಾರಣದಿಂದಲೇ ನೀನು ನಾಗಲೋಕಕ್ಕೆ ತೆರಳಿ ವಿಷದ ವಾತಾವರಣದಲ್ಲಿ ನಿಂತುಕೊಂಡರೂ ಮೃತನಾಗಲಿಲ್ಲ.

ದೇವೇಂದ್ರನು ಬೇರೆ ಯಾರೂ ಅಲ್ಲ. ನನ್ನ ನೆಚ್ಚಿನ ಗೆಳೆಯ. ಅವನು ನಿನ್ನ ಮೇಲೆ ತೋರಿಸಿದ ಪ್ರೀತಿಪೂರ್ವಕವಾದ ಅನುಗ್ರಹದಿಂದಲೇ ನಿನಗೆ ಕರ್ಣಕುಂಡಲಗಳನ್ನು ತೆಗೆದುಕೊಂಡು ಬರಲು ಸಾಧ್ಯವಾಯಿತು.

ಮಗು ಉದಂಕ! ನನ್ನನ್ನು ನೀನು ಬಹಳವಾಗಿ ಸಂತೋಷಪಡಿಸಿರುವೆ. ನನಗೆ ಅತ್ಯಂತ ಪ್ರೀತಿಪಾತ್ರನಾಗಿರುವಿ. ಸಂಪೂರ್ಣ ಮನಸ್ಸಿನಿಂದ ನಿನಗೆ ನಾನು ಆಶೀರ್ವದಿಸುತ್ತಿರುವೆ. ನಿನಗೆ ಸಕಲವಿಧವಾದ ಶ್ರೇಯಸ್ಸುಗಳು ಉಂಟಾಗಲಿ ಹೋಗಿ ಬಾ.

ಗುರುಕುಲವಾಸವನ್ನು ಮುಗಿಸಿದ ಉದಂಕನು ಗುರುಸೇವೆಯಿಂದ ಅವರ ಪ್ರೀತಿಯನ್ನು ಅಪಾರವಾಗಿ ಪಡೆದುಕೊಂಡ. ಅವರ ಅನುಮತಿಯಂತೆ ತನ್ನ ಮನೆಗೆ ತೆರಳಿದ.

★ ★ ★ ★

## ಶೃಂಗಿ

ಶಮೀಕರೆಂಬ ಮಹರ್ಷಿಗಳಿದ್ದರು. ಅವರ ಶಿಷ್ಯನ ಹೆಸರು ಗೌರಮುಖ. ಶಮೀಕ ಮಹರ್ಷಿಗಳ ಮಗನಾದ ಶೃಂಗಿ ಮುನಿಯೂ ಗೌರಮುಖನೂ ಸಹಪಾಠಿಗಳಾಗಿದ್ದರು. ಒಟ್ಟಿಗೆ ವೇದಾಧ್ಯಯನವನ್ನು ಮಾಡುತ್ತ, ಸದಾ ಜತೆಜತೆಯಾಗಿ ಇರುತ್ತಿದ್ದರು. ಆಟದಲ್ಲಿ, ಪಾಠದಲ್ಲಿ, ಊಟದಲ್ಲಿ - ಎಲ್ಲದರಲ್ಲಿಯೂ ಸಹವಾಸ. ಇವರಿಬ್ಬರಿಗೆ ಶಮಿಕ ಮಹರ್ಷಿಗಳು ಜೊತೆಯಾಗಿಯೇ ವೇದಪಾಠ ಹೇಳಿಕೊಡುತ್ತಿದ್ದರು. ಒಮ್ಮೆ ಶೃಂಗಿ ಮತ್ತು ಗೌರಮುಖ ಆಶ್ರಮದ ಹೊರಗೆ ಅರಣ್ಯಕ್ಕೆ ದರ್ಭೆ, ಸಮಿಧೆಗಳೇ ಮೊದಲಾದ ವಸ್ತುಗಳನ್ನು ಸಂಗ್ರಹಿಸಲು ಹೋಗಿದ್ದರು.

ಅದೇ ಸಂದರ್ಭದಲ್ಲಿ ಹಸ್ತಿನಾವತಿಯ ರಾಜನಾದ ಪರೀಕ್ಷಿತನು ಬೇಟೆಗೆಂದು ಅದೇ ದಾರಿಯಲ್ಲಿ ಬರುತ್ತಾನೆ. ಬಹಳ ಸಮಯದಿಂದ ವನ್ಯಮೃಗಗಳ ಬೆನ್ನಟ್ಟಿದ ಕಾರಣ ಅವನಿಗೆ ತುಂಬ ಆಯಾಸವಾಗಿತ್ತು. ಬಾಯಾರಿಕೆಯಿಂದ ಇನ್ನೇನು ಕುಸಿದು ಬೀಳುವ ಸ್ಥಿತಿ ಬಂದಿತ್ತು. ಹಾಗಾಗಿ, ನೀರಿನ ಆತಿಥ್ಯ ಸಿಗುವುದೋ ಎಂದು ಶಮೀಕ ಮಹರ್ಷಿಯ ಆಶ್ರಮಕ್ಕೆ ಬಂದನು.

ಆಶ್ರಮದಲ್ಲಿ ಮಹಾರಾಜನನ್ನು ಎದುರುಗೊಂಡು ಉಪಚರಿಸಲು ಯಾರೂ ಇರಲಿಲ್ಲ. ಶಮೀಕ ಮಹರ್ಷಿಗಳು ಧ್ಯಾನಮಾಡುತ್ತಿದ್ದರು. ಅವರಿಗೆ ಮಹಾರಾಜ ಪರೀಕ್ಷಿತನು ಬಂದುದು ಗೊತ್ತಾಗಲೇ ಇಲ್ಲ. ಆ ಕಾರಣದಿಂದ ಮಹಾರಾಜನನ್ನು ಉಪಚರಿಸಲು ಅವರು ಎದ್ದು ಬರಲಿಲ್ಲ. ಇದರಿಂದಾಗಿ ಪರೀಕ್ಷಿತ ಮಹಾರಾಜನಿಗೆ ಕೋಪ ಬಂದಿತು. ಮೊದಲೇ ಅವನು ಆಯಾಸಗೊಂಡಿದ್ದ. ತೀವ್ರವಾಗಿ ನೀರಡಿಕೆ ಬಾಧಿಸುತ್ತಿತ್ತು. ಆಸಹನೆ, ಬೇಸರ ಮತ್ತು ಕೋಪದಿಂದ ಪರೀಕ್ಷಿತನು ಆಶ್ರಮದ ಸುತ್ತಮುತ್ತ ನೋಡಿದನು. ಸ್ವಲ್ಪ ದೂರದಲ್ಲಿ ಸತ್ತು ಬಿದ್ದಿದ್ದ ಹಾವೊಂದು ಕಾಣಿಸಿತು. ಅದನ್ನು ತನ್ನ ಧನುಸ್ಸಿನಿಂದ ಎತ್ತಿಕೊಂಡು ಶಮೀಕ ಮಹರ್ಷಿಗಳ ಕೊರಳಿಗೆ ಹಾಕಿ ಮಹಾರಾಜನು ಹೊರಟು ಹೋದನು.

ಸ್ವಲ್ಪ ಸಮಯದ ಅನಂತರ ಶೃಂಗಿ ಮತ್ತು ಗೌರಮುಖರು ಸಮಿತ್ತುಗಳನ್ನು ಸಂಗ್ರಹಿಸಿಕೊಂಡು ಆಶ್ರಮಕ್ಕೆ ಬಂದರು. ಅಲ್ಲಿ ಬಂದು ನೋಡಿದರೆ ಧ್ಯಾನ ಮಾಡುತ್ತಿದ್ದ ಶಮೀಕ ಮಹರ್ಷಿಗಳ ಕೊರಳಿನಲ್ಲಿ ಹಾವಿನ ಶವವಿರುವುದು ಕಂಡುಬಂತು. ತಂದೆಯ ಕೊರಳಿನಲ್ಲಿರುವ ಹಾವಿನ ಶವವನ್ನು ಎತ್ತಿ ದೂರ ಎಸೆದ ಶೃಂಗಿಗೆ ಈ ಕೃತ್ಯವನ್ನು ಮಾಡಿದವರ ಮೇಲೆ ಅಪಾರ ಸಿಟ್ಟು ಬಂತು. ಯಾರೋ ಈ ಕೃತ್ಯವನ್ನು ಎಸಗಿರಬೇಕು ಎಂಬುದು ಅರಿವಿಗೆ ಬಂತು, ''ನನ್ನ ತಂದೆಯ ಕೊರಳಿಗೆ ಈ ರೀತಿಯಲ್ಲಿ ಸತ್ತ ಹಾವಿನ ದೇಹವನ್ನು ಹಾಕಿದವನು ಇಂದಿಗೆ ಏಳು ದಿನಗಳೊಳಗೆ ಸೂರ್ಯಾಸ್ತಮಾನದ ಮೊದಲು ತಕ್ಷಕನಿಂದ ಕಚ್ಚಲ್ಪಟ್ಟು ಸತ್ತು ಹೋಗಲಿ'' ಎಂದು ಶಾಪವನ್ನಿತ್ತು.

ಶಮೀಕ ಮಹರ್ಷಿಗಳಿಗೆ ಧ್ಯಾನದಿಂದ ಎಚ್ಚರವಾಯಿತು. ನಡೆದ ವಿಷಯಗಳನ್ನೆಲ್ಲ ಶೃಂಗಿ ಮತ್ತು ಗೌರಮುಖರು ಹೇಳಿದರು. ಇದನ್ನು ಕೇಳಿದ ಮಹರ್ಷಿಗಳಿಗೆ ಸಂತೋಷವಾಗಲಿಲ್ಲ. ಧರ್ಮಾತ್ಮನಾದ ಪರೀಕ್ಷಿತ ಮಹಾರಾಜನಿಗೆ ಈ ರೀತಿ ಶಾಪವನ್ನು ಕೊಟ್ಟದ್ದು ಸರಿಯಲ್ಲವೆಂದು ಅವರು ಹೇಳಿದರು. ತಾನು ಪರೀಕ್ಷಿತ ಮಹಾರಾಜನಿಗೆ ಶಾಪವನ್ನು ಕೊಟ್ಟದ್ದು ಸರಿಯಾಗಿಯೇ ಇದೆಯೆಂದು ಶೃಂಗಿಯು ತನ್ನ ತಂದೆಯಲ್ಲಿ ವಾದಿಸಿದ. ಆಶ್ರಮಕ್ಕೆ ಬರುವಾಗ ಮಹಾರಾಜನಿಗೆ

ಬಾಯಾರಿಕೆಗೆ ನೀರು ಕೊಡದೇ ಇದ್ದುದ್ದು ತಪ್ಪೆಂದು ಶಮೀಕರು ಹೇಳಿದರು. ಆದರೆ ಶಾಪ ಕೊಟ್ಟಾಗಿದೆ. ಅದು ನಡೆದೇ ತೀರುತ್ತದೆ. ಹಾಗಾಗಿ, ಶಮೀಕರು ಗೌರಮುಖನನ್ನು ಕರೆದು ಎಲ್ಲ ವಿಚಾರವನ್ನು ರಾಜನಿಗೆ ತಿಳಿಸಿ ಬರುವಂತೆ ಹೇಳಿದರು.

ಗೌರಮುಖನು ನೇರವಾಗಿ ಹಸ್ತಿನಾವತಿಗೆ ತೆರಳಿ ಮಹಾರಾಜ ಪರೀಕ್ಷಿತನಿಗೆ ಈ ವಿಚಾರವನ್ನು ತಿಳಿಸಿದನು. ತಾನಿನ್ನು ಬದುಕುವುದು ಏಳೇ ದಿನಗಳೆಂದು ತಿಳಿದ ರಾಜನು ಸಿಂಹಾಸನದಲ್ಲಿ ತನ್ನ ಮಗನಾದ ಜನಮೇಜಯನನ್ನು ಕುಳ್ಳಿರಿಸಿದನು. ಮಂತ್ರಿಗಳಿಗೆ ವಿಷಯವನ್ನು ತಿಳಿಸಿ ತಾನು ಗಂಗಾನದಿಯ ತೀರದಲ್ಲಿ ದೇವರನ್ನು ಧ್ಯಾನಿಸುತ್ತ ಪ್ರಾಯೋಪವೇಶವೆಂಬ ವ್ರತವನ್ನು ಸ್ವೀಕರಿಸಿದನು. ಪ್ರಾಯೋಪವೇಶ ವ್ರತವೆಂದರೆ ಮರಣ ಪರ್ಯಂತ ಯಾವುದೇ ಆಹಾರವನ್ನು ಸ್ವೀಕರಿಸದೇ ಇರುವುದು. ಆಗ ಪರೀಕ್ಷಿತನ ಬಳಿಗೆ ವೇದವ್ಯಾಸರ ಪುತ್ರರಾದ ಶುಕಮಹರ್ಷಿಗಳು ಬಂದು ಅವನಿಗೆ ಶ್ರೀಮದ್ಭಾಗವತ ಮಹಾಪುರಾಣವನ್ನು ಏಳು ದಿನಗಳ ಕಾಲ ಹೇಳುತ್ತಾರೆ. ಆ ಪುರಾಣದ ಶ್ರವಣದಿಂದ ಪರೀಕ್ಷಿತ ಮಹಾರಾಜನು ಭಗವಾನ್ ಮಹಾವಿಷ್ಣುವಿನ ದಿವ್ಯ ಅನುಗ್ರಹದಿಂದ ವೈಕುಂಠವನ್ನು ಪಡೆದುಕೊಂಡನು. ಆ ಪುರಾಣ ಕಥೆ ಇಂದು ಲೋಕ ಪ್ರಸಿದ್ಧವಾಗಿದೆ. ಒಂದು ರೀತಿಯಲ್ಲಿ ಶ್ರೀಮದ್ಭಾಗವತ ಸಪ್ತಾಹಕ್ಕೆ ಕಾರಣನಾದದ್ದೇ ಶೃಂಗಿ. ಋಷಿಗಳ ಶಾಪದಲ್ಲಿಯೂ ಘನವಾದ ಉದ್ದೇಶವೇ ಇರುವುದು.

★ ★ ★ ★

## ವಾಲಖಿಲ್ಯ

ಜಗತ್ತಿನಲ್ಲಿ ನಾನಾ ರೀತಿಯ ಸೃಷ್ಟಿಗಳಿವೆ. ವೈಜ್ಞಾನಿಕ ಸೃಷ್ಟಿಯ ಅತ್ಯಂತ ಚಿಕ್ಕ ಕಣವನ್ನು ಪರಮಾಣು ಎನ್ನುತ್ತೇವಲ್ಲವೆ? ಸಣ್ಣ ದೇಹದ ಮನುಷ್ಯರಿದ್ದರು ಎಂಬುದನ್ನು ನಾವು ಕೇಳಿದ್ದೇವಲ್ಲವೆ? ಸಣ್ಣ ದೇಹದ ಮನುಷ್ಯರ ಆಂಗ್ಲ ಕಥೆಗಳನ್ನೂ ಕೆಲವರು ಓದಿರಬಹುದು.

ವಾಲಖಿಲ್ಯರು ಕೂಡ ಅಂಥದೇ ಸಣ್ಣ ದೇಹದ ಮಹರ್ಷಿಗಳ ಸಮೂಹ. ಅವರ ಸಂಖ್ಯೆಯಾದರೋ ಅರವತ್ತು ಸಾವಿರ. ಎಲ್ಲರಿಗೂ ವಾಲಖಿಲ್ಯ ಎಂಬ ಹೆಸರೇ ಇದೆ.

ದೇವಹೂತಿ ಮತ್ತು ಕರ್ದಮ ಋಷಿಗಳಿಗೆ ಕ್ರಿಯಾ ಎಂಬ ಮಗಳಿದ್ದಳು. ಅವಳು ಕ್ರತು ಎಂಬ ಮಹರ್ಷಿಯನ್ನು ವಿವಾಹವಾಗಿದ್ದಳು. ಆ ದಂಪತಿಯ ಮಕ್ಕಳೇ ವಾಲಖಿಲ್ಯರು. ಅವರ ದೇಹ ಎಷ್ಟು ಚಿಕ್ಕದೆಂದರೆ ಸಾಮಾನ್ಯ ಮನುಷ್ಯನ ಅಂಗುಷ್ಠ ಬೆರಳಿನಷ್ಟು. ವಾಲಖಿಲ್ಯರು ಮಹಾತಪಸ್ವಿಗಳು. ಸೂರ್ಯನಂತೆ ತೇಜಸ್ವಿಗಳು.

ಒಮ್ಮೆ ಕಶ್ಯಪ ಮಹರ್ಷಿಗಳು ಯಾಗವೊಂದನ್ನು ಮಾಡಲು ನಿಶ್ಚಯ ಮಾಡಿದರು. ಯಾಗವೆಂದರೆ ದೊಡ್ಡ ಸಂಭ್ರಮವಲ್ಲದೆ? ಎಲ್ಲರಿಗೂ ಆಹ್ವಾನಕೊಡಬೇಕಲ್ಲವೆ? ಸರಿ, ವಾಲಖಿಲ್ಯರ ಸಮೂಹಕ್ಕೂ ಕಶ್ಯಪರು ಆಮಂತ್ರಣ ನೀಡಿದ್ದರು. ಅರವತ್ತು ಸಾವಿರ ವಾಲಖಿಲ್ಯ ಮಹರ್ಷಿಗಳು ಯಾಗದಲ್ಲಿ ಭಾಗವಹಿಸುವುದಕ್ಕಾಗಿ ತೆರಳಿದರು. ಅಲ್ಲಿ ಹೋದಾಗ ಅವರನ್ನು ಪರಿಗಣಿಸುವವರೇ ಇರಲಿಲ್ಲ. ಯಾಕೆ ಹೇಳಬಲ್ಲಿರಾ? ಅವರು ಅತ್ಯಂತ ಸಣ್ಣ ದೇಹದ ಮನುಷ್ಯರು! ಆದರೆ, ವಾಲಖಿಲ್ಯರು ಈ ಬಗ್ಗೆ ಯಾವುದೇ ಚಿಂತೆ ಮಾಡದೆ ತಾವು ಗುಂಪಾಗಿದ್ದುಕೊಂಡು ಎಲ್ಲರ ಗಮನ ಸೆಳೆಯುವುದಕ್ಕಾಗಿ ಪ್ರಯತ್ನ ಮಾಡಿದರು.

ಯಾಗದಲ್ಲಿ ಎಲ್ಲರೂ ಒಂದಲ್ಲ ಒಂದು ಕೆಲಸದಲ್ಲಿ ತಲ್ಲೀನರಾಗುತ್ತ, ಯಜಮಾನನಿಗೆ ಸಹಾಯ ಮಾಡುತ್ತಿದ್ದರು: ವಾಲಖಿಲ್ಯರಿಗೆ ತಾವು ಸುಮ್ಮನಿರುವುದು ಸರಿಯೆನಿಸಲಿಲ್ಲ. ತಾವು ಕೂಡ ಏನಾದರೊಂದು ಕೆಲಸದಲ್ಲಿ ತೊಡಗಿಸಿಕೊಂಡು ನೆರವಾಗೋಣ ಎಂದು ಪರಸ್ಪರ ಮಾತನಾಡಿಕೊಂಡರು. ಆದರೆ, ಅವರಾದರೋ ಏನನ್ನು ಮಾಡಿಯಾರು? ಅತ್ಯಂತ ಸಣ್ಣ ದೇಹದ ಜೀವಿಗಳು! ಉಳಿದವರು ಮಾಡುತ್ತಿರುವ ಯಾವ ಕೆಲಸವನ್ನು ಅವರಿಂದ ಮಾಡಲು ಸಾಧ್ಯವಾಗಲಿಲ್ಲ. ಹಾಗೆಂದು ಏನೂ ಮಾಡದೇ ಉಳಿಯುವುದಕ್ಕೂ ಅವರು ಬಯಸಲಿಲ್ಲ.

ಸಣ್ಣ ಸಣ್ಣದಾಗಿರುವ ಸಮಿಧೆಗಳನ್ನು ಯಾಗಮಂಟಪಕ್ಕೆ ಹೊತ್ತು ತರುವುದಕ್ಕೆ ಆರಂಭಿಸಿದರು. ಆದರೆ, ಸಮಿಧೆಗಳ ಕಟ್ಟುಗಳನ್ನು ಅಷ್ಟು ಪುಟ್ಟ ದೇಹದ ಜೀವಿಗಳು ತರುವುದು ಸಾಧ್ಯವೆ? ಆದರೂ ಪರಿಶ್ರಮ ಪಡುತ್ತ, ಸಮಿಧೆಯ ಕಟ್ಟನ್ನು ಎಳೆಯುತ್ತ, ಅದರಡಿಗೆ ಬೀಳುತ್ತ, ಏಳುತ್ತ ತರುತ್ತಿದ್ದರು.

ಆ ಯಾಗಕ್ಕೆ ದೇವೇಂದ್ರನೂ ಬರುತ್ತಿದ್ದನು. ವಾಲಖಿಲ್ಯರ ಸ್ಥಿತಿಯನ್ನು ನೋಡಿ ಅವನಿಗೆ ನಗು ಬಂತು. ಅವನು ಸೌಜನ್ಯವನ್ನು ಬದಿಗಿರಿಸಿ ಜೋರಾಗಿ ನಗಲಾರಂಭಿಸಿ, ಅಪಹಾಸ್ಯ ಮಾಡತೊಡಗಿದ. ಮೊದಮೊದಲು ವಾಲಖಿಲ್ಯರು ಇದನ್ನು ಲಕ್ಷಿಸಲಿಲ್ಲ. ಆದರೆ, ದೇವೇಂದ್ರನ ಅಪಹಾಸ್ಯದ ನುಡಿಗಳು ಮುಂದುವರಿಯುವುದನ್ನು ನೋಡಿ ಅವರಿಗೆ ತಡೆಯಲಾರದಾಯಿತು. ಅವರು ಸಿಟ್ಟಿನಿಂದ, ''ಎಲವೋ ದೇವೇಂದ್ರ, ನಿನಗೆ ಮದ ತಲೆಗೇರಿದೆ. ನಮ್ಮ ಸೇವಾಶ್ರದ್ಧೆಯನ್ನು ನೀನು ಗಮನಿಸುತ್ತಿದ್ದರೆ ನಿನಗೆ ನಮ್ಮ ದೇಹದ ಸ್ಥಿತಿಯು ನಗಣ್ಯವಾಗಬೇಕಾಗಿತ್ತು. ನೀನು ಅಹಂಕಾರದಿಂದ ಹೀಗೆ ವರ್ತಿಸುತ್ತಿದ್ದೀಯಾ. ನಿನ್ನ ಅಹಂಕಾರ ಇಳಿಯಬೇಕಾದರೆ ನಿನಗಿಂತಲೂ ಬಲಿಷ್ಠನಾದ ಮತ್ತೊಬ್ಬ ಇಂದ್ರನನ್ನು ಸೃಷ್ಟಿಸಬೇಕು'' ಎಂದವರೇ ವಾಲಖಿಲ್ಯರು ಅಲ್ಲಿಯೇ ಬಲಶಾಲಿಯೊಬ್ಬನನ್ನು ಹುಟ್ಟಿಸುವುದಕ್ಕಾಗಿ ದೊಡ್ಡ ಯಜ್ಞವನ್ನು ಆರಂಭಿಸಿದರು.

ಇನ್ನೇನು, ಯಜ್ಞದ ಫಲವು ದೊರೆತು ಬಲಿಷ್ಠ ವ್ಯಕ್ತಿಯೊಬ್ಬನ ಜನ್ಮವಾಗುತ್ತದೆ ಎಂಬಾಗ ದೇವೇಂದ್ರನಿಗೆ ಭಯ ಆರಂಭವಾಯಿತು. ಅವನು ಯಜಮಾನರಾದ ಕಶ್ಯಪ ಮಹರ್ಷಿಗಳಲ್ಲಿ ಕಾಪಾಡಬೇಕೆಂದು ವಿನಂತಿಸಿದನು. ಕಶ್ಯಪ ದೇವೇಂದ್ರನ ತಂದೆಯೂ ಹೌದು. ಅವರು ವಾಲಖಿಲ್ಯರ ಬಳಿಗೆ ಬಂದು ತಮ್ಮ ಮಗನಾದ ದೇವೇಂದ್ರನು ಮಾಡಿರುವ ಅಪರಾಧವನ್ನು ಕ್ಷಮಿಸುವಂತೆ ಬೇಡಿಕೊಂಡರು. ಕಶ್ಯಪ ಮಹರ್ಷಿಗಳ ಕುರಿತಾಗಿ ಗೌರವ ಭಾವನೆಯಿಂದ ಇದ್ದ ವಾಲಖಿಲ್ಯರು ಅದಕ್ಕೊಪ್ಪಿ ಯಾಗವನ್ನು ಸಮಾಪ್ತಿಗೊಳಿಸಿ ಯಾಗದ ಪ್ರಸಾದವನ್ನು ಕಶ್ಯಪರಿಗೆ ನೀಡಿ ಅಲ್ಲಿಂದ ಹೊರಟು ಹೋದರು.

ಕಶ್ಯಪರು ಯಾಗದ ಪ್ರಸಾದವನ್ನು ತಮ್ಮ ಪತ್ನಿಯರಲ್ಲಿ ಒಬ್ಬಳಾದ ವಿನತಾ ಎಂಬವಳಿಗೆ ಕೊಟ್ಟರು. ಯಾಗದ ಪ್ರಸಾದವನ್ನು ಸ್ವೀಕರಿಸಿದ ಅವಳಿಗೆ ಮಗನೊಬ್ಬ ಹುಟ್ಟಿದ. ಹುಟ್ಟಿದ ತಕ್ಷಣ ಬೃಹದಾಕಾರವಾಗಿ ಬೆಳೆದ ಅವನಿಗೆ ರೆಕ್ಕೆಗಳಿದ್ದವು. ತೀಕ್ಷ್ಣವಾದ ಕಣ್ಣುಗಳಿದ್ದವು. ಇವನ ಆಕಾರವನ್ನು ನೋಡಿಯೇ ಇಂದ್ರಾದಿ ದೇವತೆಗಳು ಹೆದರಿ ಅವನನ್ನು ಸ್ತುತಿಸಿದರು. ಶಾಂತವಾದ ಅವನಿಗೆ ಗರುಡನೆಂದು

ಹೆಸರಿಟ್ಟರು. ಪಕ್ಷಿಗಳಿಗೆ ಅವನನ್ನು ರಾಜನನ್ನಾಗಿ ಮಾಡಿದರು. ಮಹಾವಿಷ್ಣುವು ಅವನನ್ನು ವಾಹನವನ್ನಾಗಿ ಮಾಡಿಕೊಂಡನು. ಅವನೇ ಗರುಡ. ಅವನು ಇಂದ್ರನಿಗಿಂತ ಬಲಿಷ್ಠನಾಗಿ ಮೆರೆದು ಅವನ ಗರ್ವಾಪಹಾರ ಮಾಡಿದ.

★ ★ ★ ★

## ದಧೀಚ

ಸ್ವಾಯಂಭುವ ಮನ್ವಂತರದಲ್ಲಿದ್ದ ಅಥರ್ವಣ ಋಷಿಗೆ ಚಿತ್ತಿ ಎಂಬ ಪತ್ನಿಯಲ್ಲಿ ದಧೀಚಿ ಋಷಿಯು ಉದಿಸಿದನು. ಹುಟ್ಟಿದಾಗ ದಧೀಚಿಯ ಮುಖವು ಕುದುರೆಯಂತೆ ಇದ್ದಿತು. ಮುಂದೆ ಅವನು ಪರಶಿವನನ್ನು ಭಕುತಿಯಿಂದ ಆರಾಧಿಸಿದ್ದರಿಂದ ಇವನಿಗೆ ಪರಮೇಶ್ವರನು 'ನೀನು ವಜ್ರಕಾಯನಾಗು' ಎಂದು ವರವಿತ್ತು ಹರಸಿದನು. ಇದರಿಂದ ದಧೀಚಿಯ ಎಲವುಗಳೆಲ್ಲ ವಜ್ರದಂತೆ ಗಟ್ಟಿಮುಟ್ಟಿಯಾದವು. ದಧೀಚಿಯು ಮಹಾಪಂಡಿತನೂ ತಪಸ್ಸಿದ್ಧನೂ ಆದ ಮಹಾಮುನಿಯಾಗಿದ್ದ. ಅವನಿಗೆ ದಧ್ಯಂಚ ದಧೀಚಿ, ದಧೀಚ ಎಂದು ಮುಂತಾಗಿ ಕರೆಯುತ್ತಿದ್ದರು.

ದಧೀಚರು ಮಹಾತಪಸ್ವಿಗಳಾಗಿದ್ದರು. ಇವರ ಅದ್ಭುತ ತಪೋನುಷ್ಠಾನವನ್ನು ಕಂಡು ಹೆದರಿದ ಸುರೇಂದ್ರನು ಇವರ ತಪೋಭಂಗದ ಉದ್ದೇಶದಿಂದ ಅಲಂಬುಷಾ ಎಂಬ ಅಪ್ಸರೆಯನ್ನು ಕಳುಹಿಸಿದನು. ಆ ಸ್ವರ್ಗದ ಚೆಲುವು ನೆಲಕ್ಕಿಳಿದು ಬಂದು ಸರಸ್ವತೀ ನದಿಯಲ್ಲಿ ಸ್ನಾನ ಮಾಡುತ್ತಲಿರುವ ದಧೀಚರ ಕಣ್ಣೆದುರು ಸುಳಿದಾಗ ಅವರ ಮನಸ್ಸು ಚಂಚಲವಾಯಿತು. ಅವರ ಕಾಮಾತುರವಾದ ಕುಡಿನೋಟದ ಅರ್ಥವನ್ನು ಮಾಡಿಕೊಂಡ ಅಲಂಬುಷೆಯು ತಾನೂ ನೀರಿಗಿಳಿದಳು. ಆ ಋಷಿ-ರಮಣಿಯರ ಜಲವಿಹಾರದಿಂದ ಸರಸ್ವತೀ ನದಿಯ ನೀರು ರಾಗರಂಜಿತವಾದಂತೆ ತೋರಿತು. ಆ ಸಲಿಲ ಶೃಂಗಾರವನ್ನು ನೋಡಿದ ಸರಸ್ವತೀ ನದಿಯ ಹೃದಯವೂ ರಸಾರ್ದ್ರವಾಯಿತು.

ತಾನು ಬಂದ ಕಾರ್ಯವಾಯಿತೆಂದು ಅಲಂಬುಷೆಯು ಆಗಸಕ್ಕೆ ಏರಿದಳು. ಆದರೆ ಋಷಿಗೆ ಮಾತ್ರ ಇನ್ನೂ ತೃಪ್ತಿಯಾಗಿದ್ದಿಲ್ಲ. ಆ ಗಂಧರ್ವ ಸುಂದರಿಯನ್ನು

ನೆನೆದು ಅವರು ನೀರಲ್ಲಿಯೇ ಕರಗಿ ನೀರಾಗುತ್ತಿದ್ದರು. ಸರಸ್ವತೀ ನದಿಯು ಅವರ ಶಕ್ತಿಯನ್ನು ಧಾರಣಮಾಡಿದಳು. ಆದರಿಂದ ದಿವ್ಯ ದೈವಿಕ ತೇಜೋದೀಪ್ತವಾದ ಒಂದು ಮಗು ಜನಿಸಿತು. ಆ ಸರಸ್ವತೀ ಪುತ್ರನೇ ಮುಂದೆ ಸಾರಸ್ವತ ಮುನಿಯೆಂದು ಮಹೀಮಹಿತನಾದ. ಆಗ ದಧೀಚಿ ಮುನಿಗಳು ಸರಸ್ವತೀ ನದಿಗೆ 'ನಿನ್ನ ನೀರಿನಿಂದ ತರ್ಪಣವಿತ್ತರೆ ವಿಶ್ವೇ ದೇವತೆಗಳೂ ಪಿತೃಗಳೂ ಗಂಧರ್ವರೂ ಸುಪ್ರೀತರಾಗುತ್ತಾರೆ' ಎಂದು ವರವಿತ್ತರು. ದೇವೇಂದ್ರನು ದಧೀಚರಿಗೆ ಪ್ರವರ್ಗ್ಯ ವಿದ್ಯೆಯನ್ನೂ ಮಧು ವಿದ್ಯೆಯನ್ನೂ ಉಪದೇಶಿಸಿದ. 'ಈ ಎರಡೂ ವಿದ್ಯೆಗಳು ಅತ್ಯಂತ ರಹಸ್ಯ ವಿದ್ಯೆಗಳಾದುದರಿಂದ ಇವನ್ನು ಬೇರೆ ಯಾರಿಗೂ ಉಪದೇಶಿಸಬಾರದು. ಒಂದು ವೇಳೆ ನೀವಿದನ್ನು ಯಾರಿಗಾದರೂ ಹೇಳಿಕೊಟ್ಟರೆ ನಿಮ್ಮ ತಲೆ ಕಡಿದುಹಾಕುತ್ತೇನೆ. ಜೋಕೆ' ಎಂದು ಎಚ್ಚರಿಕೆಯನ್ನು ಕೊಟ್ಟು ಹೋದ.

ಅಶ್ವಿನೀ ದೇವತೆಗಳು ದಧೀಚರ ಹತ್ತಿರ ಬಂದು ತಮಗೆ ಆ ಮಧು ವಿದ್ಯೆಯನ್ನು (ನಾರಾಯಣವರ್ಮವನ್ನು) ಉಪದೇಶಿಸಬೇಕೆಂದು ಭಿನ್ನವಿಸಿದರು. ಅದಕ್ಕೆ ದಧೀಚರು ದೇವರಾಜನು ತನಗೆ ನೀಡಿದ ಎಚ್ಚರಿಕೆಯನ್ನು ತಿಳಿಸಿದರು. ಅದನ್ನು ಕೇಳಿ ಮಧು ವಿದ್ಯೆಯನ್ನು ಪಡೆಯಲಿಕ್ಕೆ ಆತುರರಾದ ಆ ಅಮರಾವತಿಯ ವೈದ್ಯರು ದಧೀಚ ಮುನಿಗಳಿಗೆ ವಂದಿಸಿ, 'ಗುರುಗಳೇ, ನಾವು ಮೊದಲು ಕುದುರೆಯಂತಿರುವ ನಿಮ್ಮ ತಲೆಯನ್ನು ಕಡಿದು ನಿಜವಾದ ಕುದುರೆಯ ತಲೆಯನ್ನು ಅದಕ್ಕೆ ಕೂಡಿಸುತ್ತೇವೆ. ನಿಮ್ಮ ನಿಜವಾದ ತಲೆಯನ್ನು ಭದ್ರವಾಗಿ ಬಚ್ಚಿಡುತ್ತೇವೆ.

ನೀವು ನಮಗೆ ನಾವು ಜೋಡಿಸಿದ ಅಶ್ವದ ಶಿರದಿಂದಲೇ ಮಧು ವಿದ್ಯೆಯನ್ನು ಉಪದೇಶಿಸಿರಿ. ಅದು ದೇವೇಂದ್ರನಿಗೆ ಗೊತ್ತಾಗಿ ಅವನು ನಿಮ್ಮ ತಲೆಯನ್ನು ಕಡೆದೊಗೆದರೂ ಚಿಂತೆಯಿಲ್ಲ. ಅನಂತರ ನಾವು ನಮ್ಮ ಬಳಿ ಸುರಕ್ಷಿತವಾಗಿ ಕಾದಿಟ್ಟ ನಿಮ್ಮ ನಿಜ ಶಿರವನ್ನು ನಿಮಗೆ ಜೋಡಿಸುತ್ತೇವೆ. ವಜ್ರಮಯವಾದ ನಿಮ್ಮ ಎಲುವುಗಳಿಗಂತೂ ಅಂಜಿಕೆಯಿಲ್ಲ. ಶಂಕರನ ವರದಿಂದ ತಾವೂ ಹೇಗೂ ಅವಧ್ಯರಾಗಿರುವಿರಿ. ಹೇಗಾದರೂ ಮಾಡಿ ತಾವು ನಮಗೆ ಆ ಮಧುವಿದ್ಯೆಯನ್ನು ಉಪದೇಶಿಸಬೇಕು' ಎಂದು ದೀನವಾಣಿಯಿಂದ ಪ್ರಾರ್ಥಿಸಿದರು. ಆಗ ಅದನ್ನು ಕೇಳಿ

'ವಿದ್ಯೆಯನ್ನು ಕಲಿಸು' ಎಂದು ತನ್ನ ಬಳಿ ಶಿಷ್ಯರಾಗಿ ಬೇಡಿಬಂದವರಿಗೆ ನಕಾರದ ಉತ್ತರವನ್ನು ಕೊಡುವದು ಬ್ರಾಹ್ಮಣ ಧರ್ಮವಲ್ಲ' ಎಂದು ಅರಿತ ದಧೀಚರು ಅದಕ್ಕೆ ಸಮ್ಮತಿಸಿದರು. ಕೂಡಲೇ ಅಶ್ವಿನಿಗಳು ದಧೀಚರ ಶಿರಚ್ಛೇದ ಮಾಡಿ ಕುದುರೆಯ ಮೋರೆಯೊಂದನ್ನು ಜೋಡಿಸಿದರು. ಆಗ ದಧ್ಯಂಚರು ತಮ್ಮ ಹಯಗ್ರೀವ ರೂಪದಿಂದಲೇ ಅಶ್ವಿನೀಕುಮಾರರಿಗೆ ತಾವು ಇಂದ್ರನಿಂದ ಕಲಿತ ಮಧುವಿದ್ಯೆಯನ್ನು ಉಪದೇಶಿಸಿದರು.ಸಾವಿರಗಣ್ಣಿನ ಶಚೀನಾಥನಿಗೆ ಈ ಸಮಾಚಾರವು ಕೂಡಲೇ ತಿಳಿದು ಅವನು ದಧೀಚರಿದ್ದಲ್ಲಿಗೆ ಧಾವಿಸಿದ. ನಿಜ ಸಂಗತಿಯನ್ನು ತಿಳಿದ ಸುರರಾಜನು ಚಂಡಕೋಪದಿಂದ ಅವರ ರುಂಡವನ್ನು ಹಾರಿಸಿದ. ಅವನು ಅಲ್ಲಿಂದ ಹೋದ ಬಳಿಕ ಅಶ್ವಿನಿಗಳು ಬಂದು ತಾವು ಗುಟ್ಟಾಗಿ ತೆಗೆದಿರಿಸಿದ ದಧೀಚಿಮುನಿಯ ನಿಜವಾದ ತಲೆಯನ್ನು ಅವರ ಸ್ಥಳದಲ್ಲಿ ಸರಿಯಾಗಿ ಜೋಡಿಸಿದರೆಂದು ಋಗ್ವೇದದ ಪ್ರಥಮ ಮಂಡಲದಲ್ಲಿಯ ಕಥಾ ಸಂದರ್ಭದ ಅಭಿಪ್ರಾಯವೆಂದು ತೋರುತ್ತದೆ. ಶಾಟ್ಯಾಯನ ಬ್ರಾಹ್ಮಣದಲ್ಲಿ ಮಾತ್ರ ದಧೀಚರು ಬದುಕಿದ್ದಾಗ ಅವರನ್ನು ನೋಡಿದ ಮಾತ್ರಕ್ಕೆ ದೈತ್ಯರು ಹೆದರಿ ಓಡಿ ಹೋಗುತ್ತಿದ್ದರು. ಅವರು ಕಾಲವಾದ ಬಳಿಕ ಅಸುರರ ಉಪಟಳವು ಹೆಚ್ಚಾಗಿ ಅಸಹ್ಯವಾದಾಗ ಇಂದ್ರನು ದಧೀಚರ ಶೋಧ ಮಾಡತೊಡಗಿದ. ಅವರು ಮೃತರಾದ ಸಮಾಚಾರ ಅವನಿಗೆ ತಿಳಿಯಿತು. ಆಗ ಅವನು ಅವರ ಅಸ್ಥಿಯನ್ನು ಹುಡುಕತೊಡಗಿದಾಗ ಶರ್ಯಣಾವತದಲ್ಲಿ ಅಶ್ವಿನೀಕುಮಾರರಿಗೆ ಮಧುವಿದ್ಯೆಯನ್ನು ಉಪದೇಶಿಸುತ್ತಲಿದ್ದ ದಧ್ಯಂಚರ ತುರಂಗಮ ತಲೆಯು ಗೋಚರಿಸಿತು. ಆದರ ಸಹಾಯದಿಂದ ಅವನು ಮುಂದೆ ದೈತ್ಯರ ಪರಾಭವವನ್ನು ಮಾಡಿದ' ಎಂದು ಕತೆ ಬಂದಿದೆಯೆಂದು ಸಾಯಣಾಚಾರ್ಯರು ತಮ್ಮ ವೇದಭಾಷ್ಯದಲ್ಲಿ ನಿರೂಪಿಸಿದ್ದಾರೆ.

ಮುಂದೆ ಒಂದು ಸಲ ದೇವತೆಗಳು ತಮ್ಮ ಶಸ್ತ್ರಾಸ್ತ್ರಗಳನ್ನೆಲ್ಲ ದೈತ್ಯರು ಕದ್ದೊಯ್ಯುವರೆಂಬ ಭಯದಿಂದ ದಧೀಚಋಷಿಗಳ ಬಳಿಗೆ ತಂದಿಟ್ಟರು. ಎಷ್ಟೋ ದಿನಗಳು ಕಳೆದರೂ ದೇವತೆಗಳು ಬರಲೇ ಇಲ್ಲ. ದಧೀಚರು ಹಿಮಾಲಯಕ್ಕೆ ತಪಸ್ಸಿಗೆ ಹೋಗಬೇಕಾಗಿದ್ದಿತು. ಕಾರಣ ಅವರು ಕೆಲದಿನ ದಾರಿಕಾದು ಕೊನೆಗೆ ತಮ್ಮ

ದಾಸಿಯಾದ ಸುಭದ್ರೆಗೆ ಆ ಅಸ್ತ್ರಗಳನ್ನೆಲ್ಲ ಹೊತ್ತುಕೊಂಡು ತಮ್ಮ ಜೊತೆಗೆ ಹಿಮಾಚಲದತ್ತ ಬರಬೇಕೆಂದು ಹೇಳಿದರು. ಅವಳಿಗೆ ಭಾರವಾದ ಆ ಶಸ್ತ್ರಾಸ್ತ್ರಗಳನ್ನು ಹೊರಲಾಗಲಿಲ್ಲ. ಆಗ ದಧೀಚರು ಅವುಗಳನ್ನೆಲ್ಲ ಕರಗಿಸಿ ಅದರ ವೀರ್ಯಸಾರವನ್ನು ನೀರು ಮಾಡಿ ಕುಡಿದು ತಾವು ಉತ್ತರ ದಿಕ್ಕಿಗೆ ಪ್ರಯಾಣ ಮಾಡಿದರು.

ಮುಂದೆ ಕೆಲಕಾಲದ ನಂತರ ಅಮರಾವತಿಯ ನಾಗರಿಕರಿಗೆ ವೃತ್ರಾಸುರನ ದಾಳಿ ಹಾವಳಿಗಳಿಂದ ಉಪದ್ರವವಾಗಲು ಅವರು ದಧೀಚಮುನಿಗಳಿದ್ದಲ್ಲಿಗೆ ಬಂದು ತಮ್ಮ ಶಸ್ತ್ರಾಸ್ತ್ರಗಳನ್ನು ಕೊಡಬೇಕೆಂದು ಕೇಳಿದರು. ಅದಕ್ಕೆ ಅವರು 'ನಾನು ಬಹುಕಾಲ ನಿಮ್ಮ ದಾರಿ ಕಾದು ನೀವು ಬಾರದ್ದನ್ನು ಕಂಡು ಅವುಗಳ ಸಾರವನ್ನು ನೀರು ಮಾಡಿ ಕುಡಿದು ಬಿಟ್ಟೆನು' ಎಂದು ನಿಜ ಸಂಗತಿಯನ್ನು ನುಡಿದರು.

ಆಗ ಅಮರ ಗಣಂಗಳೆಲ್ಲ ಶ್ರೀವಿಷ್ಣುವಿಗೆ ಶರಣು ಹೋದರು. ಶ್ರೀಹರಿಯು ಅವರಿಗೆ 'ದಧೀಚಿಯ ಎಲುಬು ಪಡೆದು ಅವುಗಳಿಂದ ವಿಶ್ವಕರ್ಮನ ಸಹಾಯದಿಂದ ಶಸ್ತ್ರಾಸ್ತ್ರಗಳನ್ನು ನಿರ್ಮಿಸಿ ಅದರಿಂದ ದಾನವರನ್ನು ಹೊಡೆದೋಡಿಸಿರಿ' ಎಂದು ಸಲಹೆಯಿತ್ತನು.

ಅದರಂತೆ ಸ್ವರ್ಗಲೋಕದ ಪೌರರೆಲ್ಲರೂ ಮತ್ತೆ ದಧ್ಯಂಚರಿದ್ದಲ್ಲಿ ಬಂದು ಅವರ ಅಸ್ಥಿಗಳನ್ನು ಸುರವೃಂದದ ಸಂರಕ್ಷಣೆಗಾಗಿ ಕೊಡಬೇಕೆಂದು ಕೇಳಿಕೊಂಡರು. ಆಗ ದಯಾರ್ದ್ರ ಹೃದಯರಾದ ದಧೀಚರು ದೇವಗಣದ ಜೀವ ಉಳಿಸಲಿಕ್ಕಾಗಿ ಯೋಗ ಸಮಾಧಿಯಿಂದ ಶ್ವಾಸವನ್ನು ನಿರೋಧಿಸಿ ಆತ್ಮಾಹುತಿಯನ್ನು ನೀಡಿ ಅಮರರಾದರು.

ಅನಂತರ ಹುತಾತ್ಮರಾದ ಆ ಮಹಾತ್ಮರ ಮೈಯಲ್ಲಿಯ ಮಾಂಸ ರಕ್ತಗಳನ್ನು ಬಸಿದು ತೆಗೆದು ಅವರ ಎಲವುಗಳನ್ನು ಗಾಡಕ್ಕೆ ಏರಿಸಲಿಕ್ಕೆ ವಿಶ್ವಕರ್ಮನಿಗೆ ಧೈರ್ಯವಾಗಲಿಲ್ಲ. ಆಕಳುಗಳು ಬಂದು ಅವರ ಮೈಯಲ್ಲಿಯ ಮಾಂಸವನ್ನೆಲ್ಲ ತಿಂದು ಹೋದ ಬಳಿಕ ದೇವ ಬಡಿಗನು ಆ ಅಸ್ಥಿಗಳನ್ನು ತೆಗೆದುಕೊಂಡು ಅವುಗಳಿಂದ ಆರು ಏಣಿನ ತೀಕ್ಷ್ಣ ಧಾರೆಯುಳ್ಳ ವಜ್ರಾಯುಧವನ್ನೂ ಮತ್ತು ಬೇರೆ ಬೇರೆ ಅನೇಕ ಖಡ್ಗ ಆಯುಧಗಳನ್ನೂ ನಿರ್ಮಿಸಿದನು.

ಆ ಬ್ರಹ್ಮರ್ಷಿಯ ಮಂತ್ರಪೂತವಾದ ಅಸ್ಥಿಗಳಿಂದ ದೇವತೆಗಳು ದೈತ್ಯರನ್ನೆಲ್ಲ ಸೋಲಿಸಿ ವೃತ್ರಾಸುರನನ್ನು ಕೊಂದು ವಿಜಯಶಾಲಿಗಳಾದರು. ಈ ಸಮಾಚಾರವು ದಧೀಚರ ಪತ್ನಿ ವಡವಾ ಪ್ರಾತಿಥೇಯಿಗೆ ತಿಳಿದು ಕುಪಿತಳಾದ ಅವಳು ದೇವತೆಗಳಿಗೆಲ್ಲ 'ನೀವು ನಿಸ್ಸಂತಾನರಾಗಿರಿ' ಎಂದು ಶಾಪವಿತ್ತಳು.

ಪರೋಪಕಾರಕ್ಕಾಗಿ ಆತ್ಮಾರ್ಪಣೆಮಾಡಿದ ಹುತಾತ್ಮ ಮಹಾತ್ಮರಲ್ಲಿ ದಧೀಚಿ ಮುನಿಗಳೇ ಮೊದಲಿಗರು. ಅವರ ಆಶ್ರಮವು ಸರಸ್ವತೀ ಹಾಗು ಗಂಗಾನದಿಯ ದಂಡೆಗಳಲ್ಲಿ ಬೇರೆ ಬೇರೆ ಇದ್ದವು. ಇವರಿಗೆ ಅಶ್ವಶಿರ ಎಂಬ ಬ್ರಹ್ಮಕವಚವು ವಿದಿತವಿದ್ದಿತು. ಭಾರ್ಗವ ಗೋತ್ರದ ಮಂತ್ರಕಾರರೆಂದು ಇವರ ಹೆಸರು ವೇದ ವಿದಿತವಾಗಿದೆ.

★ ★ ★ ★

## ಋಚೀಕ

ಭಾರ್ಗವಕುಲದ ಚ್ಯವನ ವಂಶದಲ್ಲಿ ಔರ್ವಪುತ್ರ ಋಚೀಕ ಋಷಿಯು ಎಲ್ಲ ರೀತಿಯಿಂದಲೂ ಪ್ರಸಿದ್ಧನೂ ಪೂಜ್ಯನೂ ಪ್ರಶಂಸನೀಯನೂ ಆದನು. ಬಾಲ್ಯದಿಂದಲೂ ಋಚೀಕರ ಜನ್ಮಗುರಿ ವೇದಾಂತ ರಹಸ್ಯಜ್ಞಾನ, ವೇದೋಕ್ತ ಕರ್ಮಾನುಷ್ಠಾನ ಇವೆರಡೇ ಆಗಿದ್ದವು.

ಋಚೀಕರು ಸಣ್ಣವರಿದ್ದಾಗ ಭಾರತ ದೇಶದಲ್ಲಿ ದೊಡ್ಡದಾದೊಂದು ರಾಜಕೀಯ ವಿಪ್ಲವವು ನಡೆದುಹೋಯಿತು. ಅಸಾಧಾರಣ ಬಲವೀರ್ಯಗಳಿಂದ ದೃಪ್ತರಾದ ಹೈಹಯ ರಾಜರು ಭೃಗುಕುಲದ ಬ್ರಾಹ್ಮಣರನ್ನು ಕಂಡಲ್ಲೆಲ್ಲ ಹಿಂಸೆ ಮಾಡುತ್ತಿದ್ದರು. ಅದರಿಂದ ಸಂತ್ರಸ್ತರಾದ ಭಾರ್ಗವರೆಲ್ಲರೂ ಮಾಹಿಷ್ಮತಿಯ ಪರಿಸರದ ಪ್ರದೇಶವನ್ನೆಲ್ಲ ಬಿಟ್ಟು ತಲೆಮರಿಸಿಕೊಂಡು ತುಸು ದೂರ ಮಧ್ಯದೇಶದ ಒಳನಾಡು ಕಾಡುಗಳಲ್ಲಿ ಹೋಗಿ ಗುಪ್ತವಾಗಿ ನೆಲೆಸಿದರು.

ತರುಣನಾದ ಋಚೀಕನ ಮನಸ್ಸಿನಲ್ಲಿ ಹೈಹಯರ ವಿಷಯದಲ್ಲಿ ಪೂರ್ಣ ತಿರಸ್ಕಾರವು ತುಂಬಿತ್ತು. ಅವರನ್ನು ತನ್ನ ಕೋಪಶಾಪಗಳಿಂದ ಸಂಹರಿಸಿ ಹಾಕುವಷ್ಟು

ಅವನಲ್ಲಿ ತಪಃಶಕ್ತಿಯೂ ಇದ್ದಿತು. ಆದರೆ ಪ್ರತ್ಯಕ್ಷ ಪ್ರತೀಕಾರವನ್ನು ದೈಹಿಕವಾಗಿ ಮಾಡುವದು ಬ್ರಾಹ್ಮಣರ ಕರ್ತವ್ಯವಲ್ಲವೆಂದು ಬಗೆದು ಅವನು ಆ ವಿಷಯದಲ್ಲಿ ಉದಾಸೀನನಾಗಿ ತನ್ನ ಜಪತಪೋನುಷ್ಠಾನಗಳಲ್ಲಿ ಮಗ್ನನಾದನು.

ಇದರಿಂದ ಋಚೀಕನ ಆತ್ಮಶಕ್ತಿ ಮತ್ತು ಅಂತಸ್ತೇಜಸ್ಸುಗಳು ಅಭಿವೃದ್ಧಿಗೊಂಡವು. ಅವನೇನೋ ಅಧ್ಯಾತ್ಮ ಸಾಧನೆಯಲ್ಲಿ ನಿರಂತರವೂ ಅಂತರ್ಮುಖವಾದ ಆ ನಿರ್ವಾಸಿತ ಭೃಗುಕುಲದ ನಾಯಕತ್ವವು ಅವರ ಪಾಲಿಗೇ ಬಂದಿತು. ಅವನೊಂದು ದಿನ ತೀರ್ಥಯಾತ್ರೆಯ ನೆಪದಿಂದ ಕಾನ್ಯಕುಬ್ಜಕ್ಕೆ ಬಂದನು. ಅಲ್ಲಿ ಕೌಶಿಕೀನದೀ ತಟಾಕದಲ್ಲಿ ಸ್ನಾನಮಾಡಿ ದಂಡೆಯ ಮೇಲೆ ಬಂಡೆಗಲ್ಲಿನ ಮೇಲೆ ಮಂಡಿಸಿ ಪೂಜಾಹ್ನಿಕಗಳನ್ನು ಮಾಡುತ್ತಲಿರುವಾಗ ಆ ದೇಶದ ಅರಸು ಗಾಧಿಯ ಮಗಳಾದ ಸತ್ಯವತಿಯು ಆ ನದೀ ಜಲದಲ್ಲಿ ಮೀಯಲೆಂದು ಅಲ್ಲಿಗೆ ಬಂದಳು. ಹಾಲ್ಗಡನ್ನು ಕಡೆದು ಪಡೆದ ಇಂದಿರೆಯಂತೆ ಸುಂದರಿಯಾದ ಆ ಅರಸುಕುವರಿಯ ಲೋಭನೀಯವಾದ ಲಾವಣ್ಯವು ಋಷಿಕುಮಾರ ಋಚೀಕನ ಹೃದಯದಲ್ಲಿ ಕಾಮಕೋಟೆಯನ್ನು ಕಟ್ಟಿತು. ಅಪ್ಸರೆಯರು ಅಸೂಯೆ ಪಡುವಂಥ ಸೊಬಗು ಅವಳ ಸೌಂದರ್ಯದ ಸೆರಗಿಗೆ ಜೋತುಬಿದ್ದಿತ್ತು. ಋಚೀಕನು ತಾನು ಕಂಡ ಆ ಕಾಂತಿಮತಿಯು ಕಾನ್ಯಕುಬ್ಜದ ದೊರೆ ಕುಶಿಕನ ಮಗಳು ಎಂಬುದನ್ನು ತಿಳಿದು ಏನೇನೋ ಲೆಕ್ಕ ಹಾಕಿದ.

ಅವನು ತನ್ನ ಪ್ರಾತರಾಹ್ನಿಕವನ್ನು ಮುಗಿಸಿ ನೇರವಾಗಿ ಮನೆಗೆ ಬಂದು ಮಹಾರಾಜನನ್ನು ಕಂಡು ಏಕಾಂತದಲ್ಲಿ ತುಸು ಮಾತನಾಡಬೇಕೆಂದು ಅರುಹಿದ. ರಹಸ್ಯದಲ್ಲಿ ರಾಜನನ್ನು ಸಂಧಿಸಿ ರಾಜಕುವರಿಯನ್ನು ತನಗೆ ಕೊಡಬೇಕೆಂದು ಕೇಳಿದ. ತೇಜಸ್ವಿ ತರುಣನಾದ ಋಚೀಕನ ಮುಖದಲ್ಲಿಯ ಬ್ರಹ್ಮವರ್ಚಸ್ಸನ್ನೂ, ಮಾತಿನಲ್ಲಿ ಮಿಂಚಾಡುವ ಪ್ರತಿಭೆಯ ತೇಜಸ್ಸನ್ನೂ ಗುರುತಿಸಿದ ಕಾನ್ಯಕುಬ್ಜದ ಒಡೆಯನಿಗೆ ಇವನೊಬ್ಬ ಅಸಾಧಾರಣ ವ್ಯಕ್ತಿ ಎನಿಸಿತು.

ಆದರೆ ಭೃಗುಕುಲದ ಈ ಬ್ರಾಹ್ಮಣನಿಗೆ ಕನ್ಯೆಯನ್ನಿತ್ತು ಕಾರ್ತವೀರ್ಯಾರ್ಜುನನ ಕೋಪ ಕದನಗಳಿಗೆ ಈಡಾಗುವ ಇಚ್ಛೆಯೂ ಅವನಿಗೆ ಇರಲಿಲ್ಲ.

ಆದುದರಿಂದ ಅವನು ತನ್ನ ಮಗಳ ಸ್ವಯಂವರವನ್ನು ಸಾರಿ, ಕಿವಿ ಕಪ್ಪಗಿರುವ ಸಾವಿರ ಕುದುರೆಗಳನ್ನು ತಂದು ಕೊಟ್ಟವರಿಗೆ ತನ್ನ ಮಗಳನ್ನು ಕೊಡುವದಾಗಿ ಘೋಷಿಸಿದ. ಕಿವಿ ಕಪ್ಪಗಿರುವ ಸಾವಿರ ಕುದುರೆಗಳನ್ನು ಎಲ್ಲಿ ದೊರಕಬೇಕು? ಯಾರೂ ಆ ಪಣವನ್ನು ಪೂರ್ತಿ ಮಾಡಲಿಲ್ಲ. ಇವನು ಕನ್ಯೆಯನ್ನೂ ಕೊಡಲಿಲ್ಲ.

ಇದನ್ನು ತಿಳಿದ ಋಚೀಕನು ವರುಣನನ್ನು ಪ್ರಾರ್ಥನೆ ಮಾಡಿ ಅವನಿಂದ ಕಿವಿ ಕಪ್ಪಗಿರುವ ಸಾವಿರ ಅಶ್ವಗಳನ್ನು ಪಡೆದುಕೊಂಡು ಬಂದ. ಮಂತ್ರದ್ರಷ್ಟಾರನಾದ ಋಚೀಕನು ಕಾನ್ಯಕುಬ್ಜದೇಶದಲ್ಲಿಯ ಗಂಗೆಯ ತಡಿಯಲ್ಲಿ ನಿಂತು ಸಹಸ್ರಶ್ಯಾಮ ಕರ್ಣದ ತುರಗಳಿಗಾಗಿ ವರುಣನನ್ನು 'ಅಶ್ವೋವೋಢಾ' ಎಂಬ ಮಂತ್ರಗಳಿಂದ ಪ್ರಾರ್ಥಿಸಿ ಕೃಷ್ಣಕರ್ಣದ ವಾಜಿ ಸಹಸ್ರವನ್ನು ಪಡೆದ ಸ್ಥಳವು ಅಶ್ವತೀರ್ಥ ಎಂದು ಇಂದಿಗೂ ಪ್ರಸಿದ್ಧವಿದೆ. ಆ ಕುದುರೆಗಳನ್ನು ಗಾಧಿರಾಜನಿಗೆ ತಂದು ಕೊಟ್ಟ ಬಳಿಕ ಅವನು ಋಚೀಕನಿಗೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿದನು. ಇವನ ವಿವಾಹಕ್ಕೆ ಸ್ವರ್ಗ ಲೋಕದಿಂದ ದೇವತೆಗಳು ಕೂಡ ಗಂಡಿನ ಬೀಗರಾಗಿ ಬಂದಿದ್ದರಂತೆ. ಮದುವೆ ಮಾಡಿಕೊಂಡು ಋಚೀಕನು ಸತ್ಯವತಿಯನ್ನು ತನ್ನ ಆಶ್ರಮಕ್ಕೆ ಕರೆದೊಯ್ದ.

ಸತ್ಯವತಿಯು ರಾಜಪುತ್ರಿಯಾದರೂ ಆ ಗುಡಿಸಲಿನ ಗೃಹಸ್ಥ ಧರ್ಮಕ್ಕೆ ಹೊಂದಿಕೊಂಡು ತನ್ನ ರಮಣನಾದ ತರುಣ ಋಷಿ ಋಚೀಕನನ್ನು ಪರಿಪರಿಯಿಂದ ಸೇವೆಮಾಡಿದಳು. ಅವಳ ಸೇವೆಯಿಂದ ಸುಪ್ರಸನ್ನನಾದ ಅವನು ಏನು ವರಬೇಕು ಬೇಡು ಎಂದು ಹೇಳಿದನು. ಅದಕ್ಕೆ ಸತ್ಯವತಿಯು ತನಗೂ ತನ್ನ ತಾಯಿಗೂ ಗಂಡು ಮಕ್ಕಳಾಗಬೇಕೆಂದು ಕೇಳಿಕೊಂಡಳು.

ಋಚೀಕನು ಅವಳ ಪ್ರಾರ್ಥನೆಯನ್ನು ಮನ್ನಿಸಿ ಪುತ್ರಪ್ರಾಪ್ತಿಯ ಉದ್ದೇಶದಿಂದ ಹೋಮ ಮಾಡಿ ಎರಡು ಬೇರೆ ಬೇರೆ ಚರುಗಳನ್ನು ಸಿದ್ಧಮಾಡಿ ಒಂದನ್ನು ಹೆಂಡತಿಗೂ ಇನ್ನೊಂದನ್ನು ಅತ್ತೆಗೆಂದೂ ಹೇಳಿ ಕೊಟ್ಟನು. ಎರಡೂ ಚರುಗಳನ್ನು ಕೊಟ್ಟು ಋಚೀಕನು ವಿಶೇಷ ತಪೋನುಷ್ಠಾನಕ್ಕಾಗಿ ಆಶ್ರಮಾಂತರಕ್ಕೆ ತೆರಳಿದನು.

ಕೆಲ ದಿನಗಳ ನಂತರ ಗಾಧಿರಾಜನು ತೀರ್ಥಯಾತ್ರೆ ಮಾಡುತ್ತ ಪತ್ನಿಯೊಂದಿಗೆ ಋಚೀಕನ ಆಶ್ರಮಕ್ಕೆ ಬಂದನು. ಆಗ ಸತ್ಯವತಿಯು ತನ್ನ ಪತಿಯು ತಮ್ಮಿಬ್ಬರಿಗೂ ಸಿದ್ಧಪಡಿಸಿಟ್ಟ ಪುತ್ರಪ್ರಾಪಕ ಚರುಗಳ ಸಮಾಚಾರವನ್ನು ತಿಳಿಸಿದಳು. ಅಳಿಯನು ನನಗಿಂತ ತನಗೆ ಶ್ರೇಷ್ಠ ಮಗನು ಜನಿಸಬೇಕೆಂದು ಒಳ್ಳೆ ಚರುವನ್ನು ತನ್ನ ಹೆಂಡತಿಗೂ ಸಾಮಾನ್ಯ ಚರುವನ್ನು ನನಗೂ ಸಿದ್ಧಪಡಿಸಿ ಇಟ್ಟಿರಬಹುದೆಂದು ಭಾವಿಸಿ ಆ ಚರುಗಳನ್ನು ಅದಲು ಬದಲು ಮಾಡಿ ಭಕ್ಷಣ ಮಾಡಿದರು.

ಮುಂದೆ ಕೆಲದಿನಗಳ ಮೇಲೆ ಋಚೀಕನು ತನ್ನ ವಿಶೇಷಾನುಷ್ಠಾನವನ್ನು ಮುಗಿಸಿ ಆಶ್ರಮಕ್ಕೆ ಮರಳಿದಾಗ ಹೆಂಡತಿಯ ಮುಖವನ್ನು ನೋಡಿ ಆಶ್ಚರ್ಯವಾಯಿತು. ಗರ್ಭಿಣಿಯಾದ ಅವಳ ಮುಖದ ಮೇಲೆ ಉಗ್ರಕಾಂತಿಯು ಉಕ್ಕುತ್ತಿತ್ತು. ಅದನ್ನು ನೋಡಿ ಅವನು 'ಸತ್ಯವತಿ, ನೀನು ನಿನ್ನ ತಾಯಿಗೆ ಕೊಟ್ಟ ಚರುವನ್ನು ತಿಂದು, ನಿನ್ನ ಚರುವನ್ನು ಅವಳಿಗೆ ಕೊಟ್ಟಂತೆ ತೋರುತ್ತದೆ. ನಾನು ಬ್ರಾಹ್ಮಣಿಯಾದ ನಿನಗೆ ಒಬ್ಬ ಶಾಂತ ವೃತ್ತಿಯ ಬ್ರಹ್ಮಜ್ಞಾನಿ ಮಗನು ಹುಟ್ಟಬೇಕೆಂದೂ, ಕ್ಷತ್ರಿಯಳಾದ ನಿನ್ನ ತಾಯಿಗೆ ಉಗ್ರವೀರ್ಯನಾದ ಚಂಡ ಪರಾಕ್ರಮಿ ಕ್ಷತ್ರಿಯ ಕುಮಾರನು ಜನಿಸಬೇಕೆಂದು ಸಂಕಲ್ಪ ಮಾಡಿ ಬೇರೆ ಬೇರೆ ಚರುಗಳನ್ನು ಅಭಿಮಂತ್ರಣ ಮಾಡಿ ಕೊಟ್ಟಿದ್ದೆ. ನೀವಿಬ್ಬರೂ ತಾಯಿಮಕ್ಕಳು ಆ ಚರುಗಳನ್ನು ಅದಲು ಬದಲು ಮಾಡಿ ತಿಂದಿದ್ದರಿಂದ ಬ್ರಾಹ್ಮಣಿಯಾದ ನಿನ್ನ ಹೊಟ್ಟೆಯಿಂದ ಕ್ರೂರಕರ್ಮಿಯಾದ ವೀರಪುತ್ರನೂ ನಿನ್ನ ತಾಯಿಯ ಹೊಟ್ಟೆಯಿಂದ ಪಂಡಿತ ಪ್ರವರನಾದ ಬ್ರಹ್ಮರ್ಷಿಯೂ ಹುಟ್ಟುವರು' ಎಂದು ಹೇಳಿದನು.

ಅದನ್ನು ಕೇಳಿ ಸತ್ಯವತಿಗೆ ಪಶ್ಚಾತ್ತಾಪವಾಗಿ ಅವಳು ಪತಿಯ ಪಾದಕ್ಕೆ ಎರಗಿ ದೈನ್ಯದಿಂದ, 'ಸ್ವಾಮಿ, ದಯಮಾಡಿ ನನ್ನ ಮಗನು ಕ್ರೂರವೀರ ಕ್ಷತ್ರಿಯನಂತಾಗದೆ ಪ್ರಶಾಂತ ತಪೋಧನನಾಗಲಿ' ಎಂದು ಬೇಡಿಕೊಂಡಳು. ಅವಳ ಮಗನು ಋಚೀಕನ ಮಗನೂ ಅಲ್ಲವೇ! ಅವನಿಗೂ ತನ್ನ ಮಗನು ಚಂಡ ಪರಾಕ್ರಮಿಯಾಗಿ ಕ್ಷತ್ರಿಯನಂತೆ ಕಠೋರ ಕೃತ್ಯಗಳನ್ನು ಮಾಡುವದು ಬೇಕಿರಲಿಲ್ಲ. ಆದುದರಿಂದ ಅವನು ತನ್ನ ಮಡದಿಯನ್ನು ಸಂತೈಸುತ್ತ 'ಪ್ರಿಯೆ, ಗಾಬರಿಯಾಗಬೇಡ, ನಿನ್ನ ಬಯಕೆಯಂತೆ ನಿನ್ನ ಮಗನು ಶಾಂತಮೂರ್ತಿಯಾದ ತಪೋಧನನಾಗುವಂತೆ ಮಾಡುವೆ. ಆದರೆ

ನಿನ್ನ ಮೊಮ್ಮಗನು ಮಾತ್ರ ನೀನು ಭಕ್ಷಣ ಮಾಡಿದ ಕ್ಷತ್ರಿಯಚರುವಿನ ಪ್ರಭಾವದಿಂದ ಉಗ್ರಪೌರುಷವುಳ್ಳ ವೀರ ಬ್ರಾಹ್ಮಣನನಾಗಿ ಕ್ರೂರ ಕರ್ಮವನ್ನು ಮಾಡುವವನಾಗುವನು' ಎಂದು ತಿಳಿಸಿದನು. ಅದಕ್ಕೆ ಸತ್ಯವತಿಯು 'ಮೊಮ್ಮಗನದೇನಾದರೂ ಆಗಲಿ. ತನ್ನ ಮಗನು ಮಾತ್ರ ತನ್ನ ಗಂಡನಂತೆ ಬ್ರಹ್ಮಜ್ಞಾನಿಯಾದ ತಾಪಸ ಶ್ರೇಷ್ಠನಾದರೆ ಸಾಕು' ಎಂದಂದು ಸಮಾಧಾನ ಮಾಡಿಕೊಂಡಳು. ಋಚೀಕನ ಹೇಳಿಕೆಯಂತೆ ಅವಳ ಹೊಟ್ಟೆಯಿಂದ ಶಾಂತಮೂರ್ತಿಯಾದ ಜಮದಗ್ನಿ ಋಷಿಯು ಜನಿಸಿದನು. ಆದರೆ ಮೊಮ್ಮಗನಾದ ಪರಶುರಾಮನು ಮಾತ್ರ ಉಗ್ರಸ್ವಭಾವದವನಾಗಿ ಕ್ಷತ್ರಿಯಾಂತಕನಾದನು.

ಅತ್ತ ಅವಳ ತಾಯಿಯು ಮಗಳಿಗಾಗಿ ತಯಾರಿಸಿ ಇಟ್ಟ ಬ್ರಾಹ್ಮಚರುವನ್ನು ಭಕ್ಷಿಸಿದ್ದರಿಂದ ಅವಳ ಹೊಟ್ಟೆಯಿಂದ ಜನಿಸಿದ ಮಗನು ತಪಸ್ಸನ್ನು ಮಾಡಿ ಮುಂದೆ ವಿಶ್ವಾಮಿತ್ರ ಎಂಬ ಮಹರ್ಷಿಯಾದನು. ಅನಂತರ ಸತ್ಯವತಿಯು ಕೌಶಿಕೀ ಎಂಬ ನದಿಯಾಗಿ ಹರಿದಳು.

ಸಾಲ್ವ ದೇಶದ ಅಧಿಪತಿಯಾದ ದ್ಯುತಿಮಂತನು ತನ್ನ ಸಾಮ್ರಾಜ್ಯವನ್ನೆಲ್ಲ ಗುರುಭಕ್ತಿಯಿಂದ ಋಚೀಕ ಋಷಿಗೆ ಅರ್ಪಣ ಮಾಡಿಬಿಟ್ಟನು. ಆದರೆ ವಿರಕ್ತನಾದ ಆ ಮುನಿಯು ಅದನ್ನು ಇಟ್ಟುಕೊಳ್ಳದೇ ಮತ್ತೆ ಕ್ಷತ್ರಿಯರಿಗೇ ಒಪ್ಪಿಸಿಬಿಟ್ಟನು. ಋಚೀಕ ಮುನಿಯು ಭೃಗುತುಂದ ಪರ್ವತದಲ್ಲಿ ನಿಂತು ಉಗ್ರತಪಸ್ಸನ್ನು ಆಚರಿಸಿದ್ದರಿಂದ ಶ್ರೀಹರಿಯು ಅವನಿಗೆ ಪ್ರಸನ್ನನಾಗಿ ಪ್ರತ್ಯಕ್ಷನಾಗಿ 'ಬೇಕಾದ ವರ ಬೇಡು' ಎಂದು ಹೇಳಿದನು. ಅದಕ್ಕೆ ಋಚೀಕನು 'ನಿನ್ನ ಅನುಗ್ರಹವೊಂದೇ ನನಗೆ ಬೇಕು' ಎಂದು ಹೇಳಿದನು. ಆಗ ವಿಷ್ಣುವು ಋಚೀಕನ ಕೈಯಲ್ಲಿ ತನ್ನ ವೈಷ್ಣವ ಧನುಸ್ಸನ್ನು ಕೊಟ್ಟನು. ಸ್ವಯಂ ಋಚೀಕನು ಧನುರ್ವಿದ್ಯೆಯಲ್ಲಿ ಮಹಾಪ್ರವೀಣನಿದ್ದರೂ ಶಾಂತಮೂರ್ತಿಯಾದ ಅವನು ಎಂದೂ ಅದರ ಉಪಯೋಗವನ್ನು ತನ್ನ ಸ್ವಾರ್ಥಕ್ಕಾಗಿ ಮಾಡಿಕೊಳ್ಳಲಿಲ್ಲ. ಹರಿ ಕೊಟ್ಟ ಧನುಸ್ಸನ್ನು ಅವನು ತನ್ನ ಮಗ ಜಮದಗ್ನಿಗೂ ಅವನು ಪರಶುರಾಮನಿಗೂ ಒಪ್ಪಿಸಿದನು. ಇವನ ಮನೆತನದ ಋಷಿಗಳಿಗೆ ಆರ್ಚಿಕರು ಎಂದು ಹೆಸರಾಯಿತು.

★ ★ ★ ★

# ಮಹರ್ಷಿ ಶರಭಂಗ

ದಂಡಕಾರಣ್ಯದ ದಾಕ್ಷಿಣಾತ್ಯ ಋಷಿಗಳ ತಪಃಪ್ರಭಾವ, ತ್ಯಾಗ, ವಿರಾಗ, ವೈಚಿತ್ರ್ಯಗಳ ಅನುಭವವು ರಾಮಲಕ್ಷ್ಮಣರಿಗೆ ಮೊದಲು ಬಂದದ್ದು ಶರಭಂಗನಿಂದ. ಆ ಋಷಿಯ ಪುಣ್ಯಾಶ್ರಮದ ದೂರಾದ್ದರ್ಶನವೇ ಅವರಿಗೆ ಅತ್ಯಂತ ಆಶ್ಚರ್ಯವನ್ನುಂಟು ಮಾಡಿತು. ಆ ಶರಭಂಗಋಷಿಯ ಆಶ್ರಮದ ಹೊರಬಾಗಿಲ ಹತ್ತಿರ ಮೇಲುಗಡೆ ಒಂದು ದಿವ್ಯವಾದ ರಥವು ನಿಂತಿದ್ದು ಅದರ ಗಾಲಿಗಳು ಅಂತರಾಳದಲ್ಲಿಯೇ ನಿಂತಿದ್ದವು. ಅದಕ್ಕೆ ಹೂಡಿದ ಹಸಿರು ಬಣ್ಣದ ಕುದುರೆಗಳು ಕೂಡ ನೆಲಕ್ಕೆ ಕಾಲೂರಿದ್ದಿಲ್ಲ. ಚಂದ್ರನ ಮರಿಯಂತಿದ್ದ ಒಂದು ಛತ್ರ ಹಾಗೂ ಬಂಗಾರ ಹಿಡಿಕೆಯುಳ್ಳ ಚಾಮರಗಳು ಆಧಾರವಿಲ್ಲದೇ ಅಂತರಿಕ್ಷದಲ್ಲಿ ತಾವಾಗಿಯೇ ತೂಗುತ್ತಿದ್ದವು. ಈ ವಿಚಿತ್ರದೃಶ್ಯವನ್ನು ಕಂಡು ಕೌತುಕದ ಕೊನೆಯೇರಿದ ಲಕ್ಷ್ಮಣನಿಗೆ ಸರ್ವಜ್ಞಮೂರ್ತಿಯಾದ ಶ್ರೀರಾಮನು ತಿಳಿಹೇಳುತ್ತ ''ಲಕ್ಷ್ಮಣ! ಇದು ಇಂದ್ರದೇವರ ಸ್ವರ್ಗೀಯ ರಥವಿದ್ದು ಸ್ವಯಂ ಇಂದ್ರದೇವನು ಆಶ್ರಮದ ಒಳಗೆ ಮಹರ್ಷಿಗಳೊಡನೆ ಮಾತನಾಡುತ್ತಿದ್ದಾನೆ. ಹೊರಗೆ ಮಣ್ಣಿಗೆ ಕಾಲು ಹಚ್ಚದೆ ಆಕಾಶದಲ್ಲಿಯೇ ನಿಂತುಕೊಂಡ ದಿವ್ಯಹಾರಾಂಬರಗಳನ್ನು ಧರಿಸಿದ ಈ ತೇಜಸ್ವೀ ಪುರುಷರೆಲ್ಲರೂ ದೇವದೂತರು. ಈ ದಂಡಕಾರಣ್ಯದ ಮಹರ್ಷಿಯ ಮಹಾಮಹಿಮೆಯನ್ನು ನೋಡಿದಿಯಾ? ಎಂದು ಅಚ್ಚರಿಬಿಟ್ಟು ಕೇಳಿದನು.

ಇತ್ತ ಶಚೀಪತಿಯು ಶರಭಂಗರೊಡನೆ ಮಾತನಾಡಿ ಶ್ರೀರಾಮನು ಬರಲಿರುವನೆಂದು ಋಷಿಗಳಿಗೆ ತಿಳಿಸಿ ರಾಮನಿಗೆ ದೂರಿಂದಲೇ ವಂದಿಸಿ ರಥಾರೂಢನಾಗಿ ಸ್ವರ್ಗಕ್ಕೆ ಹೋದನು. ಅವನು ಹೋದ ಬಳಿಕ ಸೀತಾ ರಾಮಲಕ್ಷ್ಮಣರು ಆಶ್ರಮದಲ್ಲಿ ಪ್ರವೇಶಿಸಿ ಮಹರ್ಷಿಗಳ ಪಾದಾಭಿವಂದನೆ ಮಾಡಿ ಇಂದ್ರನು ಬಂದದ್ದೇಕೆಂದು ಕೇಳಿದರು. ಅದಕ್ಕೆ ಶರಭಂಗರು ಶಾಂತ ರೀತಿಯಲ್ಲಿ ''ಇಂದ್ರನು ನನ್ನನ್ನು ನನ್ನ ಘೋರತಪಸ್ಸಿನಿಂದ ನಾನು ಸಂಪಾದಿಸಿದ ಬ್ರಹ್ಮಲೋಕಕ್ಕೆ ಕರೆದೊಯ್ಯಬೇಕೆಂದು ಬಂದಿದ್ದನು. ಅದಕ್ಕಾಗಿ ತನ್ನ ದಿವ್ಯವಾದ ದೇವರಥವನ್ನು ಕೂಡ ತಂದಿದ್ದನು. ಆದರೆ ದೇವಪೂಜ್ಯನಾದ ನೀನು ಇಷ್ಟರಲ್ಲಿಯೇ ಇಲ್ಲಿಗೆ

ಬರಲಿರುವಿ ಎಂದು ತಿಳಿದ ನಾನು ನಿನ್ನ ದರ್ಶನವನ್ನು ತೆಗೆದುಕೊಳ್ಳದೇ ಎಲ್ಲಿಗೂ ಬರುವುದಿಲ್ಲವೆಂದು ಹೇಳಿದೆ. ಜಗತ್ಪ್ರಭುವಾದ ರಾಮಚಂದ್ರನೇ! ನಾನು ಇಷ್ಟು ದಿನ ಕಠಿಣವಾದ ತಪೋನುಷ್ಠಾನಗಳಿಂದ ಅನೇಕ ಪುಣ್ಯಲೋಕಗಳನ್ನು ಗಳಿಸಿದ್ದೇನೆ. ಅವೆಲ್ಲವುಗಳನ್ನೂ ನಿನ್ನ ಅಡಿದಾವರೆಗಳಲ್ಲಿ ಅರ್ಪಿಸುತ್ತಲಿದ್ದೇನೆ. ಅವುಗಳನ್ನು ಸ್ವೀಕರಿಸಿ ನೀನು ನನ್ನನ್ನು ಅನುಗ್ರಹಿಸಬೇಕು'' ಎಂದು ಬಿನ್ನವಿಸಿದರು. ತನ್ನ ಹಡೆದ ತಂದೆತಾಯಿಗಳು ಮನೆಬಿಟ್ಟು ಹೊರಗೆ ಹಾಕಿದರೂ ದೂರದ ದಂಡಕಾರಣ್ಯದ ಎಲೆಮನೆಯಲ್ಲಿರುವ ಒಬ್ಬ ಋಷಿ ಇಂದು ತನ್ನ ಸರ್ವಸ್ವವನ್ನೂ ತನಗೆ ಸಮರ್ಪಿಸುತ್ತಿರುವದನ್ನು ನೋಡಿ ರಾಮನಿಗೆ ಅಭಿಮಾನವೆನಿಸಿತು.

ಅವನು ಆ ಮಹರ್ಷಿಗೆ ನಮ್ಮ ತಂದೆಯ ಆಜ್ಞೆಯನ್ನು ಪಾಲಿಸಲಿಕ್ಕಾಗಿ ಹದಿನಾಲ್ಕು ವರ್ಷ ಈ ವನವಾಸದಲ್ಲಿಯೇ ಇರಬೇಕಾಗಿದೆಯೆಂದು ತಿಳಿಸಿ ಆ ಮಹರ್ಷಿಗೆ ತನಗೆ ಮಾಡಿದ ಸಮರ್ಪಣದ ಪುಣ್ಯಫಲಗಳನ್ನು ಪ್ರದಾನಮಾಡಿದನು.

ಮುಂದೆ ಮಹಾಪ್ರಾಜ್ಞರಾದ ಆ ಶರಭಂಗಮಹರ್ಷಿಗಳು ಆ ಭಗವಂತನೆದುರಿಗೇ ವಿಧಿಪೂರ್ವಕ ಚಿತೆಯನ್ನು ನಿರ್ಮಿಸಿ ಆ ದೇವದೇವೋತ್ತಮನನ್ನು ಕಣ್ಣಿನಿಂದ ನೋಡುತ್ತಲೇ ವೃದ್ಧಾಪ್ಯದಿಂದ ಧರ್ಮಕರ್ಮಗಳನ್ನು ಮಾಡಲಿಕ್ಕೆ ಬಾರದ ತಮ್ಮ ಜೀರ್ಣ ಶರೀರವನ್ನು ಆ ಅಗ್ನಿಯಲ್ಲಿ ವಿಸರ್ಜನೆಮಾಡಿದರು. ಮತ್ತು ಶ್ರೀರಾಮನ ಅನುಗ್ರಹದಿಂದ ಅವನು ನೋಡುತ್ತಿರುವಂತೆಯೇ ದಿವ್ಯದೇಹ ಧಾರಣ ಮಾಡಿಕೊಂಡು ಬ್ರಹ್ಮಲೋಕಕ್ಕೆ ಪ್ರಯಾಣ ಮಾಡಿದರು.

★ ★ ★ ★

## ಋಷ್ಯಶೃಂಗ

ಕಾಶ್ಯಪ ವಿಭಾಂಡಕ ಮುನಿಯು ಗಂಗೆಗೆ ಸ್ನಾನಕ್ಕೆಂದು ಹೋದಾಗ ಸುರಪುರದ ದೇವಗಣಿಕೆಯಾದ ಊರ್ವಶಿಯೂ ಅಲ್ಲಿಗೆ ಜಲವಿಹಾರಕ್ಕೆಂದು ಬಂದಿದ್ದಳು. ಇವನು ನೀರಿಗಿಳಿದಾಗ ಅವಳು ತೀರಕ್ಕೆ ಬಂದು ತನ್ನ ಆದ್ರ ಬಟ್ಟೆ ಬಿಟ್ಟು ದಂಡೆಯ ಮೇಲಿಟ್ಟ ದುಕೂಲವನ್ನು ಧರಿಸಿದಳು. ಗಂಗೆಯಲ್ಲಿ ಮೀಯತ್ತಲಿದ್ದ ಮಹರ್ಷಿಯ

ಕಣ್ಣು ಆ ಸಗ್ಗವೆಣ್ಣಿನ ಅಂಗಾಂಗಗಳನ್ನು ಬಳಸಿ ಅನಂಗ ವಿಕಾರಕ್ಕೆ ಅವಕಾಶ ನೀಡಿತು. ಆ ನಿಂತ ನೀರಲ್ಲಿಯೇ ಅವನ ಸಂಯಮದ ಕಟ್ಟು ಸಡಿಲಾಗಿ ಇಂದ್ರಿಯ ಶೈಥಿಲ್ಯವುಂಟಾಯಿತು. ಋಷಿಯ ಶಕ್ತಿಯು ನೀರುಪಾಲಾಯಿತು.

ಅದೇ ವೇಳೆಯಲ್ಲಿ ಶಾಪದಿಂದ ಚಿಗರೆಯಾದ ದೇವಕನ್ನೆಯೊಬ್ಬಳು ತನ್ನ ಹರಿಣೀ ರೂಪದಿಂದ ನೀರು ಕುಡಿಯಲಿಕ್ಕೆಂದು ಗಂಗಾ ತೀರಕ್ಕೆ ಬಂದಳು. ನೀರಿನ ಜೊತೆಗೆ ವಿಭಾಂಡಕ ಋಷಿಯ ಕರಗಿ ನೀರಾದ ಪ್ರೇಮದ್ರವವೂ ಆ ಎರಳೆಯ ಗಂಟಲಿಗಿಳಿಯಿತು. ಅದರಿಂದ ಆ ಹರಿಣಾಂಗನೆಯು ಗರ್ಭಿಣಿಯಾಗಿ ಗಂಡು ಮಗುವೊಂದನ್ನು ಹೆತ್ತು ಜನ್ಮ ನೀಗಿತು.

ಹುಟ್ಟಿದ ಆ ಹರಿಣ ಕುಮಾರನಿಗೆ ಪೂರ್ಣಮಾನವರ ಆಕಾರವಿದ್ದು ತಲೆಯ ಮೇಲೆ ಮಾತ್ರ ಎರಡು ಬದಿ ಕೋಡಿನಂತೆ ಉಬ್ಬಿದ್ದು ಕಂಡುಬರುತ್ತಿತ್ತು. ಅದರಿಂದ ಅವನಿಗೆ ಋಷ್ಯಶೃಂಗ ಎಂದು ಹೆಸರಾಯಿತು.

ತಾಯಿಯಿಲ್ಲದ ತಬ್ಬಲಿಯಾದ ಆ ಅನಾಥ ಮಗುವನ್ನು ವಿಭಾಂಡಕರೇ ತಮ್ಮ ಆಶ್ರಮಕ್ಕೆ ತಂದು ಬೆಳೆಸಿದರು. ಅವನಿಗೆ ವೇದವೇದಾಂತ ವಿದ್ಯೆಗಳನ್ನೆಲ್ಲ ಕಲಿಸಿದರು. ಎಳೆ ಬುದ್ಧಿಯ ಋಷ್ಯಶೃಂಗನಿಗೆ ಇಪ್ಪತ್ತರ ಎಳೆವಯದಲ್ಲಿ ಎಪ್ಪತ್ತು ವರ್ಷದ ಋಷಿಮುನಿಗಳಿಗೆ ಬರುವಷ್ಟು ವೇದಶಾಸ್ತ್ರಗಳ ಜ್ಞಾನ ಬಂದಿತ್ತು.

ಆದರೆ ಅವನು ಜಾತ್ಯಾ ಚಿಗರೆಯ ಹೊಟ್ಟೆಯಿಂದ ಹುಟ್ಟಿದ್ದರಿಂದ ಅಂಜುಗುಳಿಯಾಗಿ ಎಲ್ಲದಕ್ಕೂ ಹೆದರಿ ಬೆದರುವ ಸ್ವಭಾವದವನಾಗಿದ್ದನು. ವಿಭಾಂಡಕನು ತಾನು ಊರ್ವಶಿಯನ್ನು ಕಂಡೇ ವಿದ್ರುತನಾದಂತೆ ತನ್ನ ಮಗನೂ ಆಗಬಾರದು. ಊರ್ಧ್ವ ರೇತಸ್ಕನಾಗಬೇಕೆಂಬ ಹೆಬ್ಬಯಕೆಯಿಂದ ಹೆಣ್ಣನ್ನು ಅವನ ಕಣ್ಣಿಗೇ ತೋರಿಸಿರಲಿಲ್ಲ. ಇಪ್ಪತ್ತು ವರ್ಷದ ಪ್ರಾಯಪ್ರಬುದ್ಧನಾದರೂ ಅವನಿಗೆ ಸರ್ವವೇದಶಾಸ್ತ್ರಗಳೆಲ್ಲ ತಿಳಿದಿದ್ದರೂ ಪುಲ್ಲಿಂಗದ ಹೊರತು ಸ್ತ್ರೀಲಿಂಗದ ವಸ್ತುಗಳ ಜ್ಞಾನವೇ ಆಗಿರಲಿಲ್ಲ.

ಆ ಕಾಲದಲ್ಲಿ ಅಂಗ ದೇಶದಲ್ಲಿ ಲೋಮಪಾದನೆಂಬ ರಾಜನು ರಾಜ್ಯವನ್ನಾಳುತ್ತಿದ್ದನು. ಅವನ ದೇಶದಲ್ಲಿ ಮಳೆಯಾಗದೇ ಭೀಕರ ಬರಗಾರ

ಬರಲಿರುವಿ ಎಂದು ತಿಳಿದ ನಾನು ನಿನ್ನ ದರ್ಶನವನ್ನು ತೆಗೆದುಕೊಳ್ಳದೇ ಎಲ್ಲಿಗೂ ಬರುವುದಿಲ್ಲವೆಂದು ಹೇಳಿದೆ. ಜಗತ್ಪ್ರಭುವಾದ ರಾಮಚಂದ್ರನೇ! ನಾನು ಇಷ್ಟುದಿನ ಕಠಿಣವಾದ ತಪೋನುಷ್ಠಾನಗಳಿಂದ ಅನೇಕ ಪುಣ್ಯಲೋಕಗಳನ್ನು ಗಳಿಸಿದ್ದೇನೆ. ಅವೆಲ್ಲವುಗಳನ್ನೂ ನಿನ್ನ ಅಡಿದಾವರೆಗಳಲ್ಲಿ ಅರ್ಪಿಸುತ್ತಲಿದ್ದೇನೆ. ಅವುಗಳನ್ನು ಸ್ವೀಕರಿಸಿ ನೀನು ನನ್ನನ್ನು ಅನುಗ್ರಹಿಸಬೇಕು'' ಎಂದು ಬಿನ್ನವಿಸಿದರು. ತನ್ನ ಹಡೆದ ತಂದೆತಾಯಿಗಳು ಮನೆಬಿಟ್ಟು ಹೊರಗೆ ಹಾಕಿದರೂ ದೂರದ ದಂಡಕಾರಣ್ಯದ ಎಲೆಮನೆಯಲ್ಲಿರುವ ಒಬ್ಬ ಋಷಿ ಇಂದು ತನ್ನ ಸರ್ವಸ್ವವನ್ನೂ ತನಗೆ ಸಮರ್ಪಿಸುತ್ತಿರುವದನ್ನು ನೋಡಿ ರಾಮನಿಗೆ ಅಭಿಮಾನವೆನಿಸಿತು.

ಅವನು ಆ ಮಹರ್ಷಿಗೆ ನಮ್ಮ ತಂದೆಯ ಆಜ್ಞೆಯನ್ನು ಪಾಲಿಸಲಿಕ್ಕಾಗಿ ಹದಿನಾಲ್ಕು ವರ್ಷ ಈ ವನವಾಸದಲ್ಲಿಯೇ ಇರಬೇಕಾಗಿದೆಯೆಂದು ತಿಳಿಸಿ ಆ ಮಹರ್ಷಿಗೆ ತನಗೆ ಮಾಡಿದ ಸಮರ್ಪಣದ ಪುಣ್ಯಫಲಗಳನ್ನು ಪ್ರದಾನಮಾಡಿದನು.

ಮುಂದೆ ಮಹಾಪ್ರಾಜ್ಞರಾದ ಆ ಶರಭಂಗಮಹರ್ಷಿಗಳು ಆ ಭಗವಂತನೆದುರಿಗೇ ವಿಧಿಪೂರ್ವಕ ಚಿತೆಯನ್ನು ನಿರ್ಮಿಸಿ ಆ ದೇವದೇವೋತ್ತಮನನ್ನು ಕಣ್ಣಿನಿಂದ ನೋಡುತ್ತಲೇ ವೃದ್ಧಾಪ್ಯದಿಂದ ಧರ್ಮಕರ್ಮಗಳನ್ನು ಮಾಡಲಿಕ್ಕೆ ಬಾರದ ತಮ್ಮ ಜೀರ್ಣ ಶರೀರವನ್ನು ಆ ಅಗ್ನಿಯಲ್ಲಿ ವಿಸರ್ಜನೆಮಾಡಿದರು. ಮತ್ತು ಶ್ರೀರಾಮನ ಅನುಗ್ರಹದಿಂದ ಅವನು ನೋಡುತ್ತಿರುವಂತೆಯೇ ದಿವ್ಯದೇಹ ಧಾರಣ ಮಾಡಿಕೊಂಡು ಬ್ರಹ್ಮಲೋಕಕ್ಕೆ ಪ್ರಯಾಣ ಮಾಡಿದರು.

★ ★ ★ ★

## ಋಷ್ಯಶೃಂಗ

ಕಾಶ್ಯಪ ವಿಭಾಂಡಕ ಮುನಿಯು ಗಂಗೆಗೆ ಸ್ನಾನಕ್ಕೆಂದು ಹೋದಾಗ ಸುರಪುರದ ದೇವಗಣಿಕೆಯಾದ ಊರ್ವಶಿಯೂ ಅಲ್ಲಿಗೆ ಜಲವಿಹಾರಕ್ಕೆಂದು ಬಂದಿದ್ದಳು. ಇವನು ನೀರಿಗಿಳಿದಾಗ ಅವಳು ತೀರಕ್ಕೆ ಬಂದು ತನ್ನ ಆದ್ರ ಬಟ್ಟೆ ಬಿಟ್ಟು ದಂಡೆಯ ಮೇಲಿಟ್ಟದುಕೂಲವನ್ನು ಧರಿಸಿದಳು. ಗಂಗೆಯಲ್ಲಿ ಮೀಯತ್ತಲಿದ್ದ ಮಹರ್ಷಿಯ

ಕಣ್ಣು ಆ ಸಗ್ಗವೆಣ್ಣಿನ ಅಂಗಾಂಗಗಳನ್ನು ಬಳಸಿ ಅನಂಗ ವಿಕಾರಕ್ಕೆ ಅವಕಾಶ ನೀಡಿತು. ಆ ನಿಂತ ನೀರಲ್ಲಿಯೇ ಅವನ ಸಂಯಮದ ಕಟ್ಟು ಸಡಿಲಾಗಿ ಇಂದ್ರಿಯ ಶೈಥಿಲ್ಯವುಂಟಾಯಿತು. ಋಷಿಯ ಶಕ್ತಿಯು ನೀರುಪಾಲಾಯಿತು.

ಆದೇ ವೇಳೆಯಲ್ಲಿ ಶಾಪದಿಂದ ಚಿಗರೆಯಾದ ದೇವಕನ್ನೆಯೊಬ್ಬಳು ತನ್ನ ಹರಿಣೀ ರೂಪದಿಂದ ನೀರು ಕುಡಿಯಲಿಕ್ಕೆಂದು ಗಂಗಾ ತೀರಕ್ಕೆ ಬಂದಳು. ನೀರಿನ ಜೊತೆಗೆ ವಿಭಾಂಡಕ ಋಷಿಯ ಕರಗಿ ನೀರಾದ ಪ್ರೇಮದ್ರವವೂ ಆ ಎರಳೆಯ ಗಂಟಲಿಗಿಳಿಯಿತು. ಆದರಿಂದ ಆ ಹರಿಣಾಂಗನೆಯು ಗರ್ಭಿಣಿಯಾಗಿ ಗಂಡು ಮಗುವೊಂದನ್ನು ಹೆತ್ತು ಜನ್ಮ ನೀಗಿತು.

ಹುಟ್ಟಿದ ಆ ಹರಿಣ ಕುಮಾರನಿಗೆ ಪೂರ್ಣಮಾನವರ ಆಕಾರವಿದ್ದು ತಲೆಯ ಮೇಲೆ ಮಾತ್ರ ಎರಡು ಬದಿ ಕೋಡಿನಂತೆ ಉಬ್ಬಿದ್ದು ಕಂಡುಬರುತ್ತಿತ್ತು. ಆದರಿಂದ ಅವನಿಗೆ ಋಷ್ಯಶೃಂಗ ಎಂದು ಹೆಸರಾಯಿತು.

ತಾಯಿಯಿಲ್ಲದ ತಬ್ಬಲಿಯಾದ ಆ ಅನಾಥ ಮಗುವನ್ನು ವಿಭಾಂಡಕರೇ ತಮ್ಮ ಆಶ್ರಮಕ್ಕೆ ತಂದು ಬೆಳೆಸಿದರು. ಅವನಿಗೆ ವೇದವೇದಾಂತ ವಿದ್ಯೆಗಳನ್ನೆಲ್ಲ ಕಲಿಸಿದರು. ಎಳೆ ಬುದ್ಧಿಯ ಋಷ್ಯಶೃಂಗನಿಗೆ ಇಪ್ಪತ್ತರ ಎಳೆವಯದಲ್ಲಿ ಎಪ್ಪತ್ತು ವರ್ಷದ ಋಷಿಮುನಿಗಳಿಗೆ ಬರುವಷ್ಟು ವೇದಶಾಸ್ತ್ರಗಳ ಜ್ಞಾನ ಬಂದಿತ್ತು.

ಆದರೆ ಅವನು ಜಾತ್ಯಾ ಚಿಗರೆಯ ಹೊಟ್ಟೆಯಿಂದ ಹುಟ್ಟಿದ್ದರಿಂದ ಅಂಜುಗುಳಿಯಾಗಿ ಎಲ್ಲದಕ್ಕೂ ಹೆದರಿ ಬೆದರುವ ಸ್ವಭಾವದವನಾಗಿದ್ದನು. ವಿಭಾಂಡಕನು ತಾನು ಊರ್ವಶಿಯನ್ನು ಕಂಡೇ ವಿದ್ರುತನಾದಂತೆ ತನ್ನ ಮಗನೂ ಆಗಬಾರದು. ಊರ್ಧ್ವ ರೇತಸ್ಕನಾಗಬೇಕೆಂಬ ಹೆಬ್ಬಯಕೆಯಿಂದ ಹೆಣ್ಣನ್ನು ಅವನ ಕಣ್ಣಿಗೇ ತೋರಿಸಿರಲಿಲ್ಲ. ಇಪ್ಪತ್ತು ವರ್ಷದ ಪ್ರಾಯಪ್ರಬುದ್ಧನಾದರೂ ಅವನಿಗೆ ಸರ್ವವೇದಶಾಸ್ತ್ರಗಳೆಲ್ಲ ತಿಳಿದಿದ್ದರೂ ಪುಲ್ಲಿಂಗದ ಹೊರತು ಸ್ತ್ರೀಲಿಂಗದ ವಸ್ತುಗಳ ಜ್ಞಾನವೇ ಆಗಿರಲಿಲ್ಲ.

ಆ ಕಾಲದಲ್ಲಿ ಅಂಗ ದೇಶದಲ್ಲಿ ಲೋಮಪಾದನೆಂಬ ರಾಜನು ರಾಜ್ಯವನ್ನಾಳುತ್ತಿದ್ದನು. ಅವನ ದೇಶದಲ್ಲಿ ಮಳೆಯಾಗದೇ ಭೀಕರ ಬರಗಾರ

ಬಂದಿತ್ತು. ಈ ಕ್ಷಾಮ ಪರಿಹಾರಕ್ಕೆ ಯಾವ ಉಪಾಯವೂ ಅಂಗದ ಅರಸನಿಗೆ ಹೊಳೆಯದಂತಾಗಿತ್ತು. ಆ ಅಂಗರಾಜನಿಗೂ ಅಯೋಧ್ಯೆಯ ಅರಸನಾದ ದಶರಥ ಮಹಾರಾಜನಿಗೂ ವಿಶೇಷ ಸಖ್ಯವಿದ್ದಿತು. ಅವರಿಬ್ಬರೂ ಕೂಡಿ ತಮ್ಮ ದೇಶದ ಅನಾವೃಷ್ಟಿಗೆ ಏನು ಕಾರಣವೆಂದು ತಪೋನಿಧಿಗಳನ್ನು ಕೇಳಿದರು.

ಅದಕ್ಕೆ ಅವರು ''ಮಹಾರಾಜ, ನೀನು ನಿನ್ನ ರಾಜ್ಯದಲ್ಲಿ ಕೆಲವು ಬ್ರಹ್ಮಜ್ಞಾನಿಗಳಿಗೆ ಅವಮಾನ ಮಾಡಿದ್ದರಿಂದ ನಿನ್ನ ನಾಡಿನಲ್ಲಿ ಮಳೆ ಇಲ್ಲದಾಗಿದೆ. ವಿಭಾಂಡಕ ಪುತ್ರನಾದ ಋಷ್ಯಶೃಂಗನನ್ನು ಇಲ್ಲಿ ಕರೆತಂದರೆ ನಿನ್ನ ರಾಜ್ಯದಲ್ಲಿ ಮಳೆ ಬೆಳೆಗಳ ಸಮೃದ್ಧಿಯಾಗುತ್ತದೆ'' ಎಂದು ತಿಳಿಸಿದರು.

ಆದರೆ ''ನೈಷ್ಠಿಕ ಬ್ರಹ್ಮಚಾರಿಯಾದ ಋಷ್ಯಶೃಂಗನನ್ನು ಇಲ್ಲಿಗೆ ತರುವದು ಹೇಗೆ? ಎಂಬ ಚಿಂತೆಯು ಲೋಮಪಾದನನ್ನು ಕಾಡುತ್ತಿತ್ತು. ಕೊನೆಗೆ ಅವನು ತನ್ನ ವೃದ್ಧ ಮಂತ್ರಿಯ ಸಲಹೆಯ ಮೇರೆಗೆ ಕೆಲವು ಚತುರ ಗಣಿಕೆಯರನ್ನು ವಿಭಾಂಡಕನ ಆಶ್ರಮಕ್ಕೆ ಕೊಟ್ಟು ಕಳಿಸಿದನು.

ವಿಭಾಂಡಕ ಮುನಿಯು ಆಶ್ರಮದಲ್ಲಿರದ ವೇಳೆಯಲ್ಲಿ ಆ ಬೆಲೆವೆಣ್ಣುಗಳು ಒಂದು ನೌಕೆಯಲ್ಲಿ ಕುಳಿತು ಋಷ್ಯಶೃಂಗನ ಆಶ್ರಮದ ಬಳಿಗೆ ಬಂದರು. ಅವರ ಸೂಚನೆಯಂತೆ ನೌಕೆಯಲ್ಲಿಯೇ ಒಂದು ಸುಂದರವಾದ ಆಶ್ರಮವನ್ನು ರಚಿಸಲಾಗಿತ್ತು. ಅವರನ್ನು ನೋಡಿದ ಋಷ್ಯಶೃಂಗನು ಎಂದೂ ಹೆಂಗಸರನ್ನೇ ಕಾಣದ್ದರಿಂದ ಅವರೆಲ್ಲರೂ ಋಷಿಕುಮಾರರೆಂದೇ ಭಾವಿಸಿದನು.

ಆ ಮುಗ್ದೆಯರು ಮಂದಹಾಸ ಬೀರುತ್ತ ಅವನಿದ್ದಲ್ಲಿ ಬಂದು ''ಮಿತ್ರ ಕ್ಷೇಮವೇ?'' ಎಂದು ಕುಶಲ ಪ್ರಶ್ನೆ ಮಾಡಿ ತಾವು ತಿಂದ ಮಧುಪರ್ಕ ಭಕ್ಷ್ಯ ಭೋಜ್ಯಗಳನ್ನು ನೀಡಿದರು.

ಋಷ್ಯಶೃಂಗನಾದರೂ ಅವರನ್ನು ಆನಂದದಿಂದ ಸ್ವಾಗತಿಸಿ ''ಮಿತ್ರರೇ ನೀವು ಯಾವ ಆಶ್ರಮದಿಂದ ಬಂದಿರಿ. ನಿಮ್ಮ ಮುಖದ ಮೇಲೆ ಕಾಂತಿಯನ್ನು ಕಂಡೇ ನನಗೆ ಆನಂದವಾಗಿದೆ. ಇಲ್ಲಿ ದರ್ಭಾಸನದಲ್ಲಿ ಕುಳಿತುಕೊಳ್ಳಿರಿ. ಈ ಕಂದಮೂಲ ಫಲಗಳನ್ನು ತಿನ್ನಿರಿ ನಿಮಗೆ ಪಾದ ಪೂಜೆಮಾಡುತ್ತೇನೆ ಬನ್ನಿರಿ'' ಎಂದು ಕರೆದು

ಉಪಚರಿಸಿದನು. ಆಗ ಆ ಬೆಡಗಿನ ಬೆಲೆವೆಣ್ಣುಗಳು ನಗೆ ಮುಗಗಳನ್ನು ಅರಳಿಸಿ ಕುಡಿನೋಟ ಬೀರಿ ''ಋಷಿಕುಮಾರ, ನಾವು ಪಾದಪೂಜೆ ಮಾಡಿಸಿಕೊಳ್ಳುವದಿಲ್ಲ. ನಮ್ಮಲ್ಲಿ ಮಿತ್ರರು ಸಂಧಿಸಿದಾಗ ಆಲಂಗಿಸಿಕೊಳ್ಳುವ ರೀತಿಯಿದೆ'' ಎಂದು ಹೇಳಿ ಋಷ್ಯಶೃಂಗನನ್ನು ಬಿಗಿದಪ್ಪಿ ತಾವು ತಂದ ರಸಭಕ್ಷ್ಯಗಳನ್ನು ಅವನಿಗೆ ತಿನಿಸಿದರು. ಅವನ ಮೈಮುಟ್ಟಿ ಕೈತಟ್ಟಿ ಆಡಿ ಹಾಡಿ ನಕ್ಕು ನಲಿದಾಡಿದರು. ಮತ್ತು ಚೆಂಡಾಡಿ ಕುಣಿದು ಮುದ್ದಾಡಿ ವಿಭಾಂಡಕನು ಬರುವ ಹೊತ್ತಾದ್ದರಿಂದ ''ಋಷಿಕುಮಾರ, ನಮ್ಮ ಅಗ್ನಿಹೋತ್ರದ ಹೊತ್ತಾಯಿತು. ನಾವಿನ್ನು ಬರುತ್ತೇವೆ'' ಎಂದು ಹೇಳಿ ರಂಬಿಸಿ ಅಲ್ಲಿಂದ ನಡೆದರು.

ಅವರು ಅಲ್ಲಿಂದ ತೆರಳಿದ ಬಳಿಕ ನಿಸರ್ಗವು ತನ್ನ ಕಾರ್ಯ ಮಾಡಲಾರಂಭಿಸಿತು. ಅವನಿಗೆ ತಿಳಿಯದೇ ಅವನು ಕಾಮವಿಕಾರಕ್ಕೆ ಒಳಗಾಗಿದ್ದ. ಮಂತ್ರ ಜಪ ಅಗ್ನಿಹೋತ್ರ ಎಲ್ಲ ಬಿಟ್ಟು ಅಲ್ಲಿಗೆ ಬಂದು ಹೋದ ಆ ಬಿಂಕದ ಸಿಂಗಾರಿಯರನ್ನೇ ನೆನೆಯುತ್ತ ಕುಳಿತುಬಿಟ್ಟ. ವನದಿಂದ ಮರಳಿ ಬಂದ ವಿಭಾಂಡಕನು ''ಹೀಗೇಕೆ ಕುಳಿತೆ'' ಎಂದು ಕೇಳಿದಾಗ ನೌಕಾಶ್ರಮದಲ್ಲಿ ಬಂದ ಆ 'ಋಷಿಕುಮಾರರ' ಸಮಾಚಾರ ತಿಳಿಸಿ ''ಅಪ್ಪ, ಆ ಋಷಿಕುಮಾರರು ಬಹಳೇ ಸುಂದರರಾಗಿದ್ದರು. ಅವರ ಜಡೆಗಳು ನಮ್ಮಂತೆ ಬಿರುಸಾಗದೇ ಮಿದುವಾಗಿಯೂ ಉದ್ದವಾಗಿಯೂ ಇದ್ದವು. ಅವುಗಳಿಂದ ಸುಗಂಧವಾಸನೆ ಬರುತ್ತಿತ್ತು. ಅವರು ಕೊರಳಲ್ಲಿ ಹಾಕಿದ ತುಳಸೀಮಾಲೆಗಳು ಥಳಥಳ ಹೊಳೆಯುತ್ತಿದ್ದವು. ಅವರ ಎದೆಯ ಮೇಲೆ ಎರಡು ಬಂಗಾರದ ಕಲಶಗಳನ್ನು ಕಟ್ಟಿಕೊಂಡಿದ್ದರು. ಅವರು ಉಟ್ಟ ನಾರುಮಡಿಗಳು ನಮಗಿಂತ ಮೆತ್ತಗಿದ್ದು ಅವರು ಮಾತನಾಡಿದರೆ ಕೋಗಿಲೆ ಕೂಗಿದಂತಾಗುತ್ತಿದೆ. ಅವರು ಉಚ್ಚರಿಸುವ ಮಂತ್ರಗಳು ಬಹಳೇ ಇಂಪಾಗಿದ್ದವು. ಹೆಜ್ಜೆಯಿಟ್ಟರೆ ಹಂಸಗಳು ಗೆಜ್ಜೆ ಕಟ್ಟಿ ಕುಣಿದಂತಾಗುತ್ತಿತ್ತು. ಅವರೊಂದು ಬಿರುಸಾದ ಹಣ್ಣನ್ನು ಆಡಲಿಕ್ಕೆ ತಂದಿದ್ದರು. ಅದು ನೆಲಕ್ಕೆ ಒಗೆದರೆ ಮತ್ತೆ ಪುಟಿದು ಅವರು ಬಳಿಗೇ ಬರುತ್ತಿತ್ತು. ಅದನ್ನು ಮತ್ತೆ ಮತ್ತೆ ಅಂಗೈಯಿಂದ ಬಡಿದು ಅವರು ನನ್ನೊಡನೆಯೂ ಆಟವಾಡಿದರು. ಅವರು ಕೊಟ್ಟ ಕಂದಮೂಲ ಫಲಗಳು ಒಳ್ಳೇ ರುಚಿಕಟ್ಟಾಗಿದ್ದವು. ನಾನು ಅಂಥ ಸವಿ ಸವಿಯಾದ ಕಂದಮೂಲಗಳನ್ನೆ ತಿಂದಿಲ್ಲ. ಅವರು ಕುಡಿಯಲಿಕ್ಕೆ ಕೊಟ್ಟ ನೀರಂತೂ

ಸುಗಂಧದಿಂದ ಸ್ವಾದಿಷ್ಠವಾಗಿತ್ತು ಅದನ್ನು ಕುಡಿದ ಕೂಡಲೇ ನನಗೆ ಮೈಯಲ್ಲ ಆನಂದದಿಂದ ತೂಗಾಡಿದಂತಾಯಿತು. ದೇವಪುತ್ರರಂತಿದ್ದ ಅವರ ಸುಂದರ ಶರೀರ, ಮಧುರ ಮಂದಹಾಸಗಳನ್ನು ನೋಡಿ ಬಹಳ ಪ್ರೀತಿಯಾಯಿತು. ಅವರು ಹೋಗುವಾಗ ನನ್ನನ್ನು ಮತ್ತೆ ಮತ್ತೆ ಬಿಗಿದಪ್ಪಿ ನನ್ನ ಜಡೆಯಲ್ಲಿ ಬೆರಳಾಡಿಸಿ ಮುಖಕ್ಕೆ ಮುಖವಿಟ್ಟು "ಮಿತ್ರ ಬರುತ್ತೇವೆ" ಎಂದು ಮಧುರವಾಗಿ ಮಾತನಾಡಿ ಹೋದರು. ಮತ್ತೆ ಮತ್ತೆ ನನಗೆ ಅವರ ಬಳಿಗೇ ಹೋಗಬೇಕು. ಅವರನ್ನೇ ನೋಡಬೇಕು. ಅವರ ಜೊತೆಗೆ ಆಡಬೇಕು ಕೂಡಬೇಕು ಎನಿಸುತ್ತದೆ. ಅವರನ್ನು ಬಿಟ್ಟಿರುವದೇ ನನಗೆ ಅಸಾಧ್ಯವಾಗಿದೆ. ಯಾವ ಕಾರ್ಯಕ್ಕೂ ನನಗೆ ಮನಸ್ಸೇ ಬಾರದಾಗಿದೆ" ಎಂದು ಮುಗ್ಧನಾದ ಋಷ್ಯಶೃಂಗನು ಯಾವದನ್ನೂ ಬಿಚ್ಚಿಡದೇ ಎಲ್ಲವನ್ನೂ ಹೇಳಿದನು. ಅದನ್ನು ಕೇಳಿ ವಿಭಾಂಡಕನಿಗೆ ಎಲ್ಲವೂ ಅರ್ಥವಾಗಿ "ಹೆಣ್ಣನ್ನು ಈವರೆಗೆ ಅವನ ಕಣ್ಣಿಗೆ ಹಾಕದೇ ಅವನನ್ನು ಊರ್ಧ್ವರೇತಸ್ಕನಾದ ನೈಷ್ಠಿಕ ಬ್ರಹ್ಮಚಾರಿಯನ್ನಾಗಿ ಮಾಡಬೇಕೆಂಬ" ತನ್ನ ಹಂಚಿಕೆಯೆಲ್ಲ ಮಣ್ಣುಗೂಡಿದಂತಾಯಿತು ಎಂದೆನ್ನಿಸಿತು. ನಿಸರ್ಗದ ಆಕರ್ಷಣೆಯ ಪ್ರಾಬಲ್ಯವನ್ನು ಗುರುತಿಸಿದ ವಿಭಾಂಡಕನು ತನ್ನ ಮಗನನ್ನು ಸಂತೈಸಿ, "ಮಗು, ಅವರು ಋಷಿಕುಮಾರರಲ್ಲ, ರಾಕ್ಷಸರು. ನಿನ್ನನ್ನು ವಂಚಿಸಲಿಕ್ಕೆ ಅವರು ಹಂಚಿಕೆ ಮಾಡಿ ತಮ್ಮ ಮಾಯೆಯಿಂದ ಇಂಥ ಮೋಹಕ ರೂಪವನ್ನು ತೆಗೆದುಕೊಂಡು ಬಂದಿರುತ್ತಾರೆ. ನೀನಿನ್ನು ಎಂದಿಗೂ ಅವರ ಜೊತೆಗೆ ಸ್ನೇಹ ಮಾಡಬೇಡ. ಅವರು ಕೊಟ್ಟ ಹಣ್ಣು ತಣ್ಣೀರು ಭಕ್ಷ್ಯಗಳನ್ನು ಕೂಡ ಮುಟ್ಟಬೇಡ" ಎಂದು ಎಚ್ಚರಿಕೆ ಇತ್ತರು. ಆದರೂ ಋಷ್ಯಶೃಂಗನಿಗೆ ಅವರ ಧ್ಯಾನ ಕಡಿಮೆಯಾಗಲಿಲ್ಲ.

ಮತ್ತೊಂದು ದಿನ ವಿಭಾಂಡಕ ಋಷಿಯು ಬೇರೆ ವನಕ್ಕೆ ಸಮಿಧೆ ದರ್ಭೆ ಹೂ ತುಳಸಿ ತರಲಿಕ್ಕಾಗಿ ಆಶ್ರಮಬಿಟ್ಟು ಹೋದಾಗ ಆ ಬೆಡಗಿನ ಬಿನ್ನಾಣಗಿತ್ತಿಯರು ನೌಕೆಯಲ್ಲಿ ಕುಳಿತು ಋಷ್ಯಶೃಂಗನ ಆಶ್ರಮಕ್ಕೆ ಸೆಳೆಮಿಂಚುಗಳಂತೆ ಬಂದಿಳಿದರು. ಈ ಸಲ ಋಷ್ಯಶೃಂಗನೇ ಮುಂದಾಗಿ ಅವರನ್ನು ಆಲಿಂಗಿಸಿಕೊಂಡು "ಮಿತ್ರರೇ, ನೀವು ಇಲ್ಲಿ ಬರುವದರೊಳಗಾಗಿ ನಾನೇ ನಿಮ್ಮ ಆಶ್ರಮಕ್ಕೆ ಬರುತ್ತೇನೆ. ನಿಮ್ಮ ಆಶ್ರಮದಲ್ಲಿಯೇ ಇಂದು ಆಟ, ತಿನ್ನುವದು ಕುಡಿಯುವುದನ್ನು ಮಾಡೋಣ

ಎಂದು ಹೇಳಿದನು. ಅದಕ್ಕೆ ಆ ವಾರ ವನಿತೆಯರು ಆನಂದದಿಂದ ಸಮ್ಮತಿಸಿ ಆ ಋಷಿಕುಮಾರನನ್ನು ನಾವೆಯಲ್ಲಿ ಕೂಡಿಸಿಕೊಂಡು ಹಾಡುತ್ತ ಪಾಡುತ್ತ ಹೊರಟರು. ತಮ್ಮ ಕುಣಿತ, ಮಣಿತ, ಸಂಗೀತ ಸರಸಾಲಾಪಗಳಿಂದ ಮರುಳು ಮಾಡಿ ಅವನನ್ನು ರಮಿಸುತ್ತ ತಮ್ಮ ಅಂಗದೇಶದ ರಾಜಧಾನಿಗೆ ಕರೆತಂದರು. ಋಷ್ಯಶೃಂಗನು ರಾಜ್ಯದಲ್ಲಿ ಕಾಲಿರಿಸಿದ ಕೂಡಲೇ ಸಮೃದ್ಧವಾಗಿ ಮಳೆಬಂದು ಕೆರೆ, ಕಾಲುವೆಗಳೆಲ್ಲ ನೀರು ತುಂಬಿ ಸೂಸಿ ಹರಿದವು. ಆಗ ಮಹಾರಾಜನು ಅತ್ಯಂತ ಆದರದಿಂದ ಆ ಋಷಿಕುಮಾರನನ್ನು ತನ್ನ ಅಂತಃಪುರಕ್ಕೆ ಕರೆದೊಯ್ದು ಸತ್ಕರಿಸಿದನು. ಮತ್ತು ವಯೋಮಾನಕ್ಕೆ ಅನುಗುಣವಾಗಿ ನಿಸರ್ಗದ ಕರೆ ಕಾವುಗಳಿಗೆ ಕಾತರಿಸಿ ನಿಂತ ಆ ಮುನಿಪುತ್ರನಿಗೆ ತನ್ನ ಶಾಂತಾ ಎಂಬ ರೂಪಸಿಯಾದ ರಾಜಕುಮಾರಿಯನ್ನು ಕೊಟ್ಟು ಮದುವೆ ಮಾಡಿದನು. ಋಷ್ಯಶೃಂಗನು ರತಿರೂಪಿಣಿಯಾದ ತನ್ನ ರಮಣಿಯೊಂದಿಗೆ ರಾಜಭೋಗವನ್ನು ಅನುಭವಿಸಿ ದಾಂಪತ್ಯ ಜೀವನದ ಸುಖವನ್ನು ಅನುಭೋಗಿಸಿ ಆನಂದಪಟ್ಟನು.

ಇತ್ತ ವಿಭಾಂಡಕ ಮುನಿಯು ಆಶ್ರಮದಲ್ಲಿ ತನ್ನ ಮಗನಿಲ್ಲದ್ದನ್ನು ಕಂಡು ಕೋಪದಿಂದ ಅವನನ್ನು ಹುಡುಕುತ್ತ ಅಂಗದೇಶಕ್ಕೆ ಬಂದನು. ದಾರಿಯಲ್ಲಿ ಮಾರ್ಗಾಯಾಸದಿಂದ ಬಳಲಿದಾಗ ಅಂಗರಾಜನು ನೀಡಿದ ಸತ್ಕಾರದಿಂದ ಸಂತುಷ್ಟನಾದ ಮಹರ್ಷಿಯು ತನ್ನ ಮಗನು ಅಲ್ಲಿಯೇ ಇರುವ ಸಮಾಚಾರವನ್ನೂ ಋಷ್ಯಶೃಂಗನಿಗೆ ಮದುವೆಯಾದ ಸುದ್ದಿಯನ್ನೂ ಕೇಳಿ ಕ್ರುದ್ಧನಾದನು. ಮಗನ ಬ್ರಹ್ಮಚರ್ಯ ವ್ರತವು ಹಾಳಾಯಿತೆಂದು ಅವನಿಗೆ ದುಃಖವಾಗಿದ್ದಿತು. ಅದೇ ವೇಳೆಯಲ್ಲಿ ಅವನ ಸೊಸೆಯಾದ ಶಾಂತಾದೇವಿಯು ಬಂದು ಮಾವನಿಗೆ ನಮಸ್ಕಾರ ಮಾಡಿದಳು. ಅವಳನ್ನು ಕಂಡಕೂಡಲೇ ಋಷಿಯ ಕೋಪವು ಶಾಂತವಾಗಿ ಸೊಸೆ ಎಂಬ ಅಭಿಮಾನ ಮೂಡಿ ಅವಳಿಗೆ 'ಅಷ್ಟಪುತ್ರ ಸೌಭಾಗ್ಯವತೀ ಭವ' ಎಂದು ಎದೆ ತುಂಬಿ ಆಶೀರ್ವದಿಸಿದನು. ಮತ್ತು ಮಗನನ್ನು ಕರೆದು ''ಒಂದು ಸಂತಾನವಾಗುವವರೆಗೆ ಇಲ್ಲಿದ್ದು ಅನಂತರ ಸೊಸೆಯೊಂದಿಗೆ ನಮ್ಮ ಆಶ್ರಮಕ್ಕೆ ಬಂದು ಬಿಡು'' ಎಂದು ಹೇಳಿ ತನ್ನ ಆಶ್ರಮಕ್ಕೆ ಆನಂದದಿಂದ ಮರಳಿದನು.

ಋಷ್ಯಶೃಂಗನಾದರೂ ತಂದೆಯ ಆಜ್ಞೆಯ ಮೇರೆಗೆ ಶಾಂತೆಯಿಂದ ಒಂದು ಸಂತತಿಯು ಆಗುವವರೆಗೆ ಅಂಗದೇಶದ ಅರಮನೆಯ ಅಳಿಯನಾಗಿ ಲೋಮಪಾದನ ಬಳಿಯಲ್ಲಿದ್ದು ಅನಂತರ ತನ್ನ ಆಶ್ರಮಕ್ಕೆ ಪತ್ನಿಯಿಂದ ಒಡಗೂಡಿ ತೆರಳಿದನು. ಲೋಮಪಾದನ ಮಿತ್ರನಾದ ದಶರಥ ಮಹಾರಾಜನಿಗೆ ಪುತ್ರಸಂತಾನವಿರದಿದ್ದರಿಂದ ಮಾವನ ಪ್ರಾರ್ಥನೆಯ ಮೇರೆಗೆ ಋಷ್ಯಶೃಂಗನು ಅಯೋಧ್ಯೆಗೆ ಬಂದು ತಾನೇ ಅಧ್ವರ್ಯು ಆಗಿ ದಶರಥನಿಂದ ಪುತ್ರಕಾಮೇಷ್ಟಿಯಾಗವನ್ನು ಮಾಡಿಸಿದನು.

ಋಷ್ಯಶೃಂಗನ ತಪಃಸಾಮರ್ಥ್ಯವು ವರ್ಣನಾತೀತವಾಗಿದ್ದಿತು. ಮಂತ್ರಸಿದ್ಧನಾದ ಆ ತಪೋನಿಧಿಯು ಮಾಡಿಸಿದ ಪುತ್ರಕಾಮೇಷ್ಟಿಯಾಗದ ಪರಿಣಾಮದಿಂದ ಯಜ್ಞ ನಾರಾಯಣನು ಪ್ರಸನ್ನನಾಗಿ ಮಹಾರಾಜನಿಗೆ ಪಾಯಸವನ್ನಿತ್ತನು. ಆ ಯಜ್ಞದತ್ತವಾದ ಪಾಯಸದ ಪ್ರಭಾವದಿಂದ ದಶರಥನಿಗೆ ರಾಮ, ಲಕ್ಷ್ಮಣ, ಭರತ, ಶತ್ರುಘ್ನರೆಂಬ ನಾಲ್ಕು ಜನ ಗಂಡು ಮಕ್ಕಳಾದರು.

ಋಷ್ಯಶೃಂಗನ ಆಶ್ರಮವು ಕೌಶಿಕೀ ನದೀತೀರದಲ್ಲಿ ಇದ್ದಿತು. ಸಾವರ್ಣಿಮನ್ವಂತರದಲ್ಲಿ ಋಷ್ಯಶೃಂಗನು ಸಪ್ತರ್ಷಿ ಪದವಿಗೆ ಏರುವವನಿರುವನು. ಧರ್ಮರಾಜನು ಕೌಶಿಕೀ ನದೀತೀರದ ಋಷ್ಯಶೃಂಗಾಶ್ರಮಕ್ಕೆ ಬಂದಾಗ ಲೋಮಶ ಮುನಿಗಳು ಅವನಿಗೆ ಆ ಮುನಿಗಳ ಮಹಿಮೆಯನ್ನು ಹೇಳಿದರೆಂದು ವನಪರ್ವದಲ್ಲಿ ಕತೆ ಬಂದಿದೆ. ಮಹರ್ಷಿ ಋಷ್ಯಶೃಂಗರು ಋಷ್ಯಶೃಂಗ ಸಂಹಿತಾ, ಋಷ್ಯಶೃಂಗ ಸ್ಮೃತಿ ಮುಂತಾದ ಗ್ರಂಥಗಳನ್ನು ಬರೆದಿದ್ದಾರೆ. ಹೇಮಾದ್ರಿ, ವಿಜ್ಞಾನೇಶ್ವರ, ಹಲಾಯುಧ ಮುಂತಾದ ಧರ್ಮಶಾಸ್ತ್ರಕಾರರು ಋಷ್ಯಶೃಂಗಸ್ಮೃತಿಯ ಉಲ್ಲೇಖ ಮಾಡಿದ್ದಾರೆ.

ಮಿತಾಕ್ಷರಾ, ಅಪರಾರ್ಕ, ಸ್ಮೃತಿ ಚಂದ್ರಿಕಾ ಮುಂತಾದ ಗ್ರಂಥಕಾರರೂ ಕೂಡ ಆಚಾರ, ಅಶೌಚ, ಶ್ರಾದ್ಧ ಪ್ರಾಯಶ್ಚಿತ್ತ ಮುಂತಾದ ಅನೇಕ ವಿಷಯಗಳಲ್ಲಿ ಋಷ್ಯಶೃಂಗ ಸ್ಮೃತಿಯನ್ನು ಪ್ರಮಾಣತ್ವೇನ ಉದಾಹರಿಸಿದ್ದಾರೆ. ರಾಮಾಯಣ, ಮಹಾಭಾರತದಲ್ಲಿ ಇವನ ಚರಿತ್ರೆಯ ವಿಸ್ತೃತ ವರ್ಣನೆಯು ಇರುತ್ತದೆ.

★ ★ ★ ★

# ಜಹ್ನು

ಮಂದಾಕಿನಿ, ಭಾಗಿರಥಿ, ಜಾಹ್ನವಿ, ಅಲಕನಂದೆ ಮುಂತಾದವು ಗಂಗಾನದಿಯ ವಿವಿಧ ಹೆಸರುಗಳು. ಇವುಗಳಲ್ಲಿ ಜಾಹ್ನವಿ ಎಂಬ ಹೆಸರು ಬರಲು ಕಾರಣವಾದ ಕಥೆಯೊಂದಿದೆ.

ಗಂಗೆಯು ಮೇಲಿನಿಂದ ರಭಸದಿಂದ ಧುಮುಕುವಾಗ ಭೂಮಿಯೇ ಕೊಚ್ಚಿಹೋಗಬಹುದೆಂದು ಎಲ್ಲರೂ ಭಯಪಡುತ್ತಾರೆ. ಭಗೀರಥನು ಶಿವನನ್ನು ಪ್ರತ್ಯಕ್ಷೀಕರಿಸಿ ಗಂಗೆಯನ್ನು ಆಧರಿಸಿ ನಿಲ್ಲುವಂತೆ ವಿನಂತಿಸುತ್ತಾನೆ. ಅದರಂತೆ ಗರ್ವದಿಂದ ಜಿಗಿದ ಗಂಗೆಯನ್ನು ಶಿವನು ಜಡೆಯಲ್ಲಿ ಅಡಗಿಸುತ್ತಾನೆ. ಪುನಃ ಶಿವನಲ್ಲಿ ಗಂಗೆಯನ್ನು ಬಿಡುಗಡೆ ಮಾಡುವಂತೆ ಪ್ರಾರ್ಥಿಸುತ್ತಾನೆ. ಮುಂದೆ ರಭಸದಿಂದ ಹರಿದ ಗಂಗೆಯು ಜಹ್ನು ಎಂಬ ಮುನಿಯ ಆಶ್ರಮವನ್ನೂ ಯಾಗಶಾಲೆಯನ್ನೂ ಕೊಚ್ಚಿಕೊಂಡು ಹೋಗುತ್ತಾಳೆ.

ಜಹ್ನು ಮೂಲತಃ ಕ್ಷತ್ರಿಯನಾಗಿದ್ದನು. ಪಾರಮಾರ್ಥಿಕ ಚಿಂತನೆಗಳಲ್ಲಿ ತೊಡಗಿಸಿಕೊಂಡು ತಪಸ್ವಿಯಾಗಿ ಕಾಡಿನಲ್ಲಿ ಕಾಲ ಕಳೆಯುತ್ತಿದ್ದ. ಅವನು ಸರ್ವಮೇಧ ಎಂಬ ಯಾಗವನ್ನು ಲೋಕಕಲ್ಯಾಣಾರ್ಥವಾಗಿ ಕೈಗೊಂಡಿದ್ದ. ಇನ್ನೇನು ಪೂರ್ಣಾಹುತಿ ಆಗಬೇಕೆನ್ನುವಾಗ ಗಂಗಾನದಿಯ ಪ್ರವಾಹ ನುಗ್ಗಿತು. ಯಾಗ ಮಂಟಪದ ಅಗ್ನಿನಂದಿ ಹೋಯಿತು. ಯಾಗಮಂಟಪವೂ ನೀರು ಪಾಲಾಯಿತು. ಯಾಗ ಅರ್ಧದಲ್ಲಿ ಕೊನೆಗೊಳ್ಳುವಂತಾಯಿತು.

ತನ್ನ ಪರ್ಣಕುಟಿಯೂ ಯಜ್ಞವೇದಿಯೂ ಜಲಸಮಾಧಿಯಾದುದನ್ನು ಕಂಡು ಜಹ್ನು ಮುನಿಯು ಕ್ರೋಧದಿಂದ ಗಂಗಾನದಿಯನ್ನೇ ಆಪೋಶನ ತೆಗೆದುಕೊಂಡನು. ಅಂದರೆ, ಇಡೀ ನದಿಯನ್ನು ಕುಡಿದುಬಿಟ್ಟನು.

ಗಂಗಾನದಿಯನ್ನು ಸ್ವರ್ಗದಿಂದ ಭೂಮಿಗೆ ಇಳಿಸುವ ಭಗೀರಥನ ಪ್ರಯತ್ನ ವ್ಯರ್ಥವಾಯಿತು. ಆತ ಜಹ್ನು ಮುನಿಗಳಲ್ಲಿ ಪರಿಪರಿಯಾಗಿ ಬೇಡಿಕೊಂಡು ಗಂಗೆಯನ್ನು ಬಿಡುಗಡೆಗೊಳಿಸುವಂತೆ ಕೇಳಿಕೊಂಡನು. ಕೊನೆಗೆ ಭಗೀರಥನ ಪ್ರಾರ್ಥನೆಗೆ ಸ್ಪಂದಿಸಿದ ಜಹ್ನು ಮುನಿಗಳು ತಮ್ಮ ಬಲಗಿವಿಯಿಂದ ಗಂಗೆಯನ್ನು

ಹರಿಯಗೊಟ್ಟರು. ಈ ದೃಷ್ಟಿಯಲ್ಲಿ ಗಂಗೆ ಜಹ್ನುಮುನಿಗಳ ಮಗಳೆನಿಸಿಕೊಂಡಳು. ಹಾಗಾಗಿಯೇ ಜಾಹ್ನವಿ ಎಂಬ ಹೆಸರು ಗಂಗೆಗೆ ಪರ್ಯಾಯವಾಯಿತು.

★ ★ ★ ★

## ಖಾಂಡಿಕ್ಯ

ವಿದೇಹ ವಂಶದ ಧರ್ಮಧ್ವಜನೆಂಬವನಿಗೆ ಇಬ್ಬರು ಮಕ್ಕಳು. ಹಿರಿಯವನು ಕೃತಧ್ವಜ. ಕಿರಿಯವನು ಖಾಂಡಿಕ್ಯ. ಮಿತಧ್ವಜನೆಂಬ ಹೆಸರು ಪಡೆದ ಧರ್ಮಧ್ವಜನು ತನ್ನ ರಾಜ್ಯವನ್ನು ತನ್ನ ಇಬ್ಬರು ಮಕ್ಕಳಿಗೆ ಸಮವಾಗಿ ಹಂಚಿಕೊಟ್ಟನು. ಧರ್ಮಧ್ವಜನ ಅನಂತರ ಕೃತಧ್ವಜ ಮತ್ತು ಖಾಂಡಿಕ್ಯರು ತಮ್ಮ ಪಾಲಿಗೆ ಬಂದ ರಾಜ್ಯದ ಭಾಗಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಆಳುವುದಕ್ಕೆ ಪ್ರಾರಂಭಿಸಿದರು. ಅವರಿಬ್ಬರೂ ಬಹಳ ಅನ್ಯೋನ್ಯದಿಂದ ಮತ್ತು ಸ್ನೇಹ-ವಿಶ್ವಾಸಗಳಿಂದ ಇದ್ದರು. ಕೃತಧ್ವಜನಿಗೆ ಕೇಶಿಧ್ವಜನೆಂಬ ಮಗನು ಹುಟ್ಟಿದನು. ಕೇಶಿಧ್ವಜನು ರಾಜನೀತಿ ಮತ್ತು ಧನುರ್ವೇದವನ್ನು ಯೋಗ್ಯ ಗುರುಗಳಿಂದ ಕಲಿತನು. ಕೆಲವು ಕಾಲ ಕಳೆದ ಮೇಲೆ ಕೇಶಿಧ್ವಜನು ದಂಡಯಾತ್ರೆಯನ್ನು ಕೈಗೊಂಡನು. ತನ್ನ ಚಿಕ್ಕಪ್ಪನಾದ ಖಾಂಡಿಕ್ಯನ ರಾಜ್ಯದ ಮೇಲೆ ದಾಳಿ ಮಾಡಿದನು. ಖಾಂಡಿಕ್ಯನು ಸೋತು ರಾಜ್ಯವನ್ನು ಕಳೆದುಕೊಂಡು ಕಾಡಿಗೆ ನಡೆದನು. ಅರಣ್ಯದಲ್ಲಿಯೇ ಬದುಕುತ್ತಾ ತಪಸ್ಸನ್ನು ಗೈದು ಖಾಂಡಿಕ್ಯ ಋಷಿಯೆನಿಸಿದನು.

ಸ್ವಲ್ಪ ಕಾಲ ಕಳೆದ ಬಳಿಕ ಕೇಶಿಧ್ವಜನು ಒಂದು ದೊಡ್ಡ ಯಾಗವನ್ನು ಮಾಡಲು ಸಂಕಲ್ಪಿಸಿದನು. ಯಾಗದ ವಿಧಿಯಂತೆ ಯಾಗಕ್ಕಾಗಿ ಪಶುವೊಂದನ್ನು ನಿಶ್ಚಯಿಸಿ, ಮಂತ್ರಗಳಿಂದ ಆ ಪಶುವನ್ನು ಶುಧೀಕರಿಸಿದನು. ಒಂದು ರಾತ್ರಿ ಅದನ್ನು ಹುಲಿಯೊಂದು ನುಂಗಿಬಿಟ್ಟಿತು. ಹೀಗೆ ಪಶುವಿಲ್ಲದೇ ಇರುವುದರಿಂದ ಯಾಗಕ್ಕೆ ವಿಘ್ನವು ಒದಗಿತು. ಮುಂದೇನು ಮಾಡುವುದೆಂದು ಕೇಶಿಧ್ವಜನಿಗೆ ತಿಳಿಯದೇ ಹೋಯಿತು. ಆ ಯಾಗದಲ್ಲಿ ಭಾಗವಹಿಸಿದ ಋತ್ವಿಜರಾರಿಗೂ ಮುಂದೇನು ಮಾಡುವುದೆಂದು ಗೊತ್ತಾಗಲಿಲ್ಲ. ಯಾಗವನ್ನು ಮುಂದುವರಿಸುವ ವಿಧಾನವನ್ನು

ತಿಳಿದುಕೊಳ್ಳುವುದಕ್ಕಾಗಿ ತನ್ನ ಚಿಕ್ಕಪ್ಪನಾದ ಖಾಂಡಿಕ್ಯನನ್ನು ಕಾಣುವ ಉದ್ದೇಶದಿಂದ ಕೇಶಿಧ್ವಜನು ಅರಣ್ಯಕ್ಕೆ ಹೊರಟುಹೋದನು.

ತನ್ನ ಬಳಿಗೆ ಬರುತ್ತಿರುವ ಅಣ್ಣನ ಮಗನಾದ ಕೇಶಿಧ್ವಜನನ್ನು ದೂರದಿಂದಲೇ ಕಂಡ ಖಾಂಡಿಕ್ಯನು ತನ್ನ ಆಶ್ರಮದಿಂದ ಹೊರಗೆ ಬಂದು ಬಿಗಿದಪ್ಪಿ ಪ್ರೀತಿಯಿಂದ ಮಾತನಾಡಿಸಿದನು. ದೀರ್ಘಕಾಲದ ತಪಸ್ಸಿನಿಂದ ಖಾಂಡಿಕ್ಯನು ಕಾಮಕ್ರೋಧಾದಿಗಳನ್ನು ಸಂಪೂರ್ಣ ತ್ಯಜಿಸಿದ್ದನು. ಯಾವುದೇ ದ್ವೇಷವನ್ನಿಟ್ಟುಕೊಳ್ಳದೆ ರಾಜ್ಯಭಾರದ ಕುರಿತು, ಪ್ರಜೆಗಳ ಕುರಿತು ಕುಶಲ ವಿಚಾರಿಸಿದನು. ಕೇಶಿಧ್ವಜನು ತಾನು ಯಾಗದೀಕ್ಷೆಯನ್ನು ಕೈಗೊಂಡಿರುವ ವಿಚಾರವನ್ನು ಮತ್ತು ಯಾಗದ ಪಶುವನ್ನು ಹುಲಿಯೊಂದು ತಿಂದಿರುವ ವಿಚಾರವನ್ನು ವಿವರಿಸಿದನು. ಮಂತ್ರಪೂರ್ವಕವಾಗಿ ಸಂಸ್ಕರಿಸಿದ ಪಶುವಿಲ್ಲದೆ ಯಾಗವನ್ನು ಮುಂದುವರಿಸುವ ವಿಧಾನವೇನೆಂದು ಹೇಳಿ ತನ್ನನ್ನು ಉದ್ಧರಿಸಬೇಕೆಂದು ಪ್ರಾರ್ಥಿಸಿದನು. ವೇದಗಳು ಹೇಳಿರುವಂತೆ ಯಾಗದ ಪಶುವಿಗೆ ತೊಂದರೆಯಾದರೆ ಅಥವಾ ಯಾಗದ ಪಶುವೇ ನಷ್ಟವಾದರೆ ಅದೇ ರೀತಿಯ ಇನ್ನೊಂದು ಪಶುವನ್ನು ಸ್ವೀಕರಿಸಿ, ಮೊದಲಿನ ಪಶುವಿಗೆ ಮಾಡಿರುವ ಹಾಗೆಯೇ ಮಂತ್ರಪೂರ್ವಕವಾದ ಸಂಸ್ಕಾರವನ್ನು ಮಾಡಿ ಮುಂದುವರಿಯುವ ಪರಿಹಾರವನ್ನು ಖಾಂಡಿಕ್ಯನು ಕೇಶಿಧ್ವಜನಿಗೆ ಹೇಳಿದನು. ಇದರಿಂದ ಸಂತುಷ್ಟನಾದ ಕೇಶಿಧ್ವಜನು ತನ್ನ ಚಿಕ್ಕಪ್ಪನಾದ ಖಾಂಡಿಕ್ಯನಿಗೆ ಮತ್ತೊಮ್ಮೆ ನಮಸ್ಕರಿಸಿದನು. ''ನೀವೀಗ ನನ್ನ ಗುರುಗಳಾಗಿದ್ದೀರಿ. ನಿಮ್ಮ ಉಪದೇಶದಿಂದ ಯಾಗಕ್ಕೆ ಒದಗಿರುವ ವಿಘ್ನವನ್ನು ಪರಿಹರಿಸುವ ದಾರಿಯು ನನಗೆ ತಿಳಿಯಿತು. ನಿಮಗೆ ಯೋಗ್ಯವಾದ ಗುರುದಕ್ಷಿಣೆಯನ್ನು ಕೊಡಬೇಕಾದುದು ನನ್ನ ಕರ್ತವ್ಯ. ಯುದ್ಧದಲ್ಲಿ ನಿಮ್ಮನ್ನು ಸೋಲಿಸಿ ರಾಜ್ಯವನ್ನು ಅಪಹರಿಸಿದ ಕುರಿತಾಗಿ ನೀವು ಯಾವುದೇ ದ್ವೇಷಭಾವನೆಗಳನ್ನು ಇಟ್ಟುಕೊಳ್ಳಲಿಲ್ಲವೆಂದು ಸ್ಪಷ್ಟವಾಯಿತು. ಅದಕ್ಕಾಗಿ ನಾನೀಗ ನಿಮ್ಮಲ್ಲಿ ಕ್ಷಮೆ ಯಾಚಿಸುತ್ತೇನೆ. ಗುರುದಕ್ಷಿಣೆಯ ರೂಪದಲ್ಲಿ ನಿಮ್ಮ ರಾಜ್ಯಕೋಶಗಳೊಂದಿಗೆ ಸಮರ್ಪಿಸಲು ಸಿದ್ಧನಿದ್ದೇನೆ. ಬೇರೆ ಏನನ್ನಾದರೂ ನೀವು ಅಪೇಕ್ಷಿಸುವುದಾದರೆ ಅದನ್ನು ಕೊಡಲು ಸಿದ್ಧನಿದ್ದೇನೆ. ದಯವಿಟ್ಟು ಸ್ವೀಕರಿಸಿ ನನ್ನನ್ನು ಆಶೀರ್ವದಿಸಬೇಕು'' ಎಂದು ಕೇಳಿಕೊಂಡನು.

ರಾಜ್ಯವೈಭೋಗಗಳ ಕುರಿತಾಗಿರುವ ಮೋಹವನ್ನು ಖಾಂಡಿಕ್ಯನು ಈ ಮೊದಲೇ ತ್ಯಜಿಸಿದ್ದನು. ದೀರ್ಘಕಾಲ ತಪಸ್ಸನ್ನು ಆಚರಿಸಿದ ಖಾಂಡಿಕ್ಯನಿಗೆ ಯೋಗ ರಹಸ್ಯಗಳನ್ನು ತಿಳಿದುಕೊಂಡು ಯೋಗ ಸಾಧನೆಗಳ ಮೂಲಕ ಮೋಕ್ಷವನ್ನು ಪಡೆಯಬೇಕೆಂಬ ಅಪೇಕ್ಷೆಯಿತ್ತು. ತನ್ನ ಅಣ್ಣನ ಮಗನಾದ ಕೇಶಿಧ್ವಜನು ಅನೇಕ ಯೋಗರಹಸ್ಯಗಳನ್ನು ತಿಳಿದಿದ್ದಾನೆ ಎಂಬ ವಿಚಾರವು ಖಾಂಡಿಕ್ಯನಿಗೆ ಗೊತ್ತಿತ್ತು. ಹಾಗಾಗಿ, ಗುರುದಕ್ಷಿಣೆಯ ರೂಪದಲ್ಲಿ ನಿನಗೆ ತಿಳಿದಿರುವ ಯೋಗರಹಸ್ಯಗಳನ್ನು ನನಗೆ ತಿಳಿಸಿಕೊಡು'' ಎಂದು ಹೇಳಿದನು. ಕೇಶಿಧ್ವಜನು ಸಂತೋಷದಿಂದಲೇ ತನಗೆ ತಿಳಿದಿರುವ ಎಲ್ಲಾ ಯೋಗರಹಸ್ಯಗಳನ್ನು ತನ್ನ ಚಿಕ್ಕಪ್ಪನಿಗೆ ಬೋಧಿಸಿದನು. ಅನಂತರ ಮರಳಿ ತನ್ನ ರಾಜ್ಯಕ್ಕೆ ಹೋಗಿ ಯಾಗವನ್ನು ಪೂರ್ಣಗೊಳಿಸಿದನು. ಖಾಂಡಿಕ್ಯನು ಕಾಡಿನಲ್ಲಿಯೇ ಇದ್ದು ತಪಸ್ಸನ್ನು ಮುಂದುವರಿಸುತ್ತ ಕೇಶಿಧ್ವಜನಿಂದ ತಿಳಿದುಕೊಂಡ ಯೋಗರಹಸ್ಯಗಳನ್ನು ಅನುಷ್ಠಾನ ಮಾಡುತ್ತಾ ಪರಮ ಸಿದ್ಧಿಯನ್ನು ಹೊಂದಿದನು. ಎಲ್ಲರೂ ಅವನನ್ನು ಮಹರ್ಷಿ ಖಾಂಡಿಕ್ಯನೆಂದು ಕೊಂಡಾಡಿದರು.

★ ★ ★ ★

## ಜಾಬಾಲಿ

ಜಾಬಾಲಿ ಋಷಿಯು ವೇದೋತ್ತರ ಯುಗದ ಜ್ಞಾನಭಂಡಾರದ ವಾಹಕನಾದ ವಿದ್ವಾನ್ ಮುನಿಯಾಗಿದ್ದ. ಮಂದರ ಪರ್ವತದಲ್ಲಿ ಆಶ್ರಮ ಕಟ್ಟಿಕೊಂಡು ಪಾಠ ಪ್ರವಚನ ಮಾಡುತ್ತಲಿದ್ದ ಈ ಮುನಿಯ ಬಳಿಯಲ್ಲಿ ಓದಿದ ಶಿಷ್ಯರ ಸಂಖ್ಯೆಯು ಸುಮಾರು ಒಂದು ಲಕ್ಷಕ್ಕೆ ಸಮೀಪವಿದ್ದಿತಂತೆ. ಇವನು ಬರೆದ ಜಾಬಾಲಿ ಸ್ಮೃತಿಯು ಈಗಲೂ ಪ್ರಸಿದ್ಧವಿದೆ.

ಇವನಿಗೆ ಒಳ್ಳೇ ವಾಕ್ ಶುದ್ಧಿಯಿದ್ದಿತು. ಯತಂಭರರಾಜನಿಗೆ ಸಂತಾನವಿಲ್ಲದ್ದರಿಂದ ಅವನು ಹೆಂಡತಿಯೊಂದಿಗೆ ಜಾಬಾಲಿಯ ಆಶ್ರಮಕ್ಕೆ ಬಂದು ಇವನನ್ನು ಸಂತಾನ ಪ್ರದಾನ ಮಾಡಬೇಕೆಂದು ಭಿನ್ನವಿಸಿದ. ಆಗ ಜಾಬಾಲಿಯು ಅವನಿಗೆ ಗೋ ಸೇವೆ ಹಾಗೂ ಹರಿಸೇವೆ ಮಾಡಲಿಕ್ಕೆ ಹೇಳಿದ. ಅವನ ಹೇಳಿಕೆಯಂತೆ

ಶ್ರೀಹರಿಯ ಉಪಾಸನೆ ಮಾಡಿದ ಋತಂಭರರಾಜ ದಂಪತಿಗಳಿಗೆ ಪುತ್ರ ಸಂತಾನವಾಯಿತು.

ಈ ಋಷಿಯ ಜ್ಞಾನ, ಧ್ಯಾನ, ತಪಸ್ಸುಗಳ ಕೀರ್ತಿಯನ್ನು ಕೇಳಿದ ಇಂದ್ರನು ಅಮರಾವತಿಯ ಬಣ್ಣದ ಬೊಂಬೆ ರಂಭೆಯನ್ನು ಜಾಬಾಲಿಯ ಬಳಿಗೆ ಕೊಟ್ಟು ಕಳಿಸಿದನು. ಅವಳ ಒನಪು ವೈಯ್ಯಾರ ಮತ್ತು ಶೃಂಗಾರ ಸೌಂದರ್ಯಗಳನ್ನು ಕಂಡು ಜಾಬಾಲಿಯು ಮರುಳಾಗಿ ಅವಳೊಡನೆ ಕೂಡಿದ. ಅದರಿಂದ ಅವನಿಗೆ ಒಂದು ಹೆಣ್ಣು ಮಗು ಜನಿಸಿತು.

ಈ ಕನ್ಯೆಯಾದರೂ ತಾಯಿ ರಂಭೆಯಂತೆ ಒಳ್ಳೇ ರೂಪವತಿಯಾಗಿದ್ದಳು. ಮುಂದೆ ತಾರುಣ್ಯದಲ್ಲಿ ಲಲಿತ ಲಾವಣ್ಯ ಅವಳ ಅಂಗಾಂಗಗಳಲ್ಲಿ ತುಂಬಿ ತುಳುಕ ತೊಡಗಿದಾಗ ಚಿತ್ರಾಂಗದ ಎಂಬ ರಾಜನು ಬಂದು ಅವಳನ್ನು ಅಪಹರಿಸಿಕೊಂಡು ಹೋದ.

ಇಂಥ ಸಂಸಾರದಿಂದ ಬೇಸತ್ತ ಜಾಬಾಲಿಯು ಘೋರ ತಪಸ್ಸನ್ನು ಮಾಡಬೇಕೆಂದು ಕಾಡಿಗೆ ಹೋದನು. ದಾರಿಯಲ್ಲಿ ಒಂದು ಸರೋವರದ ದಂಡೆಯ ಮೇಲೆ ತರಳೆಯೊಬ್ಬಳು ತಪಸ್ಸು ಮಾಡುತ್ತ ಕುಳಿತಿದ್ದು ಕಂಡಿತು. ಅವಳು ರಂಭೆಗಿಂತ ರೂಪಸಿಯಾಗಿದ್ದಳು. ಅವಳನ್ನು ಕಂಡು ಜಾಬಾಲಿಯು ಮುಗ್ಧನಾಗಿ ನಿಂತುಕೊಂಡನು.

ಅವಳ ಆ ಅದ್ಭುತವಾದ ಸೌಂದರ್ಯದ ಸಿರಿಯನ್ನು ಕಂಡು ಚಕಿತನಾದ ಜಾಬಾಲಿಯು ಅವಳ ತಪಸ್ಸಮಾಧಿ ಇಳಿದ ಬಳಿಕ ಅವಳನ್ನು ಮಾತನಾಡಿಸಬೇಕೆಂದು ಅಲ್ಲಿಯೇ ನಿಂತನು. ಅವಳ ಅಲೌಕಿಕ ಸೌಂದರ್ಯವು ಇವನ ಹೃದಯವನ್ನು ಸೂರೆಗೊಂಡು ಸೆರೆಹಿಡಿದಿತ್ತು. ಅವಳನ್ನು ಪಡೆಯಬೇಕೆಂಬ ಆಸೆಯಿಂದ ಅವನು ಅಲ್ಲಿಯೇ ಕಾಯುತ್ತ ನಿಂತನು.

ಒಂದು ನೂರು ವರ್ಷ ನಿಂತರೂ ಅವಳ ಸಮಾಧಿ ಇಳಿಯಲಿಲ್ಲ. ಜಾಬಾಲಿಯೂ ಅಲ್ಲಿಯೇ ಅವಳಿಗಾಗಿ ಕಾಯುತ್ತ ನಿಂತ. ಆಗ ಅವನ ಮನಸ್ಸಿನಲ್ಲಿ

ಈ ಸುಂದರಿಗಾಗಿ ನಾನು ಕಾಯುತ್ತಲಿದ್ದೇನೆ. ಅವಳು ಈಗ ನೂರು ವರ್ಷದಿಂದ ಯಾರನ್ನೋ ಧ್ಯಾನಿಸುತ್ತಿದ್ದಾಳೆ. ಅವಳ ಧ್ಯೇಯ ದೇವತೆ ಯಾರಾಗಿರಬಹುದು? ಎಂಬ ವಿಚಾರ ಬಂದು ಅವನ ಮನಸ್ಸು ತಿರುಗಿತು.

ಅಷ್ಟರಲ್ಲಿ ಅವಳ ತಪಸ್ಸಮಾಧಿ ಇಳಿಯಿತು. ಜಾಬಾಲಿಗೆ ಆಗಲೇ ಅವಳ ಬಗೆಗಿನ ಮೋಹ ಹೋಗಿ ಭಕ್ತಿ ಹುಟ್ಟಿ ನೀನಾವ ದೇವರನ್ನು ಧ್ಯಾನಿಸುವಿ? ಎಂದು ಕೇಳಿದನು. ಅದಕ್ಕೆ ಅವಳು ಕೃಷ್ಣಧ್ಯಾನದ ರಹಸ್ಯವನ್ನು ಅವನಿಗೆ ಉಪದೇಶಿಸಿದಳು. ಅದರಂತೆ ಅವನು ಶ್ರೀಕೃಷ್ಣನ ಉಪಾಸನೆಯನ್ನು ಮಾಡಿ ಮುಂದಿನ ಜನ್ಮದಲ್ಲಿ ಗೋಕುಲದಲ್ಲಿ ಪ್ರಚಂಡ ಮತ್ತು ಚಿತ್ರಗಂಧಾ ಎಂಬ ಗೋಪ ದಂಪತಿಗಳ ಹೊಟ್ಟೆಯಿಂದ ಹುಟ್ಟಿ ಶ್ರೀಕೃಷ್ಣನ ಬಾಲಮಿತ್ರನಾದನು. ಕೃಷ್ಣನ ಅನುಗ್ರಹದಿಂದ ಮುಂದೆ ಸದ್ಗತಿ ಪಡೆದನು.

★ ★ ★ ★

## ಶುನಃಶ್ಯೇಪ

ವೇಧಸ ಹರಿಶ್ಚಂದ್ರ ಮಹಾರಾಜನಿಗೆ ಸಂತಾನವೇ ಇರದ್ದರಿಂದ ವರುಣನನ್ನು ಪ್ರಾರ್ಥಿಸಿ ಒಂದು ಗಂಡು ಮಗು ಜನಿಸಿದರೆ ಅದನ್ನು ನಿನಗೇ ಬಲಿಕೊಡುತ್ತೇನೆ ಎಂದು ಹರಕೆ ಹೊತ್ತನು. ವರುಣನ ಅನುಗ್ರಹದಿಂದ ಅವನಿಗೆ ಒಂದು ಸುಂದರ ಗಂಡು ಕೂಸು ಹುಟ್ಟಿತು. ಅದಕ್ಕೆ ರೋಹಿತ ಎಂದು ಹೆಸರಿಟ್ಟನು. ವಚನಕೊಟ್ಟಂತೆ ವರುಣನು ಹರಿಶ್ಚಂದ್ರನಿಗೆ ಮಗನನ್ನು ಬಲಿಕೊಡು ಎಂದು ಕೇಳಿದನು. ಅದನ್ನು ಕೇಳಿ ಗಾಬರಿಯಾದ ಹರಿಶ್ಚಂದ್ರನು ಮಗುವಿಗೆ ಇನ್ನೂ ಹಲ್ಲು ಬಂದಿಲ್ಲ. ಹಲ್ಲು ಬಂದ ಬಳಿಕ ಬಲಿ ಕೊಡುತ್ತೇನೆ ಎಂದು ಹೇಳಿ ಕಳಿಸಿದ. ಹಲ್ಲು ಬಂದ ಕೂಡಲೇ ಮತ್ತೆ ವರುಣ ಬಂದ. ಆಗ ಹರಿಶ್ಚಂದ್ರನು ಈ ಹಲ್ಲು ಬಿದ್ದು ಹೋಗುತ್ತವೆ. ಗಟ್ಟಿಹಲ್ಲು ಬಂದ ಬಳಿಕ ಕೊಡುತ್ತೇನೆಂದು ಹೇಳಿ ತಿರುಗಿ ಕಳಿಸಿದ. ಹೀಗೆ ಪುತ್ರ ಬಲಿಯನ್ನು ರಾಜನು ಮುಂದೆ ಹಾಕುವದೂ, ವರುಣನು ಬಂದು ಹಟ ಹಿಡಿದು ಕೂಡುವದೂ ಕುಮಾರ ರೋಹಿತನ ಕಣ್ಣಿಗೆ ಬಿದ್ದಿತು. ಮನೆಯಲ್ಲಿದ್ದರೆ ತನಗಿನ್ನು ವರುಣನಿಂದ ಉಳಿಗಾಲವಿಲ್ಲವೆಂದು ಅವನು ಮನೆ ತೊರೆದು ಕಾಡಿಗೋಡಿದ. ಇತ್ತ ಹರಿಶ್ಚಂದ್ರನಿಗೆ ವರುಣನ ದ್ರೋಹದಿಂದ ಹೊಟ್ಟೆ ನೀರಿನಿಂದ ಉಬ್ಬಿ ಹೋಯಿತು. ಮಗ

ಕಾಣೆಯಾದ ಚಿಂತೆ, ವಚನ ಭ್ರಷ್ಟತೆಯ ವಿಷಾದ, ರೋಗದ ಉಲ್ಬಣತೆಗಳಿಂದ ಮಹಾರಾಜನು ನಿರ್ವಿಣ್ಣನಾಗಿ ಹಾಸಿಗೆ ಹಿಡಿದ.

ಇತ್ತ ರೋಹಿತನು ಪ್ರಾಣ ಉಳಿಸಿಕೊಳ್ಳಲು ಓಡಿ ಹೋಗಿ ಅಡವಿ ಅಡವಿ ಅಲೆಯುತ್ತ ಅಜೀಗರ್ತ ಎಂಬ ಬ್ರಾಹ್ಮಣನ ಮನೆಗೆ ಬಂದ. ಅವನಿಗೆ ಶುನಃಪುಚ್ಛ ಶುನಃಶ್ಶೇಪ ಶುನೋನಾಂಗೂಲ ಎಂದು ಮೂರು ಮಕ್ಕಳಿದ್ದರು. ಆ ಬಡ ಬ್ರಾಹ್ಮಣ ಕುಟುಂಬವು ದಟ್ಟ ದಾರಿದ್ರ್ಯದಿಂದ ಬಳಲುತ್ತಿರುವದನ್ನು ಕಂಡು ರಾಜಕುಮಾರ ರೋಹಿತನು ಬೇಕಾದಷ್ಟು ದುಡ್ಡು ಕೊಡುತ್ತೇನೆ. ನಿಮ್ಮ ಒಬ್ಬ ಮಗನನ್ನು ವರುಣನಿಗೆ ಬಲಿಕೊಡಲಿಕ್ಕಾಗಿ ನನಗೆ ನೀಡಬೇಕು ಎಂದು ಕೇಳಿಕೊಂಡನು.

ಆಗ ಅಜೀಗರ್ತನು ಹಿರಿಯ ಮಗನನ್ನು ನಾನು ಕೊಡಲಾರೆ ಎಂದನು. ತಾಯಿಯು ಕಿರಿಯ ಮಗನನ್ನು ನಾನು ಬಿಡಲಾರೆ ಎಂದಳು. ನಡುವಿನವನಾದ ಶುನಃಶ್ಶೇಪನು ತಾಯಿ-ತಂದೆ ಇಬ್ಬರಿಗೂ ಬೇಡವಾದ ನಾನು ಬರುತ್ತೇನೆಂದು ಹೇಳಿದ. ರೋಹಿತನು ಅಜೀಗರ್ತನಿಗೆ ನೂರು ಹಸುಗಳನ್ನಿತ್ತು ತಾಯಿಯ ಆಜ್ಞೆ ಪಡೆದು ರಾಜಧಾನಿಗೆ ಶುನಃಶ್ಶೇಪನನ್ನು ಕರೆತಂದ.

ರಾಜಕುಮಾರನ ಬದಲು ಬ್ರಾಹ್ಮಣಕುಮಾರನ ಬಲಿಯು ತನಗೆ ಆಗಬಹುದೆಂದು ವರುಣ ಹೇಳಿದ್ದರಿಂದ ವಿಶ್ವಾಮಿತ್ರರ ನೇತೃತ್ವದಲ್ಲಿ ಯಜ್ಞವು ಪ್ರಾರಂಭವಾಯಿತು. ಆ ಬ್ರಾಹ್ಮಣನನ್ನು ಪಶುವನ್ನಾಗಿ ಯಜ್ಞಸ್ತಂಬಕ್ಕೆ ಕಟ್ಟಲಿಕ್ಕೂ ಯಾರೂ ಸಮ್ಮತಿಸಲಿಲ್ಲ. ಆಗ ನೂರು ಹಸುಗಳಿಗೆ ಮಗುವನ್ನು ಮಾರಿದ ಭೃಗುಕುಲದ ಅದೇ ಅಜೀಗರ್ತನೇ ಮತ್ತೆ ನೂರು ಹಸುಗಳನ್ನು ಪಡೆದು ಮಗನನ್ನು ಕಟ್ಟಲಿಕ್ಕೂ ಕಡಿಯಲಿಕ್ಕೂ ಸಿದ್ಧನಾದ. ಆಗ ಶುನಃಶ್ಶೇಪನು ಹೆದರಿ ಹೌಹಾರಿ ರಾಜನಿಗೂ ಪುರೋಹಿತರಿಗೂ ವಿಶ್ವಾಮಿತ್ರರಿಗೂ ಶರಣು ಹೋಗಿ ಜೀವದಾನ ಮಾಡಿರೆಂದು ದೀನನಾಗಿ ಅಂಗಲಾಚಿದ. ಆಗ ವಿಶ್ವಾಮಿತ್ರನು ಅವನಿಗೆ ದೇವತಾಸ್ತೋತ್ರ ಮಾಡ ಹೇಳಿದ. ಅದರಂತೆ ಶುನಃಶ್ಶೇಪನು ಪ್ರಜಾಪತಿ, ಇಂದ್ರ, ಅಗ್ನಿ, ವರುಣ ಮುಂತಾದ ದೇವತೆಗಳನ್ನು ಭಕ್ತಿಭಾವಭರಿತನಾಗಿ ಸ್ತೋತ್ರ ಮಾಡಿದ. ಅವನ ಈ ಕರುಣಾಕ್ರಂದನವನ್ನು ಕೇಳಿ ದೇವತೆಗಳು ಪ್ರಸನ್ನರಾದರು. ಶುನಃಶ್ಶೇಪನನ್ನು

ತಂದೆಯ ಯಜ್ಞದ ಕಂಬಕ್ಕೆ ಬಿಗಿದು ಕಟ್ಟಿದ ಹಗ್ಗಗಳ ಕಟ್ಟು ತಾನಾಗಿ ಕಳಚಿ ಸಡಿಲಾಯಿತು. ಅವನು ಬಂಧಮುಕ್ತನಾದನು. ಇತ್ತ ಉದರ ರೋಗದಿಂದ ಉಬ್ಬಿ ಹೋದ ಹರಿಶ್ಚಂದ್ರ ಮಹಾರಾಜನ ಹೊಟ್ಟೆಯೂ ತಾನಾಗಿ ಕರಗಿ ಬಾಳೆಯೆಲೆಯಂತಾಯಿತು. ಆಗ ವಿಶ್ವಾಮಿತ್ರ ಮುನಿಗಳು ಧಾವಿಸಿ ಬಂದು ಶುನಃಶ್ಯೇಪನನ್ನು ಕಂಬದಿಂದ ಈಚೆಗೆ ಕರೆತಂದು ಬಿಗಿದಪ್ಪಿ ಧನ್ಯ ಶುನಃಶ್ಯೇಪ! ನೀನೇ ಧನ್ಯ. ನಿನ್ನ ಪ್ರಾರ್ಥನೆಯಿಂದ ವರುಣನು ಪ್ರೀತನಾಗಿ ನಿನ್ನನ್ನು ಮುಕ್ತ ಮಾಡಿದ್ದಾನೆ. ರಾಜನ್, ನಿನ್ನ ಹರಕೆಯೂ ಸಂದಿತು. ನೀನೂ ರೋಗ ಮುಕ್ತನಾದಿ ಎಂದು ಹೇಳಿ ಯಜ್ಞವನ್ನು ಸಾಂಗಗೊಳಿಸಿದನು. ಮುಂದೆ ಅಜೀಗರ್ತನು ಕರೆದರೂ ಶುನಃಶ್ಯೇಪನು ಅವನೆಡೆಗೆ ಹೋಗದೇ ವಿಶ್ವಾಮಿತ್ರರನ್ನೇ ತಂದೆಯೆಂದು ಆಶ್ರಯಿಸಿದನು. ವಿಶ್ವಾಮಿತ್ರರೂ ಅವನೊಬ್ಬ ತಮ್ಮ ಮಗನೇ ಎಂದು ದತ್ತಕ ರೂಪದಿಂದ ಅಂಗೀಕರಿಸಿದರು. ಅಂದಿನಿಂದ ಭೃಗುಕುಲದಲ್ಲಿ ಹುಟ್ಟಿದ್ದರೂ ಶುನಃಶ್ಯೇಪನು ಕೌಶಿಕ ಗೋತ್ರದವನಾದನು. ಅವನಿಗೇ ವಿಶ್ವಾಮಿತ್ರರು ದೇವರಾತ ಎಂದು ಹೆಸರಿಟ್ಟರು. ಮತ್ತು ಮಧುಚ್ಛಂದ ಮೊದಲಾದ ತಮ್ಮ ನೂರು ಮಕ್ಕಳಿಗೆ ಅವನನ್ನೂ ಒಬ್ಬ ಸೋದರ ಎಂದು ಭಾವಿಸಲಿಕ್ಕೆ ಹೇಳಿದರು. ಐವತ್ತು ಪುತ್ರರು ಅದಕ್ಕೆ ಸಮ್ಮತಿಸದಿದ್ದಾಗ ಅವರಿಗೆ ಶಾಪವಿತ್ತು ಮ್ಲೇಂಚರನ್ನಾಗಿ ಮಾಡಿದರು. ಮಧುಚ್ಛಂದ ಮುಂತಾದವರು ಒಪ್ಪಿದ್ದರಿಂದ ಅವರ ಮೇಲೆ ವಿಶೇಷ ಅನುಗ್ರಹ ಗೈದರು. ಶುನಃಶ್ಯೇಪನು ಹಾಡಿದ ಮಂತ್ರಗಳನ್ನು ರಾಜರ ಪಟ್ಟಾಭಿಷೇಕ ಕಾಲದಲ್ಲಿ ಅನ್ನುವ ಸಂಪ್ರದಾಯವಿದೆ.

★ ★ ★ ★

## ತಾಪಸ ಚಿರಕಾರಿ (ಶತಾನಂದ)

ಮೇಧಾತಿಥಿ ಗೌತಮರಿಗೆ ಇಬ್ಬರು ಮಕ್ಕಳು. ಅವರೀರ್ವರೂ ಮಹಾಮೇಧಾವಿಗಳಾಗಿದ್ದರು. ಅವರಲ್ಲಿ ಚಿರಕಾರಿ ಎಂಬುವ ಎರಡನೆಯ ಮಗನು ಆಲಸ್ಯ ಪ್ರಕೃತಿಯವನಿದ್ದ. ಯಾವ ಕಾರ್ಯವನ್ನೂ ಅವನು ಬೇಗ ಮಾಡುತ್ತಲಿದ್ದಿಲ್ಲ.

ಒಂದುದಿನ ಮೇಧಾತಿಥಿಗಳು ಅರಣ್ಯದಿಂದ ಕಂದಮೂಲ ಫಲಗಳನ್ನು ತೆಗೆದುಕೊಂಡು ಆಶ್ರಮಕ್ಕೆ ಬಂದಾಗ ಅಲ್ಲಿ ಅವರ ಹೆಂಡತಿಯು ಯಾವುದೋ

ಪರಪುರುಷನ ತೀರಹತ್ತಿರಕ್ಕೆ ಕುಳಿತು ನಗೆಮುಖದಿಂದ ಸರಸಾಲಾಪ ಮಾಡುತ್ತಲಿರುವದು ಕಂಡಿತು. ಅದನ್ನು ಕಂಡ ಕೂಡಲೇ ಮೇಧಾತಿಥಿಗಳಿಗೆ ತಮ್ಮ ಸತಿಯ ನಡತೆಯ ಬಗೆಗೆ ಸಂದೇಹ ಬಂದು ಅವರು ಅಲ್ಲಿ ನಿಲ್ಲದೇ ನದಿಗೆ ನಡೆದುಬಿಟ್ಟರು.

ದಾರಿಯಲ್ಲಿ ಅವರ ಮಗ ಚಿರಕಾರಿ ಭೆಟ್ಟಿಯಾದ. ಅವನಿಗೆ ಅವರು ನೀನೀಗಲೇ ಹೋಗಿ ನಿನ್ನ ತಾಯಿಯನ್ನು ಕೊಂದು ಬಿಡು. ಇದು ನನ್ನ ಆಜ್ಞೆ. ಮೀರಿದರೆ ನಿನಗೆ ಶಾಪಕೊಟ್ಟು ಸುಟ್ಟು ಬಿಡುವೆ ಎಂದು ಹೇಳಿದರು.

ಆದಕ್ಕೆ ಆಗಲಿ ಎಂದು ಹೇಳಿ ಚಿರಕಾರಿಯು ಮನೆಗೆ ಬಂದು ಕೊಡಲಿ ಹುಡುಕಿ ಅದನ್ನು ತೊಳೆದು ಸ್ವಚ್ಛಮಾಡಿ ನಿಧಾನವಾಗಿ ಮಸೆಯಲಿಕ್ಕಾಗಿ ಕಲ್ಲು ಹುಡುಕತೊಡಗಿದ.

ಇತ್ತ ಆಶ್ರಮದಲ್ಲಿ ಮೇಧಾತಿಥಿಯು ಪತ್ನಿಯಾದ ಸುಗಾಥೆಯು ಅಂದೇ ಊರಿಂದ ಬಂದ ತನ್ನ ತಮ್ಮನೊಡನೆ ಮಾತನಾಡಿ ಅವನಿಗೆ ನದಿಗೆ ಹೋಗಿ ಸ್ನಾನ ಮಾಡಿಬರಲಿಕ್ಕೆ ಹೇಳಿದಳು.

ಅವನು ನದಿಗೆ ಬಂದ. ಅಲ್ಲಿ ಈ ಮೊದಲೇ ಬಂದು ಒಂದು ಗಿಡದಡಿಯಲ್ಲಿ ಹೆಂಡತಿಯ ಶೀಲದ ಬಗ್ಗೆ ಸಂಶಯ ಪಿಶಾಚಿ ಬಡೆದ ಮೇಧಾತಿಥಿಗಳು ತಲೆ ಹಿಡಿದುಕೊಂಡು ಕುಳಿತಿದ್ದರು. ಅವರ ಶಾಲಕನು ಹೋಗಿ ಆ ಋಷಿಗಳಿಗೆ ನಮಸ್ಕಾರ ಮಾಡಿ ತಾನು ಇಂದೇ ಬಂದೆನೆಂದೂ ಆಶ್ರಮಕ್ಕೆ ಹೋಗಿ ತಂಗಿಯೊಡನೆ ಮಾತನಾಡಿ ಬಂದೆನೆಂದೂ ಹೇಳಿದನು.

ಅದನ್ನು ಕೇಳಿದ ಕೂಡಲೇ ಋಷಿಗಳ ಸಂಶಯ ಪರಿಹಾರವಾಯಿತು. ಆದರೆ ಅವರು ಕೂಡಲೇ ಅಯ್ಯೋ ಘಾತವಾಯಿತು ಎಂದು ಓಡುತ್ತ ಮನೆಗೆ ಬಂದರು. ತಾವು ಅಪ್ಪಣೆ ಮಾಡಿದಂತೆ ತಮ್ಮ ಮಗ ಚಿರಕಾರಿಯು ಎಲ್ಲಿ ಸುಗಾಥೆಯನ್ನು ಕಡಿದು ಹಾಕಿರುವನೋ ಎಂದು ಅವರ ಎದೆಹೊಡೆದುಕೊಳ್ಳುತ್ತಿತ್ತು. ಧಾಪುಗಾಲಿನಿಂದ ಅವರು ಒಂದೇ ನೆಗೆತಕ್ಕೆ ಆಶ್ರಮಕ್ಕೆ ಬಂದಾಗ ಆಲಸ್ಯ ಪ್ರಕೃತಿಯ ಅವರ ಮಗ ಇನ್ನೂ

ಕೊಡಲಿಯ ಕಾವನ್ನು ಕೈಯಲ್ಲಿ ಹಿಡಿದು ಹೊಡೆಯಲೋ ಬೇಡವೋ ಎಂದು ಮೀನ ಮೇಷ ಮಾಡುತ್ತಲಿದ್ದ. ಅದನ್ನು ನೋಡಿ ಮುನಿಗಳಿಗೆ ಸಂತೋಷವಾಗಿ ಅವರು ಮಗನನ್ನು ಅಪ್ಪಿಕೊಂಡು ನಿನ್ನ ಆಲಸ್ಯವು ನಿನ್ನ ತಾಯಿಯ ತಲೆಯನ್ನು ಉಳಿಸಿತು ಎಂದು ಹೇಳಿದರು. ಮಹಾಭಾರತದ ಶಾಂತಿಪರ್ವದಲ್ಲಿ ಹೇಳಿದ ಈ ಘಟನೆಯಿಂದ 'ಚಿರಕಾರೀ ಪ್ರಶಸ್ಯತೇ' ಯಾವುದೇ ಕಾರ್ಯವನ್ನು ನಿಧಾನವಾಗಿ ಪರಾಂಬರಿಸಿ ವಿಲಂಬದಿಂದ ಮಾಡುವವನು ಪ್ರಶಂಸೆಗೆ ಪಾತ್ರನಾಗುತ್ತಾನೆ ಎಂಬ ಸಂಸ್ಕೃತ ನಾಣ್ನುಡಿಯು ಪ್ರಚಾರದಲ್ಲಿ ಬಂದಿತು.

★ ★ ★ ★

## ಬಕದಾಲ್ಭ್ಯ

ಬಕದಾಲ್ಭ್ಯ ಮುನಿಯು ಪುರಾಣದ ಪ್ರಪಂಚದಲ್ಲಿ ಅತ್ಯಂತ ದೀರ್ಘಾಯುಷ್ಯವುಳ್ಳ ಮಹಾತಪಸ್ವಿಯಾದ ಮುನಿಪುಂಗವನೆಂದು ಪ್ರಖ್ಯಾತನಾಗಿದ್ದಾನೆ. ಅವನು ದೇವೇಂದ್ರನ ಪ್ರಿಯ ಮಿತ್ರನಾಗಿದ್ದನು. ಒಂದು ದಿನ ಸ್ವಯಂ ಸುರರಾಜನು ಭೂಲೋಕಕ್ಕೆ ಬಂದು ಬಕದಾಲ್ಭ್ಯನ ಎಲೆ ಮನೆಯಲ್ಲಿ ಕುಳಿತು ಮಿತ್ರ, ನಿನ್ನ ದೀರ್ಘಾಯುಷ್ಯದ ಸುಖ ದುಃಖಗಳೇನು ಎಂದು ಪ್ರಶ್ನೆ ಮಾಡಿದನು. ಅದಕ್ಕೆ ಸಾವಿರಾರು ವರ್ಷ ಬಾಳಿ ಬದುಕಿದ ಬಕಮುನಿಯು ದೀರ್ಘ ಜೀವನದ ಕಹಿಸಿಹಿಗಳನ್ನು ವಿವರಿಸಿ ಹೇಳಿದನು.

ಬಕನ ಆಶ್ರಮವು ಪೂರ್ವ ಸಮುದ್ರದ ಕರಾವಳಿಯಲ್ಲಿ ಅನೇಕ ಮರಬಳ್ಳಿಗಳಿಂದ ರಮಣೀಯವಾಗಿ ಕಂಗೊಳಿಸುತ್ತಿತ್ತು.

ರಾಮಚಂದ್ರನು ಸೀತೆಯನ್ನು ಪಡೆಯಲಿಕ್ಕಾಗಿ ಸಮುದ್ರವನ್ನು ದಾಟುವದು ಹೇಗೆ ಎಂದು ವಿಚಾರಿಸಲಿಕ್ಕಾಗಿ ಸಮುದ್ರ ತೀರದಲ್ಲಿದ ಬಕದಾಲ್ಭ್ಯನ ಆಶ್ರಮಕ್ಕೆ ಬಂದನು. ಆಗ ಬಕದಾಲ್ಭ್ಯನು ವಿಜಯಾ ಏಕಾದಶಿಯ ಮಹಿಮೆಯನ್ನು ನಿರೂಪಿಸಿದನು. ಅದರಂತೆ ರಾಮನು ಏಕಾದಶಿ ಉಪವಾಸ ಮಾಡಿದ್ದರಿಂದ ಸಮುದ್ರ ದಾಟಿ ರಾವಣನನ್ನು ಕೊಂದನು.

ನೈಮಿಷಾರಣ್ಯದಲ್ಲಿ ಋಷಿಗಳೆಲ್ಲರೂ ವಿಶ್ವಜಿತ್ ಎಂಬ ಯಜ್ಞ ಮಾಡಿ ಕೊನೆಗೆ ಬಕದಾಲ್ಭ್ಯನೊಂದಿಗೆ ಪಾಂಚಾಲ ರಾಜನ ಕಡೆಗೆ ಹೋದರು. ಅವನು ಋಷಿಗಳಿಗೆ ಇಪ್ಪತ್ತೊಂದು ಹಸುಗಳನ್ನು ಇತ್ತನು. ಆಗ ದಾಲ್ಭ್ಯನು ಆ ಮುನಿಗಳಿಗೆ ಈ ಗೋವುಗಳನ್ನೆಲ್ಲ ನೀವೇ ಇಟ್ಟುಕೊಳ್ಳಿರಿ. ನನಗೆ ಇದರಲ್ಲಿ ಪಾಲು ಬೇಡ. ನಾನು ಮತ್ತೆ ಬೇರೆಲ್ಲಿಯಾದರೂ ಹೋಗಿ ಭಿಕ್ಷೆ ಬೇಡಿ ತರುತ್ತೇನೆ ಎಂದು ಹೇಳಿ ಹಸ್ತಿನಾವತಿಯ ರಾಜ ಧೃತರಾಷ್ಟ್ರನ ಬಳಿಗೆ ಹೋಗಿ ಯಾಚನೆಯನ್ನು ಮಾಡಿದನು.

ಆಗ ಧೃತರಾಷ್ಟ್ರನಿಗೆ ಕೋಪಬಂದಿತು. ಆಗ ಆಕಸ್ಮಿಕವಾಗಿ ಅಲ್ಲಿ ಕೆಲವು ದನಗಳು ಸತ್ತು ಬಿದ್ದಿದ್ದವು. ಧೃತರಾಷ್ಟ್ರನು ಕುಹಕ ಬುದ್ಧಿಯಿಂದ ಬಕನಿಗೆ ಈ ಪಶುಗಳನ್ನು ನೀನು ತೆಗೆದುಕೊಂಡು ಹೋಗು ಎಂದು ಹೇಳಿದನು.

ಅದನ್ನು ಕೇಳಿ ಬಕನ ಪಿತ್ತ ಕೆರಳಿ ಅವನು ಆ ಸತ್ತ ಪಶುಗಳನ್ನೇ ತನ್ನ ಆಶ್ರಮಕ್ಕೆ ತಂದು ಅವುಗಳನ್ನು ಕೊಂದು ಅವುಗಳ ಮೈಯಿಂದ ಮಾಂಸವನ್ನು ತೆಗೆದು ಕುರುರಾಜನಿಗೆ ಕಷ್ಟವಾಗಲಿ ಎಂದು ಸರಸ್ವತೀ ನದಿಯ ದಂಡೆಯ ಮೇಲೆ ಹೋಮ ಮಾಡಹತ್ತಿದನು. ಅದರಿಂದ ಧೃತರಾಷ್ಟ್ರನ ರಾಜ್ಯದಲ್ಲಿ ಒಮ್ಮೆಲೆ ಬರಗಾಲ, ಬೇನೆ, ಬೇಸರಿಕೆ, ಸಾವು, ನೋವುಗಳು ಉಂಟಾಗತೊಡಗಿದವು. ಅದರ ಕಾರಣ ತಿಳಿಯದೇ ಅವನು ಪ್ರಶ್ನೆ ಹೇಳುವವರನ್ನು ವಿಚಾರಿಸಲು ಅವರು ಬಕದಾಲ್ಭ್ಯನು ನಿನ್ನ ಮಾರಣ ಹೋಮ ನಡೆಸಿದ್ದಾನೆಂದು ಹೇಳಿದರು. ಆಗ ಧೃತರಾಷ್ಟ್ರನು ಸರಸ್ವತೀ ತಟಾಕಕ್ಕೆ ಓಡಿ ಬಂದು ಆ ಮುನಿಯ ಪಾದಕ್ಕೆ ಬಿದ್ದು ನನ್ನ ತಪ್ಪನ್ನು ಕ್ಷಮಿಸಿ ಈ ಯಾಗದಿಂದ ವಿರಮಿಸಬೇಕೆಂದು ಬೇಡಿಕೊಂಡನು. ಆಗ ಆ ಋಷಿಯು ಪ್ರಸನ್ನನಾಗಿ ಆ ಮಾರಣ ಹೋಮವನ್ನು ಬಿಟ್ಟು ವಿಶ್ವಕಲ್ಯಾಣಯಾಗವನ್ನು ಪ್ರಾರಂಭಿಸಿದನು. ಕೂಡಲೇ ಅದರಿಂದ ಲೋಕಕ್ಕೆಲ್ಲ ಕ್ಷೇಮ ಉಂಟಾಯಿತು. ಆಗ ಧೃತರಾಷ್ಟ್ರನು ತನ್ನ ಸರ್ವಸ್ವವನ್ನೇ ಅವನಿಗೆ ಕೊಡ ಮಾಡಿದನು. ಆದರೆ ವಿರಕ್ತನಾದ ಆ ಮುನಿಯು ಅದಾವದನ್ನೂ ತಾನು ಮುಟ್ಟದೆ ಕೇವಲ ಕೆಲವು ಗೋವುಗಳನ್ನು ಮಾತ್ರ ಅವನಿಂದ ಕೊಂಡು ನೈಮಿಷಾರಣ್ಯಕ್ಕೆ ತೆರಳಿದನು.

ಮುಂದೆ ಅರ್ಜುನನು ಅಶ್ವಮೇಧ ಯಜ್ಞದ ಕುದುರೆಯ ಬೆನ್ನ ಹಿಂದೆ ಬಂದಾಗ ತಲೆಯ ಮೇಲೆ ಆಲದ ಎಲೆ ಇಟ್ಟುಕೊಂಡು ಕುಳಿತ ಈ ಮುನಿಯನ್ನು ಕಂಡು

ನಮಸ್ಕರಿಸಿ ತಮಗೆ ಎಷ್ಟು ವರ್ಷ ಎಂದು ಕೇಳಿದನು. ಅದಕ್ಕೆ ಬಕ ಮುನಿಯು ನಾನು ಇಪ್ಪತ್ತು ಬ್ರಹ್ಮದೇವರನ್ನು ಕಂಡಿದ್ದೇನೆ ಎಂದು ಹೇಳಿದರು. ಆಗ ಅರ್ಜುನನು ಅವರನ್ನು ಪಲ್ಲಕ್ಕಿಯಲ್ಲಿ ಕೂಡಿಸಿಕೊಂಡು ಅಶ್ವಮೇಧ ಯಾಗಕ್ಕೆ ಕರೆದುಕೊಂಡು ಬಂದನು.

ಒಮ್ಮೆ ಬಕ ಮುನಿಯು ಶ್ವೇತವರಾಹ ಕಲ್ಪದ ಬ್ರಹ್ಮದೇವರ ಬಳಿಗೆ ಹೋಗಿ ನಾನು ನಿನಗಿಂತ ಹಿರಿಯ ಮನುಷ್ಯ ಎಂದು ಹೇಳಿದಾಗ ಬ್ರಹ್ಮದೇವರು ಅವನಿಗೆ ಅನೇಕ ಕಲ್ಪಗಳ ಅಸಂಖ್ಯ ಹಿಂದಿನ ಬ್ರಹ್ಮದೇವರ ದರ್ಶನವನ್ನು ಮಾಡಿಸಿದರಂತೆ. ಅದನ್ನು ಕಂಡು ಸೋಜಿಗಗೊಂಡು ಬಕರು ಅನಂತಕೋಟಿ ಬ್ರಹ್ಮಾಂಡನಾಯಕನಾದ ಶ್ರೀಹರಿಯನ್ನು ಹೆಚ್ಚು ಹೆಚ್ಚು ಧ್ಯಾನ ಮಾಡಿ ತಮ್ಮ ತಪಃಸಾಮರ್ಥ್ಯದಿಂದ ಉದ್ಧೃತರಾದರು.

★ ★ ★ ★

## ಆತ್ರೇಯಿ

ಮಹರ್ಷಿಗಳಾದ ಅತ್ರಿ ಮುನಿಗಳಿಗೆ ತಮ್ಮ ಪ್ರೀತಿಯ ಮಗಳಾದ ಆತ್ರೇಯಿಯ ಮೇಲೆ ವಿಶೇಷ ವಾತ್ಸಲ್ಯವಿದ್ದಿತು. ಅವಳು ತನ್ನ ತಂದೆಯು ಶಿಷ್ಯರಿಗೆ ಪಾಠ ಹೇಳುವದನ್ನು ಕೇಳಿಯೇ ಮಹಾಪಂಡಿತಳಾಗಿದ್ದಳು. ತಪಸ್ಸು, ವಿದ್ಯೆ, ಕಾಂತಿಗಳಿಂದ ಮಹಾತೇಜಸ್ವಿನಿಯಾಗಿ ಕಂಗೊಳಿಸುವ ಅವಳನ್ನು ಅತ್ರಿ ಋಷಿಗಳು ಅಗ್ನಿ ಕುಮಾರನಾದ ಅಂಗಿರನಿಗೆ ಕೊಟ್ಟು ವಿವಾಹ ಮಾಡಿದರು. ಆತ್ರೇಯಿಗೆ ದತ್ತ ದುರ್ವಾಸ ಸೋಮ ಎಂಬ ಮೂವರು ಸಹೋದರರಿದ್ದರು. ಋಗ್ವೇದದ ಮಂತ್ರದರ್ಶಿನೀ ಋಷೀಕಾ ಅಪಾಲೆಯು ಆತ್ರೇಯಿಯ ಸೋದರಿಯಾಗಿದ್ದಳು. ಮತ್ತು ಇನ್ನೊಬ್ಬ ಸೂಕ್ತದ್ರಷ್ಟ್ರೀ ವೈದಿಕ ವಿದುಷಿಯಾದ ವಿಶ್ವವಾರೆಯೂ ಇವಳ ಭಗಿನಿಯೇ.

ಆತ್ರೇಯಿಯೂ ತನ್ನ ಸೋದರ ಸೋದರಿಯರಂತೆ ವಿದ್ವದ್ ವನಿತೆಯಾಗಿದ್ದರೂ ತಾನು ಪತಿಗೃಹಕ್ಕೆ ಹೋದ ಬಳಿಕ ಪತಿ ಅಂಗಿರನನ್ನೂ

ಮಾವಭಾವಂದಿರನ್ನೂ ಪರಿಪರಿಯ ಸೇವೆ ಶುಶ್ರೂಷೆಗಳಿಂದ ಸಂತೋಷಪಡಿಸಿದಳು.

ಆದರೆ ಉಗ್ರ ಸ್ವಭಾವದ ಇವಳ ಪತಿ ಅಂಗಿರನು ಮಾತ್ರ ಪತ್ನಿಯ ಕಡೆಗೆ ಯಾವಾಗಲೂ ಉರಿ ಮೋರೆಯಿಂದಲೇ ನೋಡಿ ಅವಳನ್ನು ಬೈಯ್ಯುತ್ತಿದ್ದನು. ಆದರೂ ಆತ್ರೇಯಿಯು ತಿರುಗಿ ವಾದಿಸದೇ ತಲೆ ತಗ್ಗಿಸಿಕೊಂಡು ಅವನು ಹೇಳಿದ ಕೆಲಸಗಳನ್ನೆಲ್ಲ ಪೂರೈಸಿ ಅತ್ತೆ ಮಾವಂದಿರ ಸೇವೆಯನ್ನೂ ಮನಃಪೂರ್ವಕವಾಗಿ ಮಾಡುತ್ತಿದ್ದಳು.

ಅವಳು ಇಂತು ಅತ್ತೆ ಮನೆಯ ಜನರ ಸೇವೆಯಲ್ಲಿಯೇ ತನ್ನ ಶರೀರವನ್ನು ಸವೆಯಿಸುತ್ತಲ್ಲಿದ್ದರೂ ಅಂಗಿರನು ಮಾತ್ರ ಆದರಿಂದ ಸಂತುಷ್ಟನಾಗದೇ ಅವಳನ್ನು ಕಂಡಕೂಡಲೇ ಕೋಪದಿಂದ ಕೆಂಡನಾಗಿ ಹೀನಾಮಾನವಾಗಿ ನಿಂದಿಸಿ ತಾನೂ ಸಂತಾಪ ಮಾಡಿಕೊಳ್ಳುತ್ತಿದ್ದನು.

ಇದನ್ನು ಕಂಡು ಆತ್ರೇಯಿಗೆ ಬಹಳ ದುಃಖವಾಗಿ ಅವಳು ಒಂದು ದಿನ ತನ್ನ ಮಾವ ಅಗ್ನಿಯ ಬಳಿಗೆ ಹೋಗಿ 'ನನ್ನ ಪತಿ ನನ್ನನ್ನು ಕಂಡರೆ ಹೀಗೇಕೆ ಉರಿದು ಬೀಳುತ್ತಾರ್ತೆ? ನನ್ನಸೇವೆ ಅವರಿಗೆ ಸಂತಾಪಕ್ಕೆ ಕಾರಣವಾಗುವದೆಂದು ನನಗೆ ಬಹಳ ದುಃಖವಾಗುತ್ತಲಿದೆ. ಇದಕ್ಕೆ ನಾನೇನು ಮಾಡಲಿ' ಎಂದು ಕೇಳಿದಳು.

ಆದಕ್ಕೆ ಅಗ್ನಿಯ ಅಂತಃಕರಣ ಕರಗಿ ಅವನು ಅವಳನ್ನುಸಂತೈಸಿ 'ವತ್ಸೆ, ನೀನೇನೂ ಗಾಬರಿಯಾಗಬೇಡ. ನಿನ್ನ ಗಂಡ ನನ್ನ - ಅಂದರೆ ಅಗ್ನಿಯ -ಮಗನಲ್ಲವೇ! ಉರಿದಾಟ ಅವನ ಸ್ವಭಾವ ಧರ್ಮ. ಆದ್ದರಿಂದ ನೀನು ಅವನಿಗೆ ತಣ್ಣೀರನ್ನು ಹನಿಸಿ ಶಾಂತಗೊಳಿಸು' ಎಂದು ಹೇಳಿದನು.

ಆಗ ಆತ್ರೇಯಿಯು ಪರುಷ್ಣೀ ಎಂಬ ನದಿಯಾಗಿ ಹರಿದಳು. ತನ್ನ ಪತ್ನಿಯ ಪ್ರೇಮರಸದಲ್ಲಿ ಮುಳುಗಿ ಎದ್ದ ಬಳಿಕ ಅಂಗಿರನು ಶಾಂತನಾಗಿ ಅವಳ ಮೇಲೆ ಪ್ರಸನ್ನನಾದನು. ಪತಿವ್ರತೆಯಾದ ಆತ್ರೇಯಿಯು ತನ್ನ ಪತಿಯನ್ನು ತನ್ನ ನೀರಿನ ಪ್ರವಾಹದಲ್ಲಿ ಈಜಾಡಿಸಿ ಪ್ರೀತಿಗೊಳಿಸಿದಳು. ಅನಂತರ ಅವಳಿಗೆ ಜನಿಸಿದ ಮಕ್ಕಳು ಆಂಗಿರಸರು ಎಂದು ವೈದಿಕ ಪ್ರಪಂಚದಲ್ಲಿ ವಿಖ್ಯಾತರಾದರು.

# ಜಾಬಾಲಿ

ಚಿತ್ರಕೂಟ ಪರ್ವತದ ಮೇಲೆ ಭರತನು ರಾಮನ್ನು ಭೇಟಿಯಾಗಿ ಅಯೋಧ್ಯೆಗೆ ಮರಳಿ ಬಂದು ರಾಜ್ಯವನ್ನು ಆಳಬೇಕೆಂದು ಬಲವಂತದಿಂದ ಭಿನ್ನವಿಸಿಕೊಂಡಾಗ ರಾಮನು ''ತಂದೆಯ ಆಜ್ಞೆಯನ್ನು ಪಾಲಿಸುವದೇ ಮಕ್ಕಳ ಮುಖ್ಯಧರ್ಮವಾದುದರಿಂದ ದಶರಥ ರಾಜನ ಅಪ್ಪಣೆಯಂತೆ ನಾನು ವನದಲ್ಲಿಯೇ ಇರುವೆ. ನೀನು ರಾಜ್ಯವನ್ನೇ ಪಾಲಿಸು'' ಎಂದು ಹೇಳುವನು.

ಆಗ ಒಮ್ಮೆಲೇ ಜ್ಞಾನನಾದ ಜಾಬಾಲಿ ಋಷಿಯು ನಡುವೆ ಬಾಯಿಹಾಕಿ ''ರಾಮ, ಎಲ್ಲಿಯ ತಂದೆ ಎಲ್ಲಿಯ ಮಗ! ಯಾರಿಗಾರೂ ಸಂಬಂಧವಿಲ್ಲ. ಊರಿಗೆ ಹೊರಟವರು ದಾರಿಯಲ್ಲಿ ಕೂಡಿದಂತೆ ಸಂಸಾರದಲ್ಲಿಯೂ ಮನುಷ್ಯರು ಒಂದೆಡೆ ಕೂಡಿರುತ್ತಾರೆ ಅಷ್ಟೆ. ತಾಯಿ-ತಂದೆ ಎನ್ನುವ ಮಾತೆಲ್ಲ ಸುಳ್ಳು. ಸುಮ್ಮನೆ ರಾಜ್ಯಬಿಟ್ಟು ಅಡವಿಯಲ್ಲಿ ದುಃಖಪಡಬೇಡ. ಊರಿಗೆ ಹೋಗಿ ಅರಸನಾಗಿ ರಾಜ್ಯಸುಖವನ್ನು ಭೋಗಿಸು. ನಿನಗೂ ದಶರಥನಿಗೂ ಏನೂ ಸಂಬಂಧವಿಲ್ಲ. ಕಣ್ಣಿಗೆ ಕಂಡದ್ದು ಮಾತ್ರ ಸತ್ಯ. ಉಳಿದುದೆಲ್ಲವೂ ಸುಳ್ಳು. ದಾನ ಧರ್ಮ ಸತ್ಯ ಇವೆಲ್ಲ ಹೊಟ್ಟೆ ಹೊರಕೊಳ್ಳಬೇಕಾದ ಗೊಡ್ಡು ವೈದಿಕ ಬ್ರಾಹ್ಮಣರು ನಿರ್ಮಿಸಿದ ದುಡ್ಡು ಸೆಳೆಯುವ ಹಂಚಿಕೆಗಳಾಗಿವೆ. ಶ್ರಾದ್ಧ ಪಕ್ಷಗಳಲ್ಲಿ ಬ್ರಾಹ್ಮಣ ಭೋಜನಾದಿಗಳಿಂದ ಬರೀ ಅನ್ನ ಧ್ವಂಸಮಾತ್ರವಾಗುವದಲ್ಲದೇ ಬೇರೆ ಪ್ರಯೋಜನವೇನೂ ಇಲ್ಲ. ಇದ್ದ ಮನುಷ್ಯರಿಗೆ ಊಟಕ್ಕೆ ಹಾಕಿದರೆ ಸತ್ತ ಮನುಷ್ಯರ ಹೊಟ್ಟೆ ತುಂಬುವಂತಿದ್ದರೆ ಊರಿಗೆ ಹೋದವನ ಹೆಸರಿನಿಂದ ಮನೆಯಲ್ಲಿ ಯಾರಿಗಾದರೂ ಊಟಕ್ಕೆ ಹಾಕಿದರೆ ಅವನ ಹೊಟ್ಟೆ ಏಕೆ ತುಂಬಬಾರದು? ಆದುದರಿಂದ ವಿಚಾರಿಸಿ ನೋಡಿದರೆ ಈ ಧರ್ಮ ಕರ್ಮ ಶ್ರಾದ್ಧ ಸತ್ಯ ಮೊದಲಾದವುಗಳಲ್ಲಿ ಅರ್ಥವಿಲ್ಲ. ಆದುದರಿಂದ ನೀನು ಅಡವೀಪಾಲಾಗಿ ಸುಮ್ಮನೆ ದುಃಖಿಸಬೇಡ. ಅಯೋಧ್ಯೆಗೆ ಹೋಗಿ ಅರಸನಾಗಿ ಅಭಿಷಿಕ್ತನಾಗಿ ಆನಂದಪಡು'' ಎಂದು ಅಸ್ಖಲಿತವಾಣಿಯಿಂದ ಉಪದೇಶಗೈದನು.

ಆಗ ಸತ್ಯಧರ್ಮ ಕರ್ಮಗಳ ಮರ್ಮಜ್ಞನೂ ಸರ್ವಜ್ಞನೂ ಆದ ಶ್ರೀರಾಮ ಅವನ ಪ್ರತಿ ಅಕ್ಷರಗಳನ್ನು ಖಂಡಿಸಿ ಆಸ್ತಿಕಮತದ ಬೇರುಗಳನ್ನು ನಿರ್ಮೂಲನೆ ಮಾಡಿ

ಧರ್ಮ ಕರ್ಮ ಸತ್ಯ ಪಿತ್ರಾಜ್ಞಾ ಪರಿಪಾಲನಾದಿಗಳ ಪ್ರಯೋಜನ ಮಹಿಮೆ ಪ್ರಭಾವಗಳನ್ನು ಸುಂದರವಾಗಿ ತಿಳಿಸಿ ಹೇಳಿದನು. ಆಗ ನಾಸ್ತಿಕನಂತೆ ನಟಿಸಿದ ಆ ಜಾಬಾಲಿಯು ಕೈ ಮುಗಿದು "ಭಗವನ್ ಹೇಗಾದರೂ ಮಾಡಿ ನೀನು ಅಯೋಧ್ಯೆಗೆ ಪುನರಾಗಮಿಸಲಿ. ನಿನ್ನ ಅನುಗ್ರಹ ನಮ್ಮ ಮೇಲೆ ಆಗಲಿ ಎಂದೇ ನಾನು ಈ ರೀತಿಯ ಈ ಮಾತುಗಳನ್ನಾಡಿದೆ" ಎಂದು ಕ್ಷಮಾಪಣೆ ಕೇಳಿಕೊಳ್ಳುತ್ತಾನೆ. ಆಗ ವಸಿಷ್ಠರಾದರೂ ಅವನ ಮಾತನ್ನು ಅನುಮೋದಿಸಿ ನೀನು ಮರಳಿ ಹೋಗಬೇಕೆಂಬ ಬುದ್ಧಿಯಿಂದಲೇ ಅವರು ಹೀಗೆಲ್ಲ ನುಡಿದದ್ದು ಎಂದು ತಿಳಿ ಹೇಳುತ್ತಾರೆ.

★ ★ ★ ★

## ಇಂದ್ರೋತ

ಹಸ್ತಿನಾವತಿಯ ದೊರೆ ಜನಮೇಜಯ ಒಮ್ಮೆ ಪ್ರಮಾದದಿಂದ ತಿಳಿಯದೇ ಒಬ್ಬ ಬ್ರಾಹ್ಮಣನನ್ನು ಕೊಂದು ಬಿಟ್ಟ. ಪಶ್ಚಾತ್ತಾಪದಿಂದ ಕುದಿದು ಹೋದ ಅವನು ಇಂದ್ರೋತ ಮುನಿಗಳಲ್ಲಿ ಬಂದು ತನ್ನ ಬ್ರಹ್ಮಹತ್ಯಾ ಪಾಪಕ್ಕೆ ಪರಿಮಾರ್ಜನದ ದಾರಿತೋರಬೇಕೆಂದು ಬಿನ್ನಹಗೈದ.

ಅದಕ್ಕೆ ತಪಃಪೂತರಾದ ಇಂದ್ರೋತರು ಪುಷ್ಕರ, ತ್ರಿವೇಣೀ, ಪ್ರಭಾಸ, ಸರಸ್ವತೀ ಮುಂತಾದ ಪುಣ್ಯತೀರ್ಥಗಳಲ್ಲಿ ಮಿಂದು ಬರಲಿಕ್ಕೆ ಅಪ್ಪಣೆಯಿತ್ತು ಕೊನೆಗೆ ಅವನಿಗೆ "ಮಹಾರಾಜ, ಈ ಎಲ್ಲ ತೀರ್ಥಸ್ನಾನಕ್ಕಿಂತ ಮೊದಲು ಇನ್ನೆಂದೂ ಪಾಪಕೆಲಸ ಮಾಡುವದಿಲ್ಲವೆಂದು ಪ್ರತಿಜ್ಞೆ ಮಾಡು. ಪವಿತ್ರ ಕಾರ್ಯಗಳನ್ನು ನಿರಂತರವೂ ಮಾಡುತ್ತಲಿದ್ದರೆ ದೊಡ್ಡವರ ಸಂಗ ಸಹವಾಸಗಳಿಂದ ನಿನ್ನ ಜೀವನವೇ ಒಂದು ಪಾವನ ತೀರ್ಥವಾಗುವದು" ಎಂದು ಉಸುರಿದರು.

ಅದರಂತೆ ಮಹಾರಾಜನು ಎಲ್ಲ ತೀರ್ಥಸ್ನಾನ ಮಾಡಿ ಶುದ್ಧನಾಗಿ ಸತ್ಕರ್ಮಗಳಿಂದ ತನ್ನ ಬ್ರಹ್ಮಹತ್ಯೆಯ ಪಾಪವನ್ನು ಕಳೆದುಕೊಂಡನು. ಮುಂದೆ ಇಂದ್ರೋತರು ಪಾಪಮುಕ್ತನಾದ ಆ ಭೂಪತಿಯಿಂದ ತಾವೇ ನಿಂತು ಪುರೋಹಿತರಾಗಿ ಅಶ್ವಮೇಧ ಯಾಗವನ್ನು ಮಾಡಿಸಿದರು.

★ ★ ★ ★

# ಮಾರ್ಕಂಡೇಯ

ಭೃಗುಋಷಿಯ ಮಗನಾದ ಮೃಕಂಡು ಎಂಬ ಋಷಿಗೆ ಬಹುಕಾಲದಿಂದ ಮಕ್ಕಳಿರಲಿಲ್ಲ. ಆ ಮೃಕಂಡುಮುನಿ, ಸತಿಯಾದ ಮರುದ್ವತಿಯೊಂದಿಗೆ ಸತ್‌ಸಂತಾನಕ್ಕಾಗಿ ಅರಣ್ಯದಲ್ಲಿ ಬಹುಕಾಲ ಕೃಚ್ಛ್ರ ತಪಸ್ಸನ್ನು ಆಚರಿಸಿದನು. ಅದರ ಫಲವಾಗಿ ತೇಜಸ್ವಿ ಸುತನೊಬ್ಬ ಜನಿಸಿದ. ಆ ಶಿಶು ಶೈಶವದಶೆಯಿಂದಲೇ ಸದ್ಗುಣಶಾಲಿಯಾಗಿ ಬೆಳೆಯಿತು. ಕಂಡಕಂಡ ಗುರು-ಹಿರಿಯರೆಲ್ಲರಿಗೂ ಸಂಭ್ರಮದಿಂದ ನಮಸ್ಕರಿಸುವುದು ಆ ಮಗುವಿನ ಸಹಜ ಬಾಲಲೀಲೆಯೇ ಆಗಿತ್ತು. ತನ್ನ ಸಹಜ ಸರಳ ಸದ್ಗುಣಗಳಿಂದ ಸಕಲ ಸುಜನಸಮೂಹವನ್ನೂ ಸಂತೋಷಗೊಳಿಸುತ್ತಾ ಬೆಳೆಯುತ್ತಿರುವ ಆ ಮಗುವಿಗೆ ಐದು ವರ್ಷಗಳು ತುಂಬಿದವು. ಹೀಗಿರಲು ಮೃಕುಂಡುಮುನಿಯ ಮನೆಗೊಮ್ಮೆ ಸುಯೋಗದಿಂದ ಯೋಗಿವರ್ಯರೊಬ್ಬರು ಬಂದರು. ಮೃಕಂಡುಮುನಿ ತನ್ನ ಸತಿಸುತರೊಂದಿಗೆ ಆ ಯೋಗಿವರ್ಯರನ್ನು ಸಂಭ್ರಮಾದರಗಳಿಂದ ಸತ್ಕರಿಸಿದರು. ಭೋಜನದ ಅನಂತರ ಆಸನದಲ್ಲಿ ಆಸೀನನಾದ ಆ ಜ್ಞಾನಿಯು, ಅಂಗಳದಲ್ಲಿ ಆಟವಾಡುವ ಮೃಕಂಡು ಸುತನನ್ನು ಕಂಡು ಅನುಕಂಪಗೊಂಡರು. ಆಗ ಆ ಯೋಗಿಯನ್ನು ಮೃಕಂಡುಮುನಿ ಕೇಳಿದರು. 'ಪೂಜ್ಯರೇ! ಈ ನನ್ನ ಮಗನ ಆಯುಷ್ಯವೆಷ್ಟೆಂದು ದಯವಿಟ್ಟು ಸ್ಪಷ್ಟಪಡಿಸಿರಿ.'

ಯೋಗಿವರ್ಯರು ಉತ್ತರಿಸಿದರು. 'ಒಟ್ಟು ಐದು ವರ್ಷ ಐದು ತಿಂಗಳು ಐದು ದಿನಗಳು ಮಾತ್ರ ಈ ಮಗುವಿನ ಆಯುಷ್ಯವೆಂದು ಬ್ರಹ್ಮಸಂಕಲ್ಪವಾಗಿದೆ. ಈಗಾಗಲೇ ಐದು ವರ್ಷ ಕಳೆದಿರುವ ಈ ಶಿಶುವಿಗೆ ಇನ್ನೈದು ತಿಂಗಳು ಐದು ದಿನಗಳು ಮಾತ್ರ ಉಳಿದಿವೆ. ಶೋಕ ಬೇಡ. ಬಹುಕಾಲ ಭೌತಿಕ ವಿಷಯಭೋಗಗಳ ಸುಳಿಘಳಿಗೊಳಗಾಗಿ ಬಾಳಿ ಬಳಲುತ್ತ ಅನರ್ಥಪರಂಪರೆಗೆ ಗುರಿಯಾಗುವುದಕ್ಕಿಂತ ಸ್ವಲ್ಪ ಕಾಲ ಅಧ್ಯಾತ್ಮ ಮಾರ್ಗದಲ್ಲಿ ಸಾಧನಾನುಷ್ಠಾನಗಳನ್ನು ಸಾಧಿಸುವುದೇ ಸಾಧುವೆನಿಸುತ್ತದೆ. ಸರ್ವರಿಗೂ ಮಂಗಳವಾಗಲಿ.' ಎಂದು ಆ ಯೋಗಿ ಹಾರೈಸಿ ತೀರ್ಥಯಾತ್ರೆಗೆ ಹೊರಟರು.

ಮೃಕಂಡು ಮುನಿ ಕೂಡಲೇ ಮಗನಿಗೆ ಉಪನಯನಸಂಸ್ಕಾರ ನೆರವೇರಿಸಿದರು. ಸಂಧ್ಯಾವಂದನೆ, ವೇದಮಂತ್ರಗಳು, ಸದಾಚಾರಸ್ಮೃತಿಗಳನ್ನು ವಾತ್ಸಲ್ಯದಿಂದ ಉಪದೇಶಿಸಿದರು. ಅನಂತರ ವಾತ್ಸಲ್ಯದಿಂದ ಹೀಗೆ ಹಿತನುಡಿಗಳನ್ನಾಡಿದರು. 'ವತ್ಸ! ನಾವೆಲ್ಲರೂ ಕಾಲಪುರುಷನ ಕೈಗೊಂಬೆಗಳು. ನಮ್ಮ ಕ್ಷಣಿಕ ಬದುಕಿನಲ್ಲಿ ಅತ್ಯಮೂಲ್ಯವಾದ ಪ್ರತಿಕ್ಷಣಗಳನ್ನು ವ್ಯರ್ಥಗೊಳಿಸದೇ, ಸದಾಚಾರಸದ್ವಿಚಾರಗಳಿಂದ ಸಾರ್ಥಕಗೊಳಿಸಬೇಕು. ಜ್ಞಾನವೃದ್ಧರೂ, ತಪೋವೃದ್ಧರೂ ಸದಾಚಾರವೃದ್ಧರೂ ಲೌಕಿಕ-ಅಲೌಕಿಕ ಅನುಭವವೃದ್ಧರೂ ಆದ ಗುರುಹಿರಿಯರೆಲ್ಲರ ವಾತ್ಸಲ್ಯಭರಿತ ಆಶೀರ್ವಾದಗಳನ್ನುಗಳಿಸಬೇಕು. ಇದರಿಂದ ಸರ್ವವಿಧ ಶ್ರೇಯಃಸಮೃದ್ಧಿಯು ಲಭಿಸುತ್ತದೆ. ಮೃತ್ಯುದೇವತೆ ನಮ್ಮ ಜುಟ್ಟಿಗೇ ಕೈಹಾಕಿ ಸಿಟ್ಟಿನಿಂದ ಎಳೆಯುತ್ತಿದೆಯೆಂದು ತಿಳಿದು ಸದ್ಧರ್ಮಾಚರಣೆಗಳನ್ನು ಬೇಗಬೇಗ ಮಾಡಿಬಿಡಬೇಕು.

> ಶ್ವಃಕಾರ್ಯಮದ್ಯ ಕುರ್ವೀತ ಪೂರ್ವಾಹ್ಣೇ ಚಾಪರಾಹ್ಣಿಕಮ್ ।
> ನಚ ಪ್ರತೀಕ್ಷತೇ ಕಾಲಃ ಕೃತಮಸ್ಯ ನವಾ ಕೃತಮ್ ॥

ನಾಳೆ ಮಾಡುವಂತಹ ಕರ್ತವ್ಯದ ಹೊಣೆಯನ್ನು ಇಂದೇ ಪೂರೈಸಿ ಬಿಡಬೇಕು. ಮಧ್ಯಾಹ್ನದ ಅನಂತರ ಮಾಡಬೇಕಾದ ಕರ್ತವ್ಯಭಾರವನ್ನು ಬೆಳಿಗ್ಗೆಯೇ ಮಾಡಿಬಿಡಬೇಕು. ಇವನು ತನ್ನ ಕರ್ತವ್ಯವನ್ನು ಪೂರೈಸಿದನೋ? ಇಲ್ಲವೋ? ಎಂದು ಕಾಲಪುರುಷ ಯಾರನ್ನೂ ಕಾಯುವುದಿಲ್ಲ.

ತಂದೆಯು ಮೃದುಮಧುರಹಿತನುಡಿಗಳಂತೆ ಮೃಕಂಡುಸುತನು, ಯೋಗಿಗಳು ಹತ್ತಾರು ವರ್ಷಗಳಲ್ಲಿ ಮಾಡುವಂತಹ ಉತ್ತಮ ಸಾಧನಾನುಷ್ಠಾನಗಳನ್ನು ಈತ ಕೇವಲ ಐದೇ ತಿಂಗಳಲ್ಲಿ ಉತ್ಸಾಹದಿಂದ ಆಚರಿಸಿದನು. ಈ ಪುಣ್ಯದ ಫಲವೋ ಎಂಬಂತೆ ಪ್ರಸಿದ್ಧ ಪವಿತ್ರ ತೀರ್ಥಕ್ಷೇತ್ರ ಯಾತ್ರೆ ಮಾಡಿಕೊಂಡು ಬರುತ್ತಿದ್ದ ಸಪ್ತರ್ಷಿಗಳು ಈ ಮೃಕಂಡು ಆಶ್ರಮದ ಮಾರ್ಗದಲ್ಲೇ ಬರುತ್ತಿದ್ದರು. ಆಗ ದಂಡಕಮಂಡಲುಗಳನ್ನು ಹಿಡಿದು ಮಾರ್ತಂಡಮಂಡಲದಲ್ಲಿ ಪುಂಡರೀಕಾಕ್ಷನನ್ನು ಧ್ಯಾನಿಸುತ್ತಿದ್ದ ಮೃಕಂಡುಸುತನು, ತೇಜಸ್ವಿ ಸಪ್ತರ್ಷಿಮಂಡಲವನ್ನು ಕಂಡು

ಆನಂದಗೊಂಡು ಸಂಭ್ರಮದಿಂದ ಧಾವಿಸಿ ಬಂದ. ಮೊದಲಿಗಿದ್ದ ವಸಿಷ್ಠರಿಗೆ ನಿಷ್ಠೆಯಿಂದ ಸಾಷ್ಟಾಂಗ ನಮಸ್ಕಾರ ಸಲ್ಲಿಸಿದ. ಅವರು ಅನುರಾಗದಿಂದ 'ದೀರ್ಘಾಯುಷ್ಮಾನ್ ಭವ' ಎಂದು ಹರಸಿ ಮುಂದುವರೆದರು. ಅನಂತರ ಮರೀಚಿ ಮುಂತಾದ ಮಹರ್ಷಿಗಳಿಗೂ ಕ್ರಮವಾಗಿ ಉದ್ದಂಡ ನಮಸ್ಕಾರಗಳನ್ನು ಸಲ್ಲಿಸಿದ. ಅವರೆಲ್ಲರೂ ವಾತ್ಸಲ್ಯದಿಂದ 'ದೀರ್ಘಾಯುಷ್ಮಾನ್ ಭವ' ಎಂದು ಹರಸಿ ಮುಂದೆ ಸಾಗಿದರು.

ಅಷ್ಟರಲ್ಲಿ ಮುಂದಿದ್ದ ವಸಿಷ್ಠರ ಜ್ಞಾನದೃಷ್ಟಿಗೆ ಆ ಮಗು ಅತ್ಯಲ್ಪಾಯುಷಿ ಎಂದು ಗೋಚರವಾಯಿತು. ಗಾಬರಿಗೊಂಡ ವಸಿಷ್ಠರು ದಿಙ್ಮೂಢರಾಗಿ ಹಿಂತಿರುಗಿ ನಿಂತರು. ಅನಂತರ ಉಳಿದ ಋಷಿಗಳಿಗೂ 'ಈ ಮಗುವಿಗಿನ್ನು ಐದೇ ದಿನಗಳ ಆಯುಸ್ಸು ಉಳಿದಿದೆ.' ಎಂದು ತಿಳಿಸಿದರು. ನಿತ್ಯಸತ್ಯವೇತ್ತರೆಂದು ವಿಶ್ವವಿಖ್ಯಾತರಾದ ಸಪ್ತರ್ಷಿಗಳು ಈ ಸುಳ್ಳಿನ ಕಳಂಕವನ್ನು ಹೇಗೆ ತೊಳೆದುಕೊಳ್ಳಬೇಕೆಂಬ ಕಳವಳದಿಂದ ಕಳೆಗುಂದಿದರು. ಇದರ ಪರಿಹಾರವನ್ನು ಬ್ರಹ್ಮದೇವರ ಮುಖಾಂತರವೇ ಪಡೆಯಬೇಕೆಂದು ನಿರ್ಧರಿಸಿದರು. ತಮ್ಮೊಡನೆ ಆ ಮೃಕಂಡುಸುತನನ್ನೂ ಕರೆದುಕೊಂಡು ಬ್ರಹ್ಮದೇವರ ಬಳಿಗೇ ಬಂದರು. ಸಪ್ತರ್ಷಿಗಳು ಭಕ್ತ್ಯುದ್ರೇಕದಿಂದ ಬ್ರಹ್ಮದೇವರ ಪಾದಾರವಿಂದಗಳಿಗೆ ವಂದಿಸಿದರು. ಮೃಕಂಡುಸುತನೂ ಭಕ್ತಿಭರಿತನಾಗಿ ಬ್ರಹ್ಮದೇವರಿಗೆ ಸಾಷ್ಟಾಂಗನಮಸ್ಕಾರ ಮಾಡಿದ. ಬ್ರಹ್ಮದೇವರು ಅವನಿಗೂ ಪ್ರೀತಿಯಿಂದ 'ಚಿರಾಯುವಾಗು' ಎಂದು ಹರಿಸಿದರು. ಮೃಕಂಡುಸುತನಿಗೆ ಇನ್ನೇನು ಐದೇ ನಿಮಿಷದ ಆಯುಷ್ಯ ಉಳಿದಿರುವ ವೇಳೆಯಲ್ಲಿ ಬ್ರಹ್ಮದೇವರೇ ಹೀಗೆ ಹಾರೈಸಿದಾಗ ಕಳೆಗುಂದಿದ್ದ ಸಪ್ತರ್ಷಿಗಳ ಮುಖಗಳು ಅರಳಿದವು. ಬ್ರಹ್ಮದೇವರು ಲೋಕವಿಡಂಬನೆ ಮಾಡುತ್ತಾ ಆಶ್ಚರ್ಯಗೊಂಡವರಂತೆ ಕೇಳಿದರು. 'ಎಲೈ ಭಾಗವತೋತ್ತಮ ಮಹರ್ಷಿಗಳೇ! ಇಲ್ಲಿ ನೀವೆಲ್ಲ ಬಂದ ಕಾರಣವೇನು? ಈ ಮುಗ್ಧ ಬಾಲಕ ಯಾರು?' ಎಂದು.

ಸಪ್ತರ್ಷಿಗಳು ಎಲ್ಲ ವಿಷಯವನ್ನು ವಿಶದವಾಗಿ ವಿನಯದಿಂದ ನಿವೇದಿಸಿದರು. 'ನಾವು ಪ್ರಸಿದ್ಧವಾದ ವಿವಿಧ ತೀರ್ಥಕ್ಷೇತ್ರಯಾತ್ರೆಯ ಲೋಭದಿಂದ

ಸಂಚರಿಸುತ್ತಿರುವಾಗ ಅಲ್ಪಾಯುಷಿಯಾದ ಈ ಶಿಶು ನಮಗೆಲ್ಲರಿಗೂ ಸಡಗರದಿಂದ ನಮಸ್ಕರಿಸಿತು. ನಾವೆಲ್ಲ ಚಿರಾಯುವಾಗೆಂದು ಹರಸಿದೆವು. ಅನಂತರ ಈತನ ಆಯುಸ್ಸು ಕೇವಲ ಐದು ದಿನಗಳಷ್ಟು ಉಳಿದಿರುವುದು ಸ್ಪಷ್ಟವಾಯಿತು. ಈ ಮಗುವನ್ನೂ ಕರೆದುಕೊಂಡು ತಮ್ಮ ಬಳಿ ಪರಿಹಾರಕ್ಕಾಗಿ ಬಂದೆವು. ಸರ್ವಜ್ಞರಾದ ತಾವೂ ಕೂಡ ಈತನನ್ನು ಚಿರಂಜೀವಿಯಾಗೆಂದೇ ಹರಸಿಬಿಟ್ಟಿರಿ. ಈಗ ತಾವು ಮತ್ತು ನಾವೆಲ್ಲರೂ ಈ ಸುಳ್ಳಿನ ಮುಳ್ಳಿನಿಂದ ಹೇಗೆ ಬಿಡುಗಡೆ ಪಡೆಯಬೇಕೆಂದು ದಯಮಾಡಿ ತಿಳಿಸಿರಿ. ಈ ಭೂಮಿ ಯಾವ ಭಯವಿಲ್ಲದೇ ಸರ್ವರನ್ನು ಧರಿಸಿ ಸ್ಥಿರವಾಗಿರುವುದು, ಸತ್ಯವಾಕ್ಯದ ಪ್ರಭಾವದಿಂದಲೇ ಅಲ್ಲವೇ. ಶೇಷದೇವರು ಬಹು ದೊಡ್ಡ ಬ್ರಹ್ಮಾಂಡವನ್ನು ಸಾಸಿವೆಯಂತೆ ಅನಾಯಾಸವಾಗಿ ಧರಿಸಿರುವುದು ಸತ್ಯವಚನದ ಮಹಿಮೆಯಿಂದಲೇ ಅಲ್ಲವೇ. ಅಂತೆಯೇ ನಮ್ಮನ್ನು ಸತ್ಯದಿಂದ ಭ್ರಷ್ಟರಾಗದಂತೆ ದಯೆತೋರಿ ಈ ಮಗುವಿಗೆ ದೀರ್ಘಾಯುಷ್ಯವನ್ನು ಕರುಣಿಸಬೇಕು.' ಎಂದು.

ಬ್ರಹ್ಮದೇವರು ಪ್ರೇಮಪರಿಪ್ಲುತರಾಗಿ ಸಪ್ತರ್ಷಿಗಳನ್ನು ಸಾಂತ್ವನಗೊಳಿಸಿದರು. 'ಎಲೈ ಪರಬ್ರಹ್ಮವಾದಿಗಳೇ! ಈ ಮಗುವಿನ ಉದಾತ್ತ ಯೋಗ್ಯತೆಯನ್ನು ಅಭಿವ್ಯಕ್ತಗೊಳಿಸುವುದಕ್ಕಾಗಿಯೇ ಸತ್ಯಸಂಕಲ್ಪನಾದ ಶ್ರೀಹರಿ ನಿಮ್ಮೆಲ್ಲರ ಬುದ್ಧಿಪ್ರೇರಕನಾಗಿ ಹೀಗೆ ನುಡಿಸಿದ್ದಾನೆ. ಈ ಸಂಗತಿಯನ್ನು ತಿಳಿದೇ ಅಸ್ವತಂತ್ರನಾದ ನಾನೂ ಕೂಡ ನನ್ನ ಬರಹವನ್ನು ಬದಲಾಯಿಸಿ ಶ್ರೀಹರಿಸಂಕಲ್ಪದಂತೆ ಚಿರಂಜೀವಿತ್ವವರವನ್ನು ಆದರದಿಂದ ಸಾರಿದ್ದೇನೆ. ಈ ಮಗುವಿಗೆ ನನ್ನ ಸಮವಾದ ಆಯುಸ್ಸನ್ನು ನೀಡಿದ್ದೇನೆ. ಅಲ್ಲದೆ ಸಕಲ ಮುನಿಗಳಿಗೂ ಮುಖ್ಯನೆನಿಸಿ ನನ್ನ ಕಾರ್ಯಗಳಿಗೆ ಇವನು ಸಹಾಯಕನಾಗುವನು. ಈ ಮೃಕಂಡುಸುತ ಇಂದಿನಿಂದ 'ಮಾರ್ಕಂಡೇಯ' ಎಂಬ ನಾಮದಿಂದ ಪ್ರಖ್ಯಾತನಾಗಲಿ. ಸಕಲ ಋಷಿಮುನಿಗಳೂ ಚಿರಂಜೀವಿಯಾದ ಈ ಮಾರ್ಕಂಡೇಯನನ್ನು ವಿಶೇಷ ಆದರಾಭಿಮಾನಗಳಿಂದ ಒಪ್ಪಿಕೊಳ್ಳುವರು.' ಈ ರೀತಿ ಸಪ್ತರ್ಷಿಗಳು ಶುದ್ಧಮುಗ್ಧಸ್ವಭಾವದ ಆ ಮಾರ್ಕಂಡೇಯನ ಚಿರಂಜೀವಿತ್ವವನ್ನು, ಬ್ರಹ್ಮದೇವರ ಮುಖಾಂತರವೇ

ಸಾಧಿಸಿಕೊಟ್ಟು ತಮ್ಮ ಸತ್ಯವ್ರತದಿಂದ ವಿಜೃಂಭಿಸಿದರು. ಅನಂತರ ಆ ಮಾರ್ಕಂಡೇಯ ಋಷಿಕುಮಾರನನ್ನು ಪ್ರೇಮದಿಂದ ಭೂಲೋಕಕ್ಕೆ ಕಳುಹಿಸಿ ಬೀಳ್ಕೊಟ್ಟರು.

ಬ್ರಹ್ಮಲೋಕದಿಂದ ಮನೆಗೆ ಬಂದ ಕಂದನನ್ನು ಕಂಡು ಮೃಕಂಡುದಂಪತಿಗಳು ಆನಂದತುಂದಿಲರಾಗಿ ರೋಮಾಂಚನಗೊಂಡರು. ಸಪ್ತರ್ಷಿಗಳ ಮತ್ತು ಬ್ರಹ್ಮದೇವರ ಸಾಕ್ಷಾತ್ಕಾರದಿಂದ ಮೃತ್ಯುವನ್ನೇ ಜಯಿಸಿದ ಮಾರ್ಕಂಡೇಯ ಕುಮಾರನ ಅತಿಶಯ ಯಶಸ್ಸಾಧನೆಯಿಂದ ಮೃಕಂಡುದಂಪತಿಗಳು ಧನ್ಯಭಾವದಿಂದ ಆನಂದಾಶ್ರುಧಾರೆ ಹರಿಸಿದರು. ಚಿರಂಜೀವಿಯಾದ ಈ ಮಾರ್ಕಂಡೇಯ ಋಷಿ ವನವಾಸದಲ್ಲಿದ್ದ ಪಾಂಡವರಿಗೆ ಅನೇಕ ಧರ್ಮೋಪದೇಶ ಮಾಡಿದ್ದಾರೆ. ಶ್ರೀಹರಿಯ ಅನುಗ್ರಹದಿಂದ ಇವರು ಅನುಭವಿಸಿದ ಪ್ರಳಯದರ್ಶನದ ಮಹಿಮೆ ಭಾಗವತ, ಭಾರತ ಗ್ರಂಥಗಳಲ್ಲಿ ಪ್ರಸಿದ್ಧವಾಗಿದೆ. ಜೈಮಿನಿ ಋಷಿಗಳನ್ನು ಕುರಿತು ಮಾರ್ಕಂಡೇಯರು ಹೇಳಿದ ಅನೇಕ ಕಥೆಗಳು 'ಮಾರ್ಕಂಡೇಯಪುರಾಣ' ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಈ ಪುರಾಣ ಹದಿನೆಂಟು ಪುರಾಣಗಳಲ್ಲೊಂದು. ಇದಲ್ಲದೇ ನರಸಿಂಹಪುರಾಣ ಮುಂತಾದ ಗ್ರಂಥಗಳಲ್ಲಿ ಮಾರ್ಕಂಡೇಯರು ಮಾಡಿದ ಭಗವತ್‌ಸ್ತುತಿಗಳು ಪ್ರಸಿದ್ಧವಾಗಿವೆ. ಇಂಥಹ ಮಾರ್ಕಂಡೇಯ ಮಹರ್ಷಿಗಳು ಸಕಲ ಸಜ್ಜನವರ್ಗಕ್ಕೆ ಪ್ರಾತಃಸ್ಮರಣೀಯರಾದ ಮಹಾನುಭಾವರಾಗಿರುವರು.

ಮಕ್ಕಳೇ! ಅಲ್ಪಾಯುಷಿಯಾಗಿದ್ದ ಮಾರ್ಕಂಡೇಯ ಮುನಿ ಗುರುಹಿರಿಯರಿಗೆ ಆದರದಿಂದ ನಮಸ್ಕರಿಸುವ ಸಂಸ್ಕಾರವನ್ನು ಬಾಲಲೀಲೆಯಂತೆ ಬೆಳೆಸಿಕೊಂಡಿದ್ದರ ಪ್ರಭಾವದಿಂದ ಉತ್ತಮ ಚಿರಂಜೀವಿತ್ವವನ್ನು ಸಾಧಿಸಿದುದು ಅತ್ಯಂತ ಆದರ್ಶವಾಗಿರುವುದಲ್ಲವೇ. ಇಂತಹ ಅತಿ ಸತ್ತ್ವಶಾಲಿಯಾದ ನಮಸ್ಕಾರದ ಸಂಸ್ಕಾರವನ್ನು ಬಾಲ್ಯದಿಂದಲೇ ನೀವೆಲ್ಲ ಬೆಳೆಸಿಕೊಳ್ಳುತ್ತಾ ಉತ್ತರೋತ್ತರ ಶ್ರೇಯೋಽಭಿವೃದ್ಧಿಗೆ ಪಾತ್ರರಾಗುವಿರಲ್ಲವೇ.

★ ★ ★ ★

# ಮಹಾಮುನಿ ಕಕ್ಷೀವಾನ

ದೀರ್ಘತಮ ಋಷಿಯು ನದಿಯಲ್ಲಿ ಕಾಲುಜಾರಿ ಬಿದ್ದು ಪ್ರವಾಹದಲ್ಲಿ ತೇಲುತ್ತ ಅಂಗರಾಜ್ಯಕ್ಕೆ ಬಂದಾಗ ಅಲ್ಲಿಯ ಮಹಾರಾಜನು ಅವರನ್ನು ಅರಮನೆಗೆ ಕರೆದೊಯ್ದು ಸತ್ಕರಿಸಿದನು. ಮತ್ತು ತಮ್ಮ ರಾಜ್ಯದಲ್ಲಿ ಋಷಿಗಳ ಮನೆತನವು ಬೆಳೆಯಬೇಕೆಂದು ದೀರ್ಘತಮರಿಗೆ ಭಿನ್ನಹ ಮಾಡಿಕೊಂಡಿದ್ದರಿಂದ ಅವರು ಉಶಿಜ ಎಂಬ ದಾಸಿಯಲ್ಲಿ ಸಂತಾನ ಪ್ರದಾನ ಮಾಡಿದರು. ಕಕ್ಷೀವಾನ್ ಎಂದು ದೀರ್ಘತಮ ಋಷಿಯ ಮಗನ ಹೆಸರು.

ಕಕ್ಷೀವಾನ್ ಮುನಿಯು ತಂದೆಯಂತೆ ಶಾಸ್ತ್ರಪಂಡಿತನೂ ವೇದ ಪಾರಂಗತನೂ ಆಗಿದ್ದನು. ಅವನ ವಿಲಕ್ಷಣ ಪಾಂಡಿತ್ಯಕ್ಕೆ ಅಂದಿನ ಪ್ರಪಂಚದಲ್ಲಿ ತಲೆಬಾಗದವರೇ ಇರಲಿಲ್ಲ. ಅವನು ಗುರುಕುಲದಲ್ಲಿ ವೇದಶಾಸ್ತ್ರಗಳನ್ನು ಅಧ್ಯಯನ ಮಾಡಿ ಮಹಾಪಂಡಿತನಾಗಿ ಮನೆಗೆ ಮರುಳುವಾಗ ದಾರಿಯಲ್ಲಾದ ಬಳಲಿಕೆಯಿಂದ ಒಂದು ಕಾಡಿನ ಗಿಡದಡಿಯಲ್ಲಿ ಒರಗಿದ್ದನು. ಅದೇ ಕಾಲದಲ್ಲಿ ಸ್ವನಯ ಎಂಬ ರಾಜನು ತನ್ನ ಮಡದಿ ಹಾಗೂ ಪುರೋಹಿತರೊಂದಿಗೆ ಅಲ್ಲಿಗೆ ಬಂದನು. ಮರದಡಿಯ ತಳಿರು ತಲ್ಪದಲ್ಲಿ ಪವಡಿಸಿದ ತರುಣ ತಾಪಸ ಕಕ್ಷೀವಾನನನ್ನು ಕಂಡು ಮಹಾರಾಜನಿಗೆ ಕುತೂಹಲವಾಯಿತು. ಇಂಥ ತೇಜೋಮೂರ್ತಿಯು ಯಾರಾಗಿರಬಹುದೆಂದು ಕಾದು ಕುಳಿತು ಅವನೆದ್ದ ಬಳಿಕ ಅವನ ಕುಲಗೋತ್ರಗಳನ್ನು ವಿಚಾರಿಸಿದನು. ಕಕ್ಷೀವಾನನ ಮಾತು ಮಾತಿನಲ್ಲಿ ಮಿಂಚುವ ಪಾಂಡಿತ್ಯದ ಪ್ರಭೆಯಿಂದ ಸ್ವನಯ ಮಹಾರಾಜನು ತುಂಬ ಪ್ರಭಾವಿತನಾಗಿ ಅವನನ್ನು ತನ್ನ ರಾಜಧಾನಿಗೆ ಕರತಂದು ತನ್ನ ಕುಲಗುರುವನ್ನಾಗಿ ಮಾಡಿಕೊಂಡನು. ಮತ್ತು ತನ್ನ ಮಗಳನ್ನು ಅವನಿಗೆ ಮದುವೆಮಾಡಿಕೊಟ್ಟು ಇಂಥ ಬ್ರಹ್ಮಜ್ಞಾನಿಯ ಸಂಬಂಧದಿಂದ ತನ್ನ ಮನೆತನವು ಧನ್ಯವಾಯಿತೆಂದು ಭಾವಿಸಿದನು.

ಕಕ್ಷೀವಾನನ ಲೋಕವಿಲಕ್ಷಣವಾದ ವೈದುಷ್ಯದ ಕೀರ್ತಿಯು ಅಖಂಡ ಭೂಮಂಡಲದಲ್ಲೆಲ್ಲ ವ್ಯಾಪಿಸಿತು. ದೇಶ ವಿದೇಶಗಳ ರಾಜರು ತಮ್ಮ ಪೌರೋಹಿತ್ಯವನ್ನು ವಹಿಸಬೇಕೆಂದು ಅವನ ಬಳಿಗೆ ಬಂದು ಬೇಡಿಕೊಳ್ಳಹತ್ತಿದರು.

ಶ್ರುತಿರಥ ಮತ್ತು ಪ್ರಿಯರಥ ಮುಂತಾದ ರಾಜರು ಅವನ ಶಿಷ್ಯರಾಗಿ ಅನೇಕ ಯಜ್ಞ ಯಾಗಗಳನ್ನು ಮಾಡಿದರು. ಅವರ ರಾಜ ಪುರೋಹಿತನಾಗಿ ಕಕ್ಷೀವಾಹನನು ಅವರ ಒಂದು ಯಜ್ಞಕ್ಕೆ ಮಿತ್ರಾವರುಣರು ಸ್ವತಃ ಬರುವಂತೆ ಮಾಡಿದರು. ಮುಂದೆ ಸಿಂಧುತೀರದ ಭಾವಿಯವ್ಯ ಮಹಾರಾಜನೂ ಕಕ್ಷೀವಾನನ ಅಧ್ಯಕ್ಷತೆಯಲ್ಲಿ ಯಜ್ಞವನ್ನು ಮಾಡಿ ಅವನಿಗೆ ಅಪಾರ ಸಂಪತ್ತನ್ನು ದಕ್ಷಿಣಾರೂಪವಾಗಿ ಕೊಟ್ಟನು. ಋಗ್ವೇದದ ಮೊದಲ ಮಂಡಲದಲ್ಲಿಯ ೧೧೬ ರಿಂದ ೧೨೬ ವರೆಗಿನ ಸೂಕ್ತಗಳಿಗೆ ಕಕ್ಷೀವಾನನು ಮಂತ್ರದ್ರಷ್ಟಾ ಆಗಿದ್ದಾನೆ. ಅವನ ಅರ್ಥಗರ್ಭಿತವೂ ಭಾವಪೂರ್ಣವೂ ಆದ ಆ ಮಂತ್ರಗಳಿಂದ ದೇವೇಂದ್ರನೇ ಮುಂತಾದ ಎಲ್ಲ ದೇವತೆಗಳೂ ಸುಪ್ರಸನ್ನರಾಗಿದ್ದಾರೆ.

ಕಕ್ಷೀವಾನನಿಗೆ ಬ್ರಹ್ಮವಾದಿನಿಯಾದ ಘೋಷಾ ಎಂಬ ಒಬ್ಬ ಮಗಳಿದ್ದು ಅವಳೂ ಕೂಡ ಮಂತ್ರದರ್ಶಿನೀಯೆಂದು ಪ್ರಸಿದ್ಧಳಾಗಿದ್ದಾಳೆ. ಅಂಗಿರಸವಂಶವು ಕಕ್ಷೀವಾನನಿಂದ ಮತ್ತೊಮ್ಮೆ ವಿಶ್ವವಿಶ್ರುತವಾಯಿತು. ಕಕ್ಷೀವಾನನಿಗೆ ವಯಸ್ಸಾದ ಬಳಿಕ ಇಂಥ ಜ್ಞಾನದ ತವನಿಧಿಗೆ ಮುಪ್ಪು ಅಡರಿ ಅದು ಮಂಕಾಗಬಾರದೆಂದು ದೇವ ಧನ್ವಂತರಿಗಳಾದ ಅಶ್ವಿನೀ ಕುಮಾರರು ಕಕ್ಷೀವಾನನನ್ನು ತಮ್ಮ ವೈದ್ಯ ವಿದ್ಯೆಯ ಪ್ರಭಾವದಿಂದ ಮತ್ತೆ ತರುಣನನ್ನಾಗಿ ಮಾಡಿದರು. ಆದರಿಂದ ಕಕ್ಷೀವಾನನು ದೀರ್ಘಾಯುವಾಗಿ ಬಹುಕಾಲ ಪರ್ಯಂತ ಅಕ್ಷರ ಪ್ರಪಂಚವನ್ನು ತನ್ನ ಜ್ಞಾನರಶ್ಮಿಗಳಿಂದ ಬೆಳಗುತ್ತಲಿದ್ದನು.

★ ★ ★ ★

## ಬಭ್ರು

ವಿಶ್ವಾಮಿತ್ರ ಋಷಿಯ ಮಗನಾದ ಈ ಬಭ್ರುವಿಗೆ ದೈವಾವೃಧ ಎಂದೂ ಹೆಸರಿದೆ. ಆದರೆ ಸಾಯಣಾಚಾರ್ಯರು ತಮ್ಮ ವೇದಭಾಷ್ಯದಲ್ಲಿ ಬಭ್ರು ದೇವಾವೃಧ ಇಬ್ಬರೂ ಬೇರೆ ಬೇರೆ ವ್ಯಕ್ತಿಯೆಂದು ಹೇಳಿದ್ದಾರೆ. ಐತರೇಯ ಬ್ರಾಹ್ಮಣದಲ್ಲಿ ಬಭ್ರುವಿಗೆ ಸಹದೇವಸಾಂಜಯನು ಸೋಮಯಾಗದ ಪರಂಪರೆಯ ವಿಶೇಷವನ್ನು ತಿಳಿಸಿಕೊಟ್ಟನೆಂದು ಉಲ್ಲೇಖವು ಬರುತ್ತದೆ. ಇವನ ವಂಶದಲ್ಲಿ ಜನಿಸಿದ ಮುನಿಗಳೇ

ಮುಂದೆ ಬಾಭ್ರವ್ಯರು ಎಂದು ಪ್ರಸಿದ್ಧರಾದರು. ಋಗ್ವೇದಿಗಳ ಬ್ರಹ್ಮಯಜ್ಞದಲ್ಲಿ ಬಾಭ್ರವ್ಯರಿಗೆ ಮೂರು ತರ್ಪಣವನ್ನು ಕೊಡಬೇಕೆಂದು ಅನುಶಾಸನವಿದೆ.

ಆದರೆ ಶುನಕನ ಶಿಷ್ಯನಾದ ಬಭ್ರುವೂ ಮತ್ತು ವಿಶ್ವಾಮಿತ್ರ ಬಭ್ರುವೂ ಭಿನ್ನ ವ್ಯಕ್ತಿಗಳಾಗಿರಬಹುದು. ಶುನಕರ ಶಿಷ್ಯನಾದ ಬಭ್ರುವಿಗೆ ಅಂಗಿರಸರು ಅಥರ್ವ ಸಂಹಿತೆಯನ್ನು ದಯಪಾಲಿಸಿದರು. ಆದುದರಿಂದಲೇ ಅವನಿಗೆ ಅಂಗಿರಸ ಬಭ್ರುವೆಂದೂ ಕರೆಯುತ್ತಿದ್ದರು.

★ ★ ★ ★

## ಗಾಲವ

ಗಾಲವನು ವೇದವೇದಾಂಗಳನ್ನು ಅಧ್ಯಯನ ಮಾಡಿ ಮಹರ್ಷಿಯೆಂಬ ಗೌರವಕ್ಕೆ ಪಾತ್ರನಾಗಿದ್ದನು. ಆತ ವಿಶ್ವಾಮಿತ್ರರ ಪ್ರಿಯ ಶಿಷ್ಯನಾಗಿದ್ದನು. ವಿಶ್ವಾಮಿತ್ರರು ಗಾಲವನಿಗೆ ಶುಕ್ಲಯಜುರ್ವೇದವನ್ನು ಕಲಿಸಿಕೊಟ್ಟರು. ಅದರ ಅಧ್ಯಯನವು ಮುಗಿದ ಅನಂತರ ತನ್ನ ಮನೆಗೆ ಹಿಂತಿರುಗಬಹುದೆಂದೂ ಲೋಕ ಸಂಚಾರದ ಮೂಲಕ ಅನುಭವವನ್ನು ಅಧಿಕಗೊಳಿಸಬಹುದೆಂದೂ ಸೂಚಿಸಿದರು. ಗುರುಗಳ ಬಳಿ ವಿದ್ಯೆ ಕಲಿತು ಮರುಳುವಾಗ ಗುರುದಕ್ಷಿಣೆ ಕೊಡುವುದು ಸಂಪ್ರದಾಯ. ಅದರಂತೆ ಗಾಲವನು, 'ತಮ್ಮ ಅಪೇಕ್ಷೆ ಏನೆಂಬುದನ್ನು ತಿಳಿಸಬೇಕು. ನಡೆಸಿಕೊಡುತ್ತೇನೆ' ಎಂದು ವಿನಯದಿಂದ ಹೇಳಿದನು. ಆಗ ವಿಶ್ವಾಮಿತ್ರರು ತನಗೇನೂ ಅಪೇಕ್ಷೆ ಇಲ್ಲವೆಂದೂ ಹಾಗೆಯೇ ತೆರಳುವಂತೆಯೂ ಸೂಚಿಸಿದರು. ಆದರೆ, ಗಾಲವನಿಗೆ ಗುರುದಕ್ಷಿಣೆಯನ್ನು ಸಮರ್ಪಿಸದೆ ಹೋಗಲು ಮನಸ್ಸಾಗಲಿಲ್ಲ, 'ತಮ್ಮ ಮನಸಿನ ಇಂಗಿತವನ್ನು ದಯವಿಟ್ಟು ತಿಳಿಸಬೇಕು ಗುರುಗಳೆ, ಶಿಷ್ಯನಾದ ನಾನು ಅದನ್ನು ನಡೆಸಿಕೊಡಲು ಬದ್ಧನಾಗಿದ್ದೇನೆ' ಎಂದು ಗಾಲವನು ಮತ್ತೆ ಮತ್ತೆ ಹೇಳಿದನು. ಆಗ ವಿಶ್ವಾಮಿತ್ರರು ವಿಚಿತ್ರವಾದ ಅಪೇಕ್ಷೆಯನ್ನು ಶಿಷ್ಯನಲ್ಲಿ ತೋಡಿಕೊಂಡರು. ಬೆಳ್ಳಗಿನ ಮೈಬಣ್ಣವಿರುವ, ಆದರೆ ಒಂದೇ ಕಿವಿ ಕಪ್ಪಾಗಿರುವ ಎಂಟುನೂರು ಕುದುರೆಗಳನ್ನು ಗುರುದಕ್ಷಿಣೆಯ ರೂಪದಲ್ಲಿ ತಂದೊಪ್ಪಿಸುವಂತೆ ಹೇಳಿದರು.

ಜ್ಞಾನಿಗಳ ಅಪೇಕ್ಷೆ ಯಾವಾಗಲೂ ವಿಚಿತ್ರವಾಗಿರುತ್ತದೆ. ಗುರುಗಳೇ ಹೇಳಿದ ಮೇಲೆ ಹಿಂದುಳಿಯಲು ಸಾಧ್ಯವೆ? ಎಂಥ ಶ್ರಮ ವಹಿಸಿಯಾದರೂ ಗುರುದಕ್ಷಿಣೆಯನ್ನು ಸಲ್ಲಿಸಲೇಬೇಕಾಗುತ್ತದೆ. ಗುರುಗಳು ಹೇಳಿದ ಅಪೂರ್ವ ಕುದುರೆಗಳ ಸಂಗ್ರಹಕ್ಕಾಗಿ ಗಾಲವ ಹೊರಟುಹೋದ. ಎಷ್ಟು ಹುಡುಕಿದರೂ ಅವನಿಗೆ ಅಂತಹ ಕುದುರೆಗಳು ದೊರಕಲೇ ಇಲ್ಲ. ಕೊನೆಗೆ ಏನು ಮಾಡುವುದೆಂದು ತೋಚದೆ ತಪಸ್ಸಿನಲ್ಲಿ ತೊಡಗಿದ.

ತಪಸ್ಸಿಗೆ ಮೆಚ್ಚಿದ ಮಹಾವಿಷ್ಣುವು ಪ್ರತ್ಯಕ್ಷನಾದ.

★ ★ ★ ★

## ಶಂಖ-ಲಿಖಿತರು

ಶಂಖ-ಲಿಖಿತರು ಸಹೋದರರು. ಮಹಾ ತಪಸ್ವಿಗಳು. ಇವರ ಕಥೆಯು ಮಹಾಭಾರತದ ಸಭಾಪರ್ವ ಮತ್ತು ಶಾಂತಿಪರ್ವದಲ್ಲಿದೆ. ಇವರು ಧರ್ಮಶಾಸ್ತ್ರ ಪ್ರವರ್ತಕರು. ಇಬ್ಬರೂ ಕೂಡಿ ಸ್ಮೃತಿಗ್ರಂಥವೊಂದನ್ನು ರಚಿಸಿದ್ದಾರೆ. ಅದನ್ನು 'ಶಂಖಲಿಖಿತ ಸ್ಮೃತಿ' ಎಂಬ ಹೆಸರಿನಿಂದ ಕರೆಯುತ್ತಾರೆ. 'ದ್ವಾಪರೇ ಶಂಖಲಿಖಿತಃ' ಎಂಬುದಾಗಿ ದ್ವಾಪರಯುಗದಲ್ಲಿ ಶಂಖಲಿಖಿತರ ಸ್ಮೃತಿಯು ಸರ್ವಮಾನ್ಯವಾಗಿತ್ತು. ಆ ಯುಗದಲ್ಲಿ ಶಂಖಲಿಖಿತ ಸ್ಮೃತಿಗೆ ಗೌರವವೂ ಪ್ರಾಶಸ್ತ್ಯವೂ ನೀಡಲ್ಪಟ್ಟಿದೆ. ಸ್ಮೃತಿಗಳೆಂದರೆ ಬದುಕಿನ ಶಿಸ್ತನ್ನು, ಜೀವನ ನಿಯಮವನ್ನು ಬೋಧಿಸುವ ಗ್ರಂಥಗಳು. ನಾಲ್ಕು ಯುಗಗಳಿಗೆ ನಾಲ್ಕು ಸ್ಮೃತಿಗಳೆಂದು ಪ್ರಾಚೀನರ ನಿರ್ಣಯ.

''ಕೃತೌ ಮನುಸ್ಮೃತಿ ಪ್ರೋಕ್ತಾ ತ್ರೇತಾಯಾಂ ಗೌತಮಸ್ಮೃತಿಃ ।
ದ್ವಾಪರೇ ಶಂಖಲಿತಃ ಕತೌ ಪಾರಾಶರಸ್ಮೃತಿಃ ॥''

ಕೃತಯುಗಕ್ಕೆ ಮನುಸ್ಮೃತಿಯು, ತ್ರೇತಾಯುಗಕ್ಕೆ ಗೌತಮ ಸ್ಮೃತಿಯು, ದ್ವಾಪರಯುಗಕ್ಕೆ ಶಂಖಲಿಖಿತ ಸ್ಮೃತಿಯು, ಕಲಿಯುಗಕ್ಕೆ ಪರಾಶರ ಸ್ಮೃತಿಯು. ಶಂಖಲಿಖಿತರು ಅಷ್ಟಾದಶ ಸ್ಮೃತಿಕಾರರಲ್ಲಿ ಓರ್ವರೆಂದು ಪರಿಗಣಿಸಲ್ಪಟ್ಟಿದ್ದಾರೆ. ಹದಿನೆಂಟು ಸ್ಮೃತಿಕಾರರಲ್ಲಿ ಅವರಿಬ್ಬರಿಗೆ ಪ್ರತ್ಯೇಕ ಸ್ಥಾನವಿದೆ.

ಬಾಹುದಾ ಎಂಬ ಹೆಸರಿನ ನದಿಯ ತಟದಲ್ಲಿ ಶಂಖಲಿಖಿತರಿಗೆ ಪ್ರತ್ಯೇಕವಾದ ಆಶ್ರಮಗಳಿದ್ದವು. ಅವು ಫಲಭರಿತವಾದ ಹಣ್ಣುಗಳಿರುವ ವೃಕ್ಷಗಳಿಂದ ತುಂಬಿತ್ತು. ಒಂದು ದಿನ ಲಿಖಿತನು ಅಣ್ಣನಾದ ಶಂಖನ ಆಶ್ರಮಕ್ಕೆ ಬಂದನು. ಆ ಹೊತ್ತಿನಲ್ಲಿ ಶಂಖನು ಆಶ್ರಮದಲ್ಲಿ ಇರಲಿಲ್ಲ. ಲಿಖಿತನು ಅಣ್ಣನ ಆಶ್ರಮದ ಸುತ್ತಲೂ ಇದ್ದ ಮರಗಳಲ್ಲಿ ಫಲಭರಿತವಾದ ಹಣ್ಣುಗಳನ್ನು ಕೊಯ್ದು ಅವನ್ನು ತಿನ್ನತೊಡಗಿದನು. ಆಗ ಅಲ್ಲಿಗೆ ಬಂದ ಶಂಖನು, ''ಈ ಹಣ್ಣುಗಳು ಎಲ್ಲಿಂದ ದೊರೆತವು?'' ಎಂದು ಪ್ರಶ್ನಿಸಿದನು. ಅಣ್ಣನಿಗೆ ಗೌರವದಿಂದ ನಮಸ್ಕರಿಸಿದ ತಮ್ಮ ಲಿಖಿತನು, ''ಇಲ್ಲಿಂದಲೇ ತೆಗೆದುಕೊಂಡೆ'' ಎಂದು ಮರಗಳನ್ನು ತೋರಿಸಿದನು.

''ನಾನಿಲ್ಲದಿರುವಾಗ ನನ್ನ ಆಶ್ರಮದ ಸುತ್ತಲೂ ಇದ್ದ ವೃಕ್ಷಗಳಿಂದ ಹಣ್ಣನ್ನು ಕಿತ್ತುಕೊಂಡಿದ್ದರಿಂದ ನೀನು ಕಳ್ಳತನ ಮಾಡಿದಂತೆ ಆಗಿದೆ. ಆದುದರಿಂದ ಸುದ್ಯುಮ್ನ ರಾಜನ ಬಳಿಗೆ ಹೋಗಿ ವಿಷಯವನ್ನು ಹೇಳಿ ಶಿಕ್ಷೆಯನ್ನು ಅನುಭವಿಸಿ ಬಾ'' ಎಂದು ಶಂಖನು ಲಿಖಿತನಿಗೆ ಆಜ್ಞಾಪಿಸಿದನು. ಲಿಖಿತನು ಅಣ್ಣನ ಮಾತಿನಂತೆ ಸುದ್ಯುಮ್ನ ರಾಜನ ಬಳಿಗೆ ತೆರಳಿ ನಡೆದ ವಿಷಯವನ್ನು ಹೇಳಿ ಅಪರಾಧಕ್ಕೆ ಶಿಕ್ಷೆಯನ್ನು ನೀಡುವಂತೆ ಹೇಳಿದನು. ರಾಜನು ಯೋಚನೆ ಮಾಡಿ, ''ಲಿಖಿತನ ಅಪರಾಧವನ್ನು ರಾಜದಂಡಾಧಿಕಾರದ ವ್ಯಾಪ್ತಿಯಲ್ಲಿ ಕ್ಷಮಿಸಲಾಗಿದೆ'' ಎಂದನು.

ಆದರೆ, ಲಿಖಿತ ಅದನ್ನು ಒಪ್ಪಲಿಲ್ಲ. ತನಗೆ ಶಿಕ್ಷೆ ನೀಡಲೇಬೇಕೆಂದು ಒತ್ತಾಯಿಸಿದನು. ರಾಜನು ಬೇರೆ ದಾರಿಯಿಲ್ಲದೆ ಕಳ್ಳತನದ ಅಪರಾಧಕ್ಕೆ ಯಾವ ಶಿಕ್ಷೆ ನೀಡಲಾಗುವುದೋ ಅದೇ ಶಿಕ್ಷೆಯನ್ನು ವಿಧಿಸುವ ನಿರ್ಧಾರಕ್ಕೆ ಬಂದನು. ರಾಜಭಟರಿಗೆ ಲಿಖಿತನ ಕೈಗಳೆರಡನ್ನೂ ಕತ್ತರಿಸುವಂತೆ ಆಜ್ಞಾಪಿಸಿದನು. ರಾಜಭಟರು ರಾಜಾಜ್ಞೆಯಂತೆ ಲಿಖಿತನ ಎರಡು ಕೈಗಳನ್ನು ಕತ್ತರಿಸಿದರು. ಲಿಖಿತನು ಶಿಕ್ಷೆಯನ್ನು ಅನುಭವಿಸುತ್ತ ಅಣ್ಣನಾದ ಶಂಖನ ಸಮೀಪಕ್ಕೆ ಬಂದು, ''ಅಣ್ಣ, ನಿನ್ನ ಮಾತಿನಂತೆ ನಾನು ರಾಜನಿಂದ ಶಿಕ್ಷೆಯನ್ನು ಅನುಭವಿಸಿ ಬಂದಿದ್ದೇನೆ. ಆದರೆ, ನೀನು ನನ್ನನ್ನು ಈಗ ಕ್ಷಮಿಸಿದರೆ ಮಾತ್ರ ನನ್ನ ಮನಸ್ಸಿಗೆ ಸಮಾಧಾನವಾಗುವುದು'' ಎಂದು ಹೇಳಿ ನಮಸ್ಕರಿಸಿದನು.

ಆಗ ಶಂಖನು ''ನನಗೇನೂ ನಿನ್ನಲ್ಲಿ ಅಸಮಾಧಾನವಾಗಲಿಲ್ಲ. ನಾನು ಕೋಪಗೊಳ್ಳಲೂ ಇಲ್ಲ. ನಿನ್ನಿಂದ ಅಪರಾಧವು ನಡೆದು ಹೋಗಿದೆ. ನಿನಗೆ ಶಿಕ್ಷೆಯಾಗ ಬೇಕಾದುದೂ ಅವಶ್ಯವಾಗಿದೆ. ನನಗೆ ನಿನ್ನನ್ನು ಶಿಕ್ಷಿಸುವ ಅಧಿಕಾರವಿಲ್ಲ. ಅದಿರುವುದು ರಾಜನಿಗೆ. ಶಿಕ್ಷೆಯನ್ನು ಅನುಭವಿಸಿದ್ದರಿಂದ ನಿನ್ನ ಪಾಪವು ಹೊರಟು ಹೋಯಿತು. ಶಿಕ್ಷಾ ಪ್ರದಾನದಿಂದ ರಾಜನೂ ತನ್ನ ಕರ್ತವ್ಯವನ್ನು ಸರಿಯಾಗಿ ನಡೆಸಿದುದರಿಂದ ಅವನೂ ಪುಣ್ಯವಂತನಾದನು. ನೀನೀಗಲೇ ಬಹುದಾ ನದಿಯಲ್ಲಿ ಸ್ನಾನವನ್ನು ಮಾಡಿ ಬಾ'' ಎಂದನು.

ಅಣ್ಣನ ಮಾತಿನಂತೆ ಲಿಖಿತನು ಬಾಹುದಾ ನದಿಯಲ್ಲಿ ಮುಳುಗಿ ಸ್ನಾನ ಮಾಡಿದನು. ಸ್ನಾನವನ್ನು ಮಾಡಿದ ಅನಂತರ ದೇವತೆಗಳಿಗೆ, ಋಷಿಗಳಿಗೆ ಮತ್ತು ಪಿತೃಗಳಿಗೆ ತರ್ಪಣವನ್ನು ಕೊಡಲು ತನ್ನ ಮೊಂಡು ಕೈಗಳಿಂದಲೇ ಪ್ರಯತ್ನಿಸಿದಾಗ ಅವನ ತುಂಡಾದ ಕೈಗಳು ಪುನಃ ಮೊದಲಿನಂತಾದವು. ಅವನು ಸಂತೋಷದಿಂದ ತರ್ಪಣಗಳನ್ನು ನೀಡಿ ಆಶ್ರಮಕ್ಕೆ ಬಂದು ತನ್ನ ಅಣ್ಣನಿಗೆ ನಮಸ್ಕರಿಸಿ ನಡೆದ ವಿಷಯಗಳನ್ನು ಹೇಳಿದನು. ಮುಂದೆ ಅವರಿಬ್ಬರೂ ತಪಸ್ಸನ್ನು ಮುಂದುವರೆಸಿದರು. ಪ್ರಾಮಾಣಿಕತೆ ಇದ್ದರೆ ಮಾತ್ರ ಕಳೆದುಕೊಂಡದ್ದನ್ನೂ ಮರಳಿ ಪಡೆಯಲು ಸಾಧ್ಯವಿದೆ.

★ ★ ★ ★

## ಆಪಸ್ತಂಬ

ಭೃಗು ವಂಶದಲ್ಲಿ ಹುಟ್ಟಿದವರು ಆಪಸ್ತಂಬ ಮಹರ್ಷಿಗಳು. ಅಕ್ಷಸೂತ್ರೆಯೆಂಬವಳು ಇವರ ಹೆಂಡತಿ. ಈ ದಂಪತಿಗಳಿಗೆ ಕರ್ಕಿಯೆಂಬ ಹೆಸರಿನ ಮಗನೂ ಇದ್ದ. ಆಪಸ್ತಂಬರು ಸ್ಮೃತಿಕಾರರು. ಇವರ ಹೆಸರು ಧರ್ಮಶಾಸ್ತ್ರಕಾರರ ಪಟ್ಟಿಯಲ್ಲಿಯೂ ಸೇರಿದೆ. ಕಶ್ಯಪ ಮಹರ್ಷಿಗಳು ಆಚರಿಸಿದ ಪುತ್ರಕಾಮೇಷ್ಟಿಯೆಂಬ ಯಾಗದಲ್ಲಿ ಆಪಸ್ತಂಬರು ಪ್ರಮುಖ ಹೊಣೆಗಾರಿಕೆಯನ್ನು ಹೊಂದಿದ್ದರು.

ಆಪಸ್ತಂಬರಿಗೆ ಆ ಹೆಸರು ಹೇಗೆ ಬಂತು ಎಂಬ ಬಗ್ಗೆ ಕುತೂಹಲಕಾರಿಯಾದ ಕಥೆಯೊಂದಿದೆ. ಒಬ್ಬ ಯಜಮಾನನು ಶ್ರಾದ್ಧವನ್ನು ಮಾಡಲು ಉದ್ಯುಕ್ತನಾಗಿದ್ದನಂತೆ. ಆ ಸಂದರ್ಭದಲ್ಲಿ ಅದರಲ್ಲಿ ಭಾಗವಹಿಸಲು ಬ್ರಾಹ್ಮಣರಾರೂ

ದೊರೆಯಲಿಲ್ಲ. ಆಗ ಅವನು ವಿಶಿಷ್ಟವಾದ ವಿಧಾನವನ್ನು ಅನುಸರಿಸಿದ. ದರ್ಭೆಯಲ್ಲಿ ಮಂತ್ರದ ಮುಖೇನ ಬ್ರಾಹ್ಮಣರನ್ನು ಆವಾಹಿಸಿದ. ಈ ಮೂಲಕ ಶ್ರಾದ್ಧವನ್ನು ಸುಸಾಂಗವಾಗಿ ಆಚರಿಸಿದ.

ಶ್ರಾದ್ಧ ಆಚರಣೆ ಮುಗಿಯಿತು. ಅದೇ ಹೊತ್ತಿಗೆ ಆ ಯಜಮಾನನ ಮನೆಗೆ ಆಪಸ್ತಂಬ ಮಹರ್ಷಿಗಳ ಆಗಮನವಾಯಿತು. ಮನೆಗೆ ಅತಿಥಿಗಳಾಗಿ ಆಗಮಿಸಿದ ಮಹರ್ಷಿಗಳನ್ನು ಆದರದಿಂದ ಉಪಚರಿಸಿದ. ಯಜಮಾನನು ಆಪಸ್ತಂಬ ಮಹರ್ಷಿಗಳಿಗೆ ಭೋಜನವನ್ನು ಕೊಟ್ಟು ಕೊನೆಗೆ, 'ಸನ್ನಿಧಾನಕ್ಕೆ ತೃಪ್ತಿಯಾಯಿತೆ?' ಎಂದು ವಿನಯದಿಂದ ಕೇಳಿದ. ಆಪಸ್ತಂಬರು, 'ಇನ್ನೂ ಸ್ವಲ್ಪ ಅನ್ನ ಮತ್ತು ಮೊಸರನ್ನು ಹಾಕು' ಎಂದರು. ಅದನ್ನು ಸೇವಿಸಿದ ಬಳಿಕ ಯಜಮಾನ ಕೇಳಿದ, 'ಈಗ ಮಹಾನುಭಾವರಿಗೆ ತೃಪ್ತಿಯಾಗಿರಬಹುದಲ್ಲ...'.

ಪ್ರತೀಬಾರಿ ಭೋಜನದ ಕೊನೆಗೆ ಯಜಮಾನ 'ತೃಪ್ತಿಯಾಯಿತೆ?' ಎಂದು ಕೇಳುವುದು ಶ್ರಾದ್ಧದ ಉಪಚಾರದಲ್ಲಿರುವ ಶಾಸ್ತ್ರೀಯವಾದ ಸಂಪ್ರದಾಯ. ಶ್ರದ್ಧೆಯಿಂದ ಮಾಡುವುದರಿಂದಲೇ ಅಲ್ಲವೆ, ಅದಕ್ಕೆ ಶ್ರಾದ್ಧವೆಂಬ ಹೆಸರಿರುವುದು! ಹಾಗೆಯೇ ಊಟೋಪಚಾರವನ್ನು ಸ್ವೀಕರಿಸಿದವನು 'ತೃಪ್ತಿಯಾಯಿತು' ಎಂದು ಹೇಳುವುದು ಕೂಡಾ ಸಂಪ್ರದಾಯವೇ. ಆದರೆ ಇಲ್ಲಿ ಆಪಸ್ತಂಬರು ಈ ಸಂಪ್ರದಾಯದಂತೆ 'ತೃಪ್ತಿಯಾಯಿತು' ಎಂದು ಹೇಳುವ ಲಕ್ಷಣ ಕಾಣಿಸಲಿಲ್ಲ. ಅತಿಥಿಗಳಾದ ಆಪಸ್ತಂಬರು ಸಂಪ್ರದಾಯಕ್ಕೆ ವಿರುದ್ಧವಾಗಿ ವರ್ತಿಸಿದುದರಿಂದ ಯಜಮಾನನಿಗೆ ಸಿಟ್ಟು ಬಂತು. ನಿಜವಾಗಿ ಅತಿಥೇಯನಾದವನು ತಾಳ್ಮೆಯಿಂದ ವ್ಯವಹರಿಸಬೇಕೇ ಹೊರತು ಆತನಿಗೆ ಸಿಟ್ಟು ಬರಬಾರದು. ಆದರೆ, ಇಲ್ಲಿ ಯಜಮಾನನಿಗೆ ತನ್ನ ಶ್ರಾದ್ಧವು ಕೆಟ್ಟಿತೆಂದು ಅಸಹನೆ ಉಂಟಾಯಿತು. ಹಾಗಾಗಿ, ಆಪಸ್ತಂಬರನ್ನು ಶಪಿಸಬೇಕೆಂಬ ಉದ್ದೇಶದಿಂದ ಕೈಯಲ್ಲಿ ನೀರನ್ನು ತೆಗೆದುಕೊಂಡು ಅದನ್ನು ಅಭಿಮಂತ್ರಿಸಲು ಉದ್ಯುಕ್ತನಾದ.

ಇನ್ನೇನು, ಯಜಮಾನನ ಕೈಯಿಂದ ಮಂತ್ರಜಲ ಆಪಸ್ತಂಬರ ಮೇಲೆ ಬೀಳುತ್ತದೆ ಎಂಬಾಗ ಎರಚಿದ ನೀರನ್ನು ಅಂತರಿಕ್ಷದಲ್ಲಿಯೇ ತನ್ನ ತಪಸ್ಸಿನಿಂದ ನಿಲ್ಲಿಸಿದ. ನೀರು

ಪ್ರೋಕ್ಷಣೆಯಾಗದೆ ಉಳಿಯಿತು. ನೀರನ್ನು ತಮ್ಮ ಮೇಲೆ ಬೀಳದಂತೆ ತಡೆದುದರಿಂದ ಅವರಿಗೆ ಆಪಸ್ತಂಬರೆಂಬ ಹೆಸರಾಯಿತಂತೆ. ಅವರಿಗೆ ಮೊದಲು ಯಾವ ಹೆಸರಿತ್ತು ಎಂಬುದು ಯಾರಿಗೂ ತಿಳಿದಿಲ್ಲ.

ಇಷ್ಟರಲ್ಲಿ ಯಜಮಾನನ ಕೋಪ ಇಳಿದಿತ್ತು. ಒಂದರೆ ಕ್ಷಣದ ಅಸಹನೆಯಿಂದ ಎಂಥ ಕೆಟ್ಟ ಕೆಲಸವನ್ನು ಮಾಡುತ್ತಿದ್ದೆ ಎಂದು ಅವನಿಗೆ ವ್ಯಥೆ ಉಂಟಾಯಿತು. ಆಪಸ್ತಂಬರಿಗೆ ಸಿಟ್ಟು ಬರಲಿಲ್ಲ. ಅವರು, ಶ್ರಾದ್ಧದ ಪ್ರಾಮುಖ್ಯವನ್ನು ಯಜಮಾನನಿಗೆ ವಿವರಿಸಿದರು. ಶ್ರದ್ಧೆಯಿಂದ ಮಾಡಿದಾಗಲೇ ಅದರಲ್ಲಿ ಫಲ ಸಿಗುತ್ತದೆ ಎಂದು ಕೂಡ ಹೇಳಲು ಮರೆಯಲಿಲ್ಲ. ಯಜಮಾನನು ತಿಳಿದುಕೊಂಡು ಋಷಿಗಳ ಕಾಲಿಗೆ ಎರಗಿದ.

ಅಗಸ್ತ್ಯರ ಉಪದೇಶದಂತೆ ಮುಂದೆ ಆಪಸ್ತಂಬರು ದೀರ್ಘಾವಧಿಯವರೆಗೆ ತಪಸ್ಸು ಮಾಡಿ ಶ್ರೀಹರಿಯ ಅನುಗ್ರಹವನ್ನು ಸಂಪಾದಿಸಿಕೊಂಡರು. ಅವರು ತಪಸ್ಸು ಮಾಡಿದ ಸ್ಥಳವು ಈಶ್ವರ ಅನುಗ್ರಹದಿಂದ 'ಆಪಸ್ತಂಬ ತೀರ್ಥ' ವೆಂದು ಪ್ರಸಿದ್ಧವಾಯಿತು.

ಮಹಾಭಾರತ, ಮತ್ಸ್ಯಪುರಾಣ ಮತ್ತು ಬ್ರಹ್ಮಪುರಾಣಗಳಲ್ಲಿ ಆಪಸ್ತಂಬರ ಉಲ್ಲೇಖವಿದೆ.

★ ★ ★ ★

## ಶರಭಂಗ

ಶರಭಂಗರು ಮಹರ್ಷಿಗಳಾದ ಗೌತಮರ ವಂಶದಲ್ಲಿ ಹುಟ್ಟಿದವರು. ಇವರ ಆಶ್ರಮವು ಗೋದಾವರೀ ನದಿಯ ದಂಡಕಾರಣ್ಯದಲ್ಲಿತ್ತು. ಶರಭಂಗರು ನಿಷ್ಠಾವಂತ ಬ್ರಹ್ಮಚಾರಿಗಳಾಗಿದ್ದರು. ತಪಸ್ಸಿನಿಂದ ಸಾಧಿಸಬಹುದಾದ ಸಮಸ್ತ ಪುಣ್ಯಗಳನ್ನು ಅವರು ಸಾಧಿಸಿದ್ದರು. ಸಹಜವಾಗಿಯೇ ದೇಹಕ್ಕೆ ವೃದ್ಧಾಪ್ಯ ಆವರಿಸತೊಡಗಿತ್ತು. ದೇಹವು ಕ್ಷೀಣವಾಗುವುದಕ್ಕೆ ಆರಂಭವಾಗಿತ್ತು. ಆದರೂ ಅವರು ತಪಸ್ಸನ್ನು ಕೈಬಿಡಲಿಲ್ಲ. ದೇಹದ ಕುರಿತಾಗಿ, ಲೋಕದ ಕುರಿತಾಗಿ ಅವರಿಗೆ ಆಸಕ್ತಿಯೇ

ಇರಲಿಲ್ಲ. ಬ್ರಹ್ಮಜ್ಞಾನಿಗಳಾದ ಅವರನ್ನು ಬ್ರಹ್ಮಲೋಕಕ್ಕೆ ಕರೆದುಕೊಂಡು ಹೋಗಬೇಕೆಂಬ ಇಚ್ಛೆಯಿಂದ ದೇವತೆಗಳನ್ನು ಕೂಡಿಕೊಂಡು ದಿವ್ಯವಾದ ರಥದೊಂದಿಗೆ ಸ್ವತಃ ದೇವೇಂದ್ರನೇ ಅವರ ಆಶ್ರಮದ ಬಳಿಗೆ ಒಂದು ದಿನ ಬಂದು ಅವರಿಗೆ ನಮಿಸಿ ಸ್ವರ್ಗಕ್ಕೆ ಆಹ್ವಾನಿಸುವುದಕ್ಕೆ ಸಿದ್ಧನಾಗಿದ್ದನು. ಆದರೆ, ಶರಭಂಗರಿಗೊಂದು ಬದ್ಧತೆಯಿತ್ತು. ವಿಷ್ಣುವಿನ ಏಳನೇ ಅವತಾರವಾದ ಶ್ರೀರಾಮಚಂದ್ರನನ್ನು ನೋಡದೆ ಸ್ವರ್ಗಕ್ಕೂ ಬರುವುದಿಲ್ಲ ಎಂದು ಖಚಿತವಾಗಿ ಅವರು ಹೇಳಿದರು. ದೇವೇಂದ್ರನು ಸ್ವರ್ಗಕ್ಕೆ ಮರಳಿದನು.

ಮುಂದೆ, ಪಿತೃವಾಕ್ಯಪರಿಪಾಲನೆಗೆ ಸೀತಾದೇವಿ ಮತ್ತು ಲಕ್ಷ್ಮಣರೊಂದಿಗೆ ಬಂದ ಶ್ರೀರಾಮಚಂದ್ರನು ಶರಭಂಗ ಮಹರ್ಷಿಗಳ ಆಶ್ರಮದ ದಾರಿಯಾಗಿ ಸಾಗುತ್ತಿದ್ದನು. ಈಗ ಮತ್ತೆ ದೇವೇಂದ್ರನು ಶರಭಂಗರನ್ನು ಒಯ್ಯಲು ಸಿದ್ಧನಾಗಿ ಬಂದನು. ಶ್ರೀರಾಮಚಂದ್ರನು ಶರಭಂಗ ಮಹರ್ಷಿಗಳ ಆಶ್ರಮಕ್ಕೆ ಆಗಮಿಸುತ್ತಿರುವುದನ್ನು ನೋಡುತ್ತ ದೇವೇಂದ್ರನು ದೇವತೆಗಳನ್ನು ಉದ್ದೇಶಿಸಿ, 'ಶ್ರೀರಾಮಚಂದ್ರನು ಈಗಷ್ಟೇ ಬರುತ್ತಿದ್ದಾನೆ. ನಾವೀಗ ಅವನನ್ನು ಮಾತನಾಡಿಸುವುದು ಯುಕ್ತವಲ್ಲ. ಆದುದರಿಂದ ಕೊಂಚ ಹೊತ್ತು ಮರೆಯಲ್ಲಿ ಕಾಯೋಣ'' ಎಂದನು. ಶರಭಂಗ ಮಹರ್ಷಿಗಳಿಗೆ ಮೌನವಾಗಿ ನಮಸ್ಕರಿಸಿ ಮರೆಯಾದನು.

ದಿವ್ಯಪುರುಷನೊಬ್ಬನು ಶರಭಂಗರ ಆಶ್ರಮದಲ್ಲಿ ಇರುವುದನ್ನು ದೂರದಿಂದಲೇ ಕಂಡ ಶ್ರೀರಾಮನು ಅವನಾರೆಂದು ತಿಳಿದುಕೊಳ್ಳಲು ಆಶ್ರಮದ ಸಮೀಪಕ್ಕೆ ಬಂದಾಗ ಅವನು ಕಣ್ಮರೆಯಾಗಿದ್ದ. ಆಶ್ರಮಕ್ಕೆ ಆಗಮಿಸಿದ ಶ್ರೀರಾಮನನ್ನು ನೋಡಿ ಶರಭಂಗ ಮಹರ್ಷಿಗಳು ಆನಂದ ಪುಳಕಿತರಾದರು. ಅವನ ಪತ್ನಿಯಾದ ಸೀತೆಯನ್ನು ಮತ್ತು ಲಕ್ಷ್ಮಣನನ್ನು ಗೌರವಾದರಗಳಿಂದ ಸ್ವಾಗತಿಸಿದರು. ''ಮಹರ್ಷಿಗಳಾದ ತಾವು ನಮಗೆ ನಮಸ್ಕರಿಸುವುದು ಸರಿಯಲ್ಲ, ನಾವೇ ನಮಸ್ಕರಿಸಬೇಕು'' ಎಂದು ಶ್ರೀರಾಮಾದಿಗಳು ಶರಭಂಗರಿಗೆ ಪ್ರಣಾಮಗಳನ್ನು ಸಲ್ಲಿಸಿದರು. ಅನಂತರ ಶ್ರೀರಾಮಚಂದ್ರನು, ''ನಾನು ಬರುವಾಗ ನಿಮ್ಮ ಆಶ್ರಮದಲ್ಲಿ ಯಾರೋ ದಿವ್ಯಪುರುಷನಿದ್ದನು. ಅವನು ಯಾರೆಂದು ತಿಳಿದುಕೊಳ್ಳಬಹುದೆ?'' ಎಂದು ಕೇಳಿದನು.

ಶರಭಂಗರು ನಗುತ್ತ, ''ಅವನು ದೇವೇಂದ್ರ. ನನ್ನನ್ನು ಸ್ವರ್ಗಲೋಕಕ್ಕೆ ಕರೆದೊಯ್ಯಲು ಸ್ವತಃ ಬಂದಿದ್ದಾನೆ'' ಎಂದರು. ತಾನಿನ್ನು ದೇವೇಂದ್ರನೊಂದಿಗೆ ಹೊರಡುವ ಸಮಯವಾಯಿತೆಂದು ಹೇಳಿದ ಶರಭಂಗರು, ''ಶ್ರೀರಾಮ, ನಾನು ನಿರಂತರ ತಪಸ್ಸನ್ನು ಆಚರಿಸಿ ಪುಣ್ಯವನ್ನು ಸಂಪಾದಿಸಿರುವೆ. ಆದರೆ, ನಿನ್ನ ದರುಶನವಿಲ್ಲದೆ ನನ್ನ ಜೀವನ ಸಾರ್ಥಕವಾಗುವುದಿಲ್ಲವೆಂದು ಭಾವಿಸಿರುವೆ. ನಿನ್ನನ್ನು ಕಂಡು ಆ ಬಳಿಕ ದೇವಲೋಕಕ್ಕೆ ತೆರಳುವ ಸಂಕಲ್ಪ ಮಾಡಿದ್ದೇನೆ. ನಾನು ಗಳಿಸಿದ ಪುಣ್ಯಗಳನ್ನೆಲ್ಲಾ ನಿನಗೆ ಧಾರೆಯೆರೆದು ಜಿತೇಂದ್ರಿಯರು ಮಾತ್ರ ಸೇರಬಹುದಾದ ಆ ಲೋಕಕ್ಕೆ ಹೋಗುವವನಿದ್ದೇನೆ'' ಎಂದರು.

ಆಗ ಶ್ರೀರಾಮನು, ''ಧನ್ಯನಾಗಿದ್ದೇನೆ. ಆದರೆ, ನನಗೆ ಈಗ ಅಗತ್ಯವಾಗಿರುವ ಯೋಗ್ಯವಾದ ಸ್ಥಳವೊಂದನ್ನು ತಿಳಿಸಿ ಅನುಗ್ರಹಿಸಿರಿ'' ಎಂದನು.

ಆಗ ಶರಭಂಗರು ''ಶ್ರೀರಾಮ, ಇದೇ ನದಿಯ ತೀರದಲ್ಲಿ ನೀನು ಮುಂದಕ್ಕೆ ಹೋದಾಗ ನಿನಗೆ ವರ್ಚಸ್ವಿಗಳಾದ ಸುತೀಕ್ಷ್ಣ ಮಹರ್ಷಿಗಳ ಸಂದರ್ಶನವಾಗುವುದು. ಅವರು ನಿನಗೆ ವಾಸಯೋಗ್ಯವಾದ ಸ್ಥಳವನ್ನು ತೋರಿಸುವರು'' ಎಂದು ಹೇಳಿ ದೇಹತ್ಯಾಗಕ್ಕೆ ಸಿದ್ಧರಾದರು. ಶ್ರೀರಾಮನ ಸಮಕ್ಷದಲ್ಲಿ ಉರಿಯುತ್ತಿರುವ ಅಗ್ನಿಕುಂಡವನ್ನು ನಿರ್ಮಿಸಿ ಅಗ್ನಿಯನ್ನು ಪ್ರವೇಶಿಸಿದರು. ಅವರ ದೇಹವೆಲ್ಲ ಅಗ್ನಿಯಲ್ಲಿ ಉರಿದು ಭಸ್ಮವಾಯಿತು. ಅಲ್ಲಿದ್ದವರೆಲ್ಲ ನೋಡುತ್ತಿದ್ದಂತೆಯೇ ಅವರು ದೇವೇಂದ್ರನ ದಿವ್ಯರಥವನ್ನು ಏರಿ ಆಕಾಶದಲ್ಲಿ ಮೇಲೆ ಮೇಲಕ್ಕೆ ಹೊರಟುಹೋದರು.

ಸ್ವರ್ಗಸುಖ ಕೈಯಳತೆಯಲ್ಲಿದ್ದರೂ ಇಷ್ಟದೇವರ ದರ್ಶನಪಡೆಯದೆ ಅದನ್ನು ಸ್ವೀಕರಿಸುವುದಿಲ್ಲವೆಂದು ಹೇಳಿದ ಶರಭಂಗ ಮಹರ್ಷಿಗಳು ನಿಜವಾದ ಮಹಾತ್ಮರಲ್ಲವೆ?

★ ★ ★ ★

# ಗೋಬಿಲ

ಬಹಳ ಹಿಂದೆ ಕೋಸಲ ದೇಶದಲ್ಲಿ ದೇವದತ್ತರೆಂಬ ಮುನಿಗಳೊಬ್ಬರಿದ್ದರು. ಅಧ್ಯಯನ ಮತ್ತು ತಪಸ್ಸಿನಿಂದ ಅವರು ಕೂಡಿದ್ದರೂ ವಿವಾಹವಾದ ಅವರಿಗೆ ಮಕ್ಕಳಾಗಿರಲಿಲ್ಲ. ಇದರಿಂದಾಗಿ ಅವರಿಗೆ ಬಹಳ ದುಃಖವಾಗುತ್ತಿತ್ತು. ಹೇಗಾದರೂ ಮಾಡಿ ಸಂತಾನವನ್ನು ಪಡೆಯಬೇಕೆಂದು ಅವರು ನಿರ್ಣಯಿಸಿದರು. ಅದಕ್ಕಾಗಿ ಬಹಳ ಪ್ರಯತ್ನವನ್ನೂ ಪಟ್ಟರು. ಕೊನೆಗೆ 'ಪುತ್ರಕಾಮೇಷ್ಟಿ' ಎಂಬ ಯಾಗವನ್ನು ಮಾಡಲು ತೀರ್ಮಾನಿಸಿದರು.

ದೇವದತ್ತ ಮುನಿಗಳು ಪುತ್ರಕಾಮೇಷ್ಟಿಯನ್ನು ಮಾಡಲು ನಿರ್ಣಯಿಸಿ ಅದಕ್ಕೆ ಬೇಕಾದ ಸಿದ್ಧತೆಯನ್ನು ಮಾಡಿದರು. ಯೋಗ್ಯರಾದ ಋಷಿ ಮಹರ್ಷಿಗಳನ್ನೂ ಋತ್ವಿಜರನ್ನೂ ಆಮಂತ್ರಿಸಿದರು. ಶಾಸ್ತ್ರಗಳಲ್ಲಿ ಹೇಳಿರುವಂತೆ ಯಜ್ಞವೇದಿಕೆ-ಹೋಮಕುಂಡ ಮೊದಲಾದವುಗಳನ್ನು ವ್ಯವಸ್ಥೆ ಮಾಡಿದರು. ಹೋಮಕುಂಡದ ಸುತ್ತ ನಾಲ್ಕು ದಿಕ್ಕುಗಳಲ್ಲಿ ಕುಳಿತುಕೊಳ್ಳಲು ಋತ್ವಿಜರು ಬೇಕಲ್ಲವೆ? ಹೋಮದ ಅಧ್ವರ್ಯುವಾಗಿ ಯಾಜ್ಞವಲ್ಕ್ಯ ಮಹರ್ಷಿಗಳನ್ನು, ಹೋತೃವಾಗಿ ದೇವಗುರುಗಳಾದ ಬೃಹಸ್ಪತಿಗಳನ್ನು, ಪ್ರಸ್ತೋತೃವಾಗಿ ಪೈಲ ಮಹರ್ಷಿಗಳನ್ನು, ಉದ್ಗಾತೃವಾಗಿ ಗೋಬಿಲ ಮಹರ್ಷಿಗಳನ್ನು ನಿಯೋಜಿಸಲಾಯಿತು. ಅಲ್ಲದೆ, ಯಜ್ಞಮಂಟಪದಲ್ಲಿ ಸರ್ವಕೋವಿದನಾದವನೊಬ್ಬ ಬ್ರಹ್ಮನ ಸ್ಥಾನದಲ್ಲಿರಬೇಕು. ಆದಕ್ಕೆ ಸುಹೋತ್ರ ಮಹರ್ಷಿಗಳನ್ನು ದೇವದತ್ತರು ಆಯ್ಕೆ ಮಾಡಿಕೊಂಡರು. ಅಲ್ಲಿ ಅಧ್ವರ್ಯುವೆಂದರೆ ಯಾಗವನ್ನು ಮಾಡುವವನು. ಬ್ರಹ್ಮನೆಂದರೆ ಯಾಗ ರಕ್ಷಕನು. ಹೋತೃವೆಂದರೆ ಮಂತ್ರಪೂರ್ವಕ ದೇವತೆಗಳನ್ನು ಕರೆಯುವವನು. ಉದ್ಗಾತೃವೆಂದರೆ ದೇವತೆಗಳನ್ನು ಗಾನದ ಮೂಲಕ ಕರೆಯುವವನು. ಪ್ರಸ್ತೋತೃವೆಂದರೆ ದೇವತೆಗಳನ್ನು ಸ್ತೋತ್ರ ಮಾಡುವವನು ಎಂಬುದು ಸಾಮಾನ್ಯವಾದ ಅರ್ಥ.

ದೇವದತ್ತ ಮುನಿಗಳ ಯಜ್ಞವು ಆರಂಭವಾಯಿತು. ಎಲ್ಲರೂ ಅವರವರಿಗೆ ವಹಿಸಿದ ಕರ್ತವ್ಯಗಳನ್ನು ಚೆನ್ನಾಗಿ ಮಾಡುತ್ತಿದ್ದರು. ಸಾಮವೇದವನ್ನು ಚೆನ್ನಾಗಿ

ಅಧ್ಯಯನ ಮಾಡಿದ ಗೋಬಿಲ ಮಹರ್ಷಿಗಳು ಉದ್ಗಾತೃವಾಗಿ ಕಾರ್ಯನಿರ್ವಹಿಸುತ್ತಿದ್ದರು. ಉದ್ಗಾತೃವಾದವನು ಸಾಮವೇದವನ್ನು ತಿಳಿದವನಾಗಿದ್ದು, ಯಾಗದಲ್ಲಿ ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ 'ಸಾಮ'ಗಳನ್ನು ಹಾಡಬೇಕು. ಒಂದು ಸಂದರ್ಭದಲ್ಲಿ ಅವರು 'ರಥಂತರ'ವೆಂಬ ಸಾಮವನ್ನು ಹೇಳಬೇಕು. ಅದನ್ನು ಹೇಳುವಾಗ ಮಧ್ಯದಲ್ಲಿ ಒಮ್ಮೆ ಅವರು ಉಸಿರು ತೆಗೆದುಕೊಂಡರು. ಇದರಿಂದ ಉಚ್ಚರಿಸುತ್ತಿರುವ 'ರಥಂತರ' ಸಾಮದ ಸ್ವರವು ವ್ಯತ್ಯಾಸವಾಗಿ ಅಪಸ್ವರವಾಯಿತು. ಇದನ್ನು ಕಂಡ ಯಜಮಾನನಾದ ದೇವದತ್ತ ಮುನಿಗಳಿಗೆ ಕೋಪ ಬಂದುಬಿಟ್ಟಿತು. ಕೋಪದಿಂದ ಅವರು ಹೀಗೆಂದರು : ''ಉದ್ಗಾತೃವಾಗಿರುವ ಗೋಬಿಲ ಮಹರ್ಷಿಗಳೇ, ನೀವು ಕರ್ಮದ ಬಗ್ಗೆ ಶ್ರದ್ಧೆಯನ್ನು ಹೊಂದಿಲ್ಲ. ನಿಮ್ಮ ಸಾಮಗಾನದಲ್ಲಿ ಸ್ವರ ವ್ಯತ್ಯಾಸವಾಗುತ್ತಿದೆ. ಪುತ್ರ ಸಂತಾನವನ್ನು ಅಪೇಕ್ಷಿಸಿ ನಾನು ಈ ಯಜ್ಞವನ್ನು ಮಾಡುತ್ತಿದ್ದೇನೆ. ಇಂತಹ ಕಾಮ್ಯಕರ್ಮದಲ್ಲಿ ಸ್ವಲ್ಪ ವ್ಯತ್ಯಾಸವಾದರೂ ಫಲವು ದೊರೆಯುವುದಿಲ್ಲವೆಂದು ನಿಮಗೆ ತಿಳಿದಿಲ್ಲವೇ?''

ದೇವದತ್ತರ ಆಕ್ಷೇಪದಿಂದ ಗೋಬಿಲರಿಗೆ ಅಸಮಾಧಾನವಾಯಿತು. ಅವರು, ''ಎಲೈ ಯಜಮಾನನೇ, ಮಂತ್ರಗಳನ್ನು ಉಚ್ಚರಿಸುವಾಗ ಉಸಿರಾಟದಿಂದ ಆದ ವ್ಯತ್ಯಾಸವು ದೊಡ್ಡ ದೋಷವಾಗಿ ಪರಿಗಣಿಸಲ್ಪಡುವುದಿಲ್ಲ. ಉಸಿರಾಟವು ಸರ್ವ ಪ್ರಾಣಿಗಳ ಸಹಜವಾದ ಕ್ರಿಯೆಯಾಗಿದೆ. ಅದನ್ನು ಹೆಚ್ಚು ಹೊತ್ತು ತಡೆದು ಹಿಡಿದಿರಲು ಅಸಾಧ್ಯವಾಗುವುದು. ಅದನ್ನು ಗಮನಿಸದೆ ನನ್ನನ್ನು ಈ ರೀತಿಯಲ್ಲಿ ಆಕ್ಷೇಪಿಸುತ್ತಿರುವ ನಿಮಗೆ ಮುಂದೆ ಹುಟ್ಟಲಿರುವ ಮಗನು ಮೂರ್ಖನಾಗಿಯೂ, ಒಂದು ಶಬ್ದವನ್ನು ಉಚ್ಚರಿಸಲು ಬರದವನೂ, ದಡ್ಡನು ಆಗುವನು'' ಎಂದರು.

ಈ ಮಾತನ್ನು ಕೇಳಿದ ದೇವದತ್ತ ಮುನಿಗಳಿಗೆ ತುಂಬಾ ದುಃಖವಾಯಿತು. ಅವರು ''ಮಹರ್ಷಿಗಳೇ, ಯಾಗದಲ್ಲಿ ದೋಷ ಸಂಭವಿಸಬಾರದೆಂಬ ಉದ್ದೇಶದಿಂದ ಹೇಳಿದನೇ ಹೊರತು, ನಿಮ್ಮನ್ನು ಆಕ್ಷೇಪಿಸಬೇಕೆಂಬ ಉದ್ದೇಶದಿಂದಲ್ಲ. ಮಕ್ಕಳಿಲ್ಲದ ನನಗೆ ನೀವು ಹೇಳಿದಂತಹ ಮಗನು ಹುಟ್ಟಿಯಾದರೂ ಏನು ಪ್ರಯೋಜನ? ದಯವಿಟ್ಟು ನನಗೆ ಯೋಗ್ಯನಾದ ಮಗನು ಹುಟ್ಟುವಂತೆ ಅನುಗ್ರಹಿಸಬೇಕು'' ಎಂದರು.

ಆಗ ಗೋಬಿಲರು, ''ದೇವದತ್ತರೇ ಚಿಂತಿಸಬೇಡಿ. ನಿಮಗೆ ಹುಟ್ಟುವ ಮಗನು ಮೊದಲು ಮೂರ್ಖನಾಗಿದ್ದು, ಅನಂತರ ದೊಡ್ಡ ಜ್ಞಾನಿಯಾಗುವನು. ನಿಮಗೆ ಕೀರ್ತಿಯನ್ನು ತರುವನು'' ಎಂದರು. ಇಬ್ಬರಿಗೂ ಸಮಾಧಾನವಾಯಿತು. ನಿಯಮದಂತೆ ಯಜ್ಞವು ಪೂರ್ಣಗೊಂಡಿತು. ಮುಂದೆ ದೇವದತ್ತರ ಪತ್ನಿಯು ಗಂಡು ಶಿಶುವೊಂದನ್ನು ಹೆತ್ತಳು. ಉತಥ್ಯನೆಂದು ಆ ಮಗುವಿಗೆ ಹೆಸರಿಟ್ಟರು. ಗೋಬಿಲರ ಮಾತಿನಂತೆ ಆತ, ಮೊದಲು ಮೂರ್ಖನಾಗಿದ್ದರೂ ಮುಂದೆ ಮಹಾಜ್ಞಾನಿಯಾದನು.

★ ★ ★ ★

## ಸೌಭರಿ

ಗರುಡನಿಗೂ ಸರ್ಪಗಳಿಗೂ ಬದ್ಧದ್ವೇಷವಿರುವ ಕಥೆ ನಿಮಗೆ ತಿಳಿದಿದೆಯಷ್ಟೆ! ಒಮ್ಮೆ ಗರುಡನು ಕಾಳಿಂಗ ಸರ್ಪವನ್ನು ಓಡಿಸಿಕೊಂಡು ಬರುತ್ತಿದ್ದನು. ಕಾಳಿಂಗನಿಗೆ ಕಾಲಿಯ ಎಂಬ ಇನ್ನೊಂದು ಹೆಸರೂ ಇದೆ. ಕಾಳಿಂಗನು ಗರುಡನಿಂದ ತಪ್ಪಿಸಿಕೊಂಡು ಪೊಟರೆಯೊಳಗೆ ಅಡಗಿಕೊಂಡನು. ಗರುಡನಿಗೆ ತುಂಬ ಹಸಿವಾಗಿತ್ತು. ಮರದಲ್ಲಿ ಕುಳಿತು ಕೆಳಗೆ ನೋಡಿದಾಗ ಮಡುವೊಂದು ಕಾಣಿಸಿತು. ಅದರಲ್ಲಿ ಮೀನುಗಳಿದ್ದವು.

ಅವುಗಳಲ್ಲಿ ಸಂಮದ ಎಂಬ ಮೀನೊಂದು ತನ್ನ ಪತ್ನಿಯರೊಂದಿಗೆ ಜಲಕ್ರೀಡೆಯಾಡುತ್ತಿತ್ತು. ಅದು ಇಡೀ ಮಡುವಿಗೆ ರಾಜಮತ್ಸ್ಯವಾಗಿತ್ತು. ಆ ಮೀನನ್ನು ಕೊಕ್ಕಿನಲ್ಲಿ ಎತ್ತಿಕೊಂಡು ಗರುಡನು ಆಕಾಶಕ್ಕೆ ಹಾರಿದನು. ಆಗ ಆ ಮತ್ಸ್ಯನ ಪತ್ನಿಯರು ಹಾಹಾಕಾರ ಮಾಡಿದರು. ಅದೇ ಮಡುವಿನ ದಡದಲ್ಲಿ ಸೌಭರಿ ಎಂಬ ಮುನಿಗಳು ತಪಸ್ಸು ಮಾಡುತ್ತಿದ್ದರು. ಮತ್ಸ್ಯ ರಾಣಿಯರ ಹಾಹಾಕಾರದಿಂದ ಅವರ ತಪಸ್ಸಿಗೆ ಭಂಗ ಉಂಟಾಯಿತು. ಅವರು ಬಹಳ ಕಾಲದಿಂದ ಅಲ್ಲಿಯೇ ತಪೋನಿರತರಾಗಿದ್ದರು. ಮುನಿಗಳು ಮಡುವಿನ ಬಳಿಗೆ ಬಂದಾಗ ಮೀನುಗಳೆಲ್ಲ ದಡದ ಬಳಿಗೆ ಬಂದು ಗೋಳಿಟ್ಟವು. ಸೌಭರಿ ಮುನಿಗಳಿಗೆ ಆ ಮೀನುಗಳ ಬಗ್ಗೆ ತುಂಬ ಪ್ರೀತಿ. ಅದರಲ್ಲೂ ಸಂಮದ ಎಂಬ ದೊಡ್ಡ ಮೀನಿನ ಬಗ್ಗೆ ಅವರಿಗೆ

ಅತಿಯಾದ ಅಕ್ಕರೆ. ಅವರು ಪ್ರತೀದಿನ ಆ ಮೀನುಗಳಿಗೆ ಆಹಾರ ಹಾಕುತ್ತಿದ್ದರು. ತಮ್ಮ ಪೋಷಣೆಯಲ್ಲಿರುವ ಮೀನುಗಳು ಗೋಳಿಡುತ್ತಿರುವುದನ್ನು ನೋಡಿ ಅವರಿಗೆ ವ್ಯಥೆಯಾಯಿತು. ಆ ಸ್ಥಿತಿಗೆ ಕಾರಣನಾದ ಗರುಡನ ಮೇಲೆ ಸಿಟ್ಟು ಬಂತು. ಗರುಡನು ಪದೇ ಪದೇ ಆ ಮಡುವಿಗೆ ಬಂದು ಮೀನುಗಳನ್ನು ತಿನ್ನುವ ಅಪಾಯವೂ ಇತ್ತು. ಅವರು ದೊಡ್ಡ ಕಂಠದಿಂದ, ''ಇನ್ನು ಮುಂದೆ ಗರುಡನೇನಾದರೂ ಆ ಮಡುವಿನ ಬಳಿಗೆ ಬಂದರೆ ಅವನ ತಲೆ ಸಾವಿರ ಹೋಳಾಗಲಿ'' ಎಂದು ಶಾಪ ಕೊಟ್ಟರು.

ಆ ಶಾಪ ವಾಕ್ಯ ಆಕಾಶದಲ್ಲಿ ಹಾರುತ್ತಿದ್ದ ಗರುಡನಿಗೆ ಕೇಳಿಸಿತು. ಅವನು ಮತ್ತೆಂದೂ ಆ ಮಡುವಿನ ಕಡೆಗೆ ಸುಳಿಯಲಿಲ್ಲ. ಆದರೆ, ಹಸಿವು ತಾಳದ ಕಾರಣದಿಂದ ಮತ್ತೆ ಕಾಳಿಂಗ ಸರ್ಪನ ಬೆನ್ನು ಹತ್ತಿದ. ಕಾಳಿಂಗನಿಗೂ ಸೌಭರಿ ಮುನಿಗಳ ಶಾಪವಚನ ಗೊತ್ತಾಗಿತ್ತು. ಗರುಡ ಬೆನ್ನಟ್ಟಿ ಹೋದಾಗಲೆಲ್ಲ ಅವನು ಆ ಮಡುವಿನಲ್ಲಿ ಅಡಗಿ ಕುಳಿತುಕೊಳ್ಳುತ್ತಿದ್ದನು. ಗರುಡನಿಗೆ ಅಲ್ಲಿಗೆ ಬರಲು ಸಾಧ್ಯವಾಗದ್ದರಿಂದ ಕಾಳಿಂಗನಿಗೆ ಸುರಕ್ಷಿತವಾದ ಸ್ಥಳ ದೊರಕಿದ ಹಾಗಾಯಿತು. ಇದರಿಂದ ಕಾಳಿಂಗನ ಗರ್ವವೂ ತಲೆಗಡರಿತು. ಅವನು ಆ ಮಡುವನ್ನು ವಿಷಮಯ ಮಾಡಿದನು. ಒಮ್ಮೆ ನಂದಗೋಕುಲದ ಶ್ರೀಕೃಷ್ಣ ಮತ್ತು ಅವನ ಗೆಳೆಯರ ಗೋವುಗಳು ಆ ಮಡುವಿನ ಕಾಳಿಯನ ವಿಷಪೂರಿತ ನೀರನ್ನು ಕುಡಿದು ಸತ್ತುಹೋದವು.

ಕಾಲಿಯ ಮಡುವಿನ ಬಳಿಗೆ ತೆರಳುವ ಗೋವುಗಳೆಲ್ಲ ಸಾಯುತ್ತಿದ್ದುದರಿಂದ ನಂದಗೋಕುಲದ ಅರಸನಾದ ನಂದಗೋಪನಿಗೆ ಚಿಂತೆಯಾಯಿತು. ವಿಷಮಯ ಸರ್ಪವನ್ನು ಯಾರು ಕೊಲ್ಲಬಲ್ಲರು ಎಂದು ಯೋಚಿಸತೊಡಗಿದರು. ಆಗ ಅಲ್ಲಿಗೆ ತೆರಳಿದ ಬಾಲಕೃಷ್ಣನೇ ತಂದೆಗೆ ಧೈರ್ಯವನ್ನು ಹೇಳಿ ಕಾಳಿಂಗನನ್ನು ಮರ್ದಿಸಿ ಬರುವೆನೆಂದು ಹೇಳಿದರು.

ಗೆಳೆಯರನ್ನು ಹಿಂದಿರಿಸಿ ಆತನು ಮಡುವಿಗೆ ಹಾರಿದನು. ಕಾಳಿಂಗನ ಹೆಡೆಯನ್ನು ಮೆಟ್ಟಿ ಅವನ ಗರ್ವಾಪಹಾರ ಮಾಡಿದನು. ಸೌಭರಿ ಮುನಿಯ ಶಾಪವನ್ನು

ಕಾಳಿಂಗನು ಸದುಪಯೋಗ ಮಾಡಿಕೊಳ್ಳದ ಕಾರಣದಿಂದಲೇ ಅವನಿಗೆ ಶಿಕ್ಷೆಯಾಯಿತು.

★ ★ ★ ★

## ಅರಿಷ್ಟನೇಮಿ

ಹೈಹಯವೆಂಬ ರಾಜಮನೆತನವಿತ್ತು. ಆ ರಾಜಮನೆತನದಲ್ಲಿ ಹುಟ್ಟಿದವರನ್ನೆಲ್ಲಾ ಸಾಮಾನ್ಯವಾಗಿ ಹೈಹಯರೆಂದು ಕರೆಯುತ್ತಾರೆ. ಒಮ್ಮೆ ಒಬ್ಬ ಹೈಹಯ ರಾಜಕುಮಾರನು ತನ್ನ ಸಹೋದರರನ್ನು ಮತ್ತು ಸಂಗಡಿಗರನ್ನು ಕರೆದುಕೊಂಡು ಕಾಡಿಗೆ ಬೇಟೆಗಾಗಿ ಹೋದನು. ದಟ್ಟವಾದ ಅರಣ್ಯದಲ್ಲಿ ಹೈಹಯರು ಬೇಟೆಯಾಡುತ್ತಿದ್ದರು.

ಅಲ್ಲಿಯೇ ಅರಿಷ್ಟನೇಮಿಗಳೆಂಬ ಮುನಿಗಳ ಆಶ್ರಮವಿತ್ತು. ಅವರು ಮಹಾತಪಸ್ವಿಗಳಾಗಿದ್ದರು. ಅನೇಕ ಮಂದಿ ಶಿಷ್ಯರು ಅವರ ಆಶ್ರಮದಲ್ಲಿ ವಿದ್ಯಾರ್ಜನೆ ಮಾಡುತ್ತಿದ್ದರು. ಒಮ್ಮೆ ಅವರ ಬಳಿಗೆ ಓರ್ವನು ಬಂದು ತನ್ನ ಮಗಳನ್ನು ವಿವಾಹವಾಗಬೇಕೆಂದು ಬಿನ್ನೈಸಿದಾಗ ಅವರು ಅನುಮೋದಿಸಿ ಆಕೆಯನ್ನು ವರಿಸಿದ್ದರು. ದೀರ್ಘವಾದ ಸಾಂಸಾರಿಕ ಜೀವನದಲ್ಲಿ ಅವರಿಗೊಬ್ಬ ಮಗನು ಜನಿಸಿದ್ದನು. ಮಹರ್ಷಿಗಳ ಮಗನಲ್ಲವೆ? ಅವನು ಎಲ್ಲ ಶಿಷ್ಯರಂತೆ ತಾನೂ ಕೂಡ ಪಾಠಗಳನ್ನು ಅಭ್ಯಾಸ ಮಾಡುತ್ತಿದ್ದ. ತನ್ನ ಮಗನೆಂಬ ಕಾರಣಕ್ಕಾಗಿ ಅವನಿಗೆ ಯಾವುದೇ ರೀತಿಯ ರಿಯಾಯಿತಿಯನ್ನು ಅರಿಷ್ಟನೇಮಿ ತೋರಿಸುತ್ತಿರಲಿಲ್ಲ. ಕಠಿಣ ಪರಿಶ್ರಮದಿಂದ ಕಲಿತು ಆತ ಮಹಾಜ್ಞಾನಿಯಾಗಿ ಬೆಳೆಯತೊಡಗಿದ.

ಒಮ್ಮೆ ಇತರ ಶಿಷ್ಯರೊಂದಿಗೆ ಅರಿಷ್ಟನೇಮಿಯ ಮಗನೂ ಸಮಿಧೆಗಳನ್ನು ತರಲು ಕಾಡಿಗೆ ತೆರಳಿದ್ದನು. ಅಲ್ಲಿ ಮುಳ್ಳುಗಂಟಿಗಳು ಮೈಗೆ ತಾಗದಿರಲೆಂದು ಜಿಂಕೆಯ ಚರ್ಮವನ್ನು ಮೈಗೆ ಹೊದ್ದುಕೊಂಡಿದ್ದನು.

ಇತ್ತ ಹೈಹಯರ ರಾಜಕುಮಾರನು ಒಂದು ಜಿಂಕೆಯನ್ನು ಬೆನ್ನಟ್ಟುತ್ತ ಕಾಡಿನಲ್ಲಿ ಬರುತ್ತಿದ್ದನು. ಒಂದೆಡೆ ಜಿಂಕೆ ಮಾಯವಾಗಿ ಹೋಯಿತು. ಆದರೂ

ದೂರದಲ್ಲೊಂದು ಜಿಂಕೆ ಕಂಡಂತಾಗಿ ಅದರ ಮೇಲೆ ಬಾಣಪ್ರಯೋಗ ಮಾಡಿದನು.

ಅದು ಜಿಂಕೆಯಾಗಿರಲಿಲ್ಲ. ಜಿಂಕೆಯ ಚರ್ಮವನ್ನು ಮೈಗೆ ಹೊದ್ದುಕೊಂಡಿದ್ದ ಮುನಿಕುಮಾರನಾಗಿದ್ದ. ಬಾಣವು ಬಾಲಕನ ಶರೀರವನ್ನು ಪ್ರವೇಶಿಸಿದಾಗ, 'ಅವನು ಹಾಹಾಕಾರವನ್ನು ಮಾಡುತ್ತ ಹೊರಳಾಡಿದ. ಅವನ ಆಕ್ರಂದನವನ್ನು ನೋಡಿ ಉಳಿದ ಗೆಳೆಯರು ಹೆದರಿ ದೂರ ಓಡಿದರು. ಹೈಹಯರು ಗಾಬರಿಗೊಂಡು ಸನಿಹ ಬಂದರು. ತೇಜಸ್ವಿಯಾದ ಋಷಿಕುಮಾರನು ನೆಲದಲ್ಲಿ ಬಿದ್ದು ಹೊರಳಾಡುತ್ತಿದ್ದನು. ಇನ್ನೇನು, ಕೆಲವೇ ಕ್ಷಣಗಳಲ್ಲಿ ಅವನ ಪ್ರಾಣಪಕ್ಷಿ ಹಾರಿಹೋಗಬಹುದಾಗಿತ್ತು. ಹೈಹಯರು ಮಂಡಿ ಊರಿ ತಮ್ಮದು ಅಪರಾಧವಾಯಿತು ಎಂದು ಗೋಗರೆದರು. ತಮ್ಮನ್ನು ಕ್ಷಮಿಸುವಂತೆ ಬೇಡಿಕೊಂಡು ಮುನಿಕುಮಾರನ ಪರಿಚಯವನ್ನು ಕೇಳಿದರು. ಆತ ತಾನು ಅರಿಷ್ಟನೇಮಿಗಳ ಮಗನೆಂದು ಹೇಳಿದನು.

ಕೂಡಲೇ ಹೈಹಯರು ತಮ್ಮ ಆಯುಧಗಳನ್ನು ಚೆಲ್ಲಿ ಅರಿಷ್ಟನೇಮಿಗಳ ಆಶ್ರಮಕ್ಕೆ ಓಡಿದರು. ತಮ್ಮ ಪಾದಗಳಿಗೆ ಭಕ್ತಿಭಾವದಿಂದ ನಮಸ್ಕರಿಸಿದ ರಾಜಕುಮಾರನನ್ನು ಅಚ್ಚರಿಯಿಂದ ನೋಡಿದ ಅರಿಷ್ಟನೇಮಿ ಮಹರ್ಷಿಯು ಅವರನ್ನು ಉಪಚರಿಸಿ ಆಗಮಿಸಿದ ಕಾರಣವನ್ನು ವಿಚಾರಿಸಿದರು.

ಹೈಹಯರು ಹೆದರುತ್ತ 'ಮುನಿಗಳೆ, ನಾವು ನಿಮ್ಮ ಆತಿಥ್ಯವನ್ನು ಸ್ವೀಕರಿಸಲು ಬಂದವರಲ್ಲ, ನಮ್ಮಿಂದ ಘನವಾದ ಅಪರಾಧವೊಂದು ಸಂಭವಿಸಿತು' ಎಂದು ವಿವರವಾಗಿ ಹೇಳಿದರು. ಈ ಕೃತ್ಯ ಎಸಗಿದ್ದಲ್ಲ, ಅರಿವಿಲ್ಲದೆ ಮಾಡಿದ ಕೆಲಸವಾದುದರಿಂದ ಪ್ರಮಾದವೆಂದು ಪರಿಗಣಿಸಬೇಕು ಎಂದು ಕ್ಷಮೆಯಾಚಿಸಿದರು.

ಮಹರ್ಷಿಗಳು ತಮಗೆ ಶಾಪಕೊಡುತ್ತಾರೆ ಎಂಬುದು ಅವರ ನಿರೀಕ್ಷೆಯಾಗಿತ್ತು. ಆದರೆ, ಅರಿಷ್ಟನೇಮಿಗಳು ಸಮಾಧಾನಚಿತ್ತರಾಗಿ 'ಘಟನೆ ನಡೆದ ಪ್ರದೇಶಕ್ಕೆ ತಮ್ಮನ್ನು ಕರೆದುಕೊಂಡು ಹೋಗಿ' ಎಂದು ಹೇಳಿದರು.

ರಾಜಕುಮಾರರು ಋಷಿಪುತ್ರನು ಬಿದ್ದಿದ್ದ ಸ್ಥಳಕ್ಕೆ ಮಹರ್ಷಿಗಳನ್ನು ಕರೆದುಕೊಂಡು ಬಂದರು. ಆದರೆ ಅಲ್ಲಿಗೆ ಬಂದು ನೋಡಿದರೆ ಅಲ್ಲಿ ಋಷಿಪುತ್ರನ ದೇಹವಿರಲಿಲ್ಲ. ಸರಿಯಾಗಿ ಹುಡುಕಿ ಹೇಳಿ ಎಂದು ಹೇಳಿ ಅರಿಷ್ಟನೇಮಿಗಳು ಆಶ್ರಮಕ್ಕೆ ತೆರಳಿದರು. ಅರಣ್ಯವನ್ನೆಲ್ಲಾ ಸಂಚರಿಸಿ ಹುಡುಕಿದರೂ ಆ ಋಷಿಪುತ್ರನ ದೇಹವು ಸಿಗಲೇ ಇಲ್ಲ. ನಾಚಿಕೆ, ಬೇಸರ, ಪಾಪಪ್ರಜ್ಞೆಯಿಂದ ರಾಜಕುಮಾರರು ಅರಿಷ್ಟನೇಮಿಗಳ ಆಶ್ರಮಕ್ಕೆ ಬಂದು ದೇಹವು ಎಲ್ಲಿಯೂ ಕಾಣಲು ಸಿಗಲಿಲ್ಲವೆಂದು ಹೇಳಿದರು.

ಎಲ್ಲವನ್ನೂ ತಿಳಿದುಕೊಂಡಿದ್ದ ಅರಿಷ್ಟನೇಮಿಗಳು ತಮ್ಮ ಮಗನನ್ನು ಕರೆದರು. ಅವರ ಮಗನು ತಕ್ಷಣವೇ ಓಡೋಡಿ ಬಂದು ತಂದೆಯ ಮುಂದೆ ಬಂದು ನಿಂತನು.

ಅರಿಷ್ಟನೇಮಿಗಳ ತಪಸ್ಸಿನ ಪ್ರಭಾವ ಹಾಗಿತ್ತು. ಅವರು ರಾಜಕುಮಾರರನ್ನು ಹರಸಿ ಯಾವುದೇ ರೀತಿಯ ಪಾಪ ಬಾಧಿಸುವುದಿಲ್ಲ ಎಂದು ಅನುಗ್ರಹಿಸಿ ಕಳುಹಿಸಿದರು.

★ ★ ★ ★

## ಮಹಾಮುನಿ ಚೂಲಿ

ಚೂಲಿಯು ಕಾಮವನ್ನು ಗೆದ್ದಿದ್ದನು. ಕೋಪವನ್ನು ಬಿಟ್ಟಿದ್ದನು. ಸಕಲ ಮಾಯಾ ಮೋಹವನ್ನು ಅವನು ಮೀರಿ ನಿಂತಿದ್ದನು. ಅವನ ತಪಸ್ಸನ್ನು ಕೆಡಿಸಬೇಕೆಂದು ಅಮರಾವತಿಯ ಅರಸು ಸೋಮದಾ ಎಂಬ ಓರ್ವ ಗಂಧರ್ವ ಸುಂದರಿಯನ್ನು ಕಳಿಸಿದನು. ಆ ಬಿಂಕದ ಸಿಂಗಾರೆಯು ಮನುಜಲೋಕದ ಈ ಮುನಿಯ ಎದುರು ನಲಿದು, ಒಲಿದು, ಕುಣಿದು, ಮಣಿದು, ಹಾಡಿಪಾಡಿ ದಣಿದು ಹೋದಳು. ಆ ಮುನಿಗೆ ಅದರಿಂದ ಏನೂ ವಿಕಾರವಾಗಲೇ ಇಲ್ಲ. ಅವನ ಈ ಸಂಯಮವನ್ನು ಕಂಡು ಆ ಗಂಧರ್ವರ ಮಣಿಗೆ ಮನಸ್ಸು ಮುಗ್ಧವಾಯಿತು. ಆ ತಪಸ್ವಿಯನ್ನು ಕಂಡು ಅವಳಿಗೆ ಭಕ್ತಿ ಹುಟ್ಟಿತು. ಆಗ ಅವಳು ಸ್ವರ್ಗ ತೊರೆದು, ಗೆಜ್ಜೆ ಹರಿದು, ತಂಬೂರಿ ಮುರಿದು, ಅಲ್ಲಿಯೇ ನಿಂತು ಆ ಋಷಿಯ ಸೇವೆಯನ್ನು ಕೈಕೊಂಡಳು. ಅನೇಕ ವರ್ಷ ಅವಳು ಹಸಿವೆ ನೀರಡಿಕೆಗಳನ್ನು ಕಟ್ಟಿ ಗುಡಿಸಲಲ್ಲಿದ್ದು ಬಿಸಿಲ್ಹಣ್ಣೆ ತಿಂದು ಆ ಮುನಿಯನ್ನು ಸೇವಿಸಿದಳು.

ಕೊನೆಗೊಂದು ದಿನ ಮುನಿ ಅವಳ ಸೇವಾ ತಪಸ್ಸಿಗೆ ಪ್ರಸನ್ನನಾಗಿ ಒಲಿದು ಕೇಳಿದ 'ಬಾಲೆ, ನಿನಗೇನು ಬೇಕು!'. 'ಪ್ರಭು, ತಮ್ಮಿಂದ ನನಗೆ ಒಂದು ಮಗು ಬೇಕು' ಎಂದು ಅವಳು ತನ್ನ ಆಶೆಯನ್ನು ಉಸುರಿಸಿದಳು.

ಅದಕ್ಕೆ ಆ ತಪೋಧನನು ನಕ್ಕು 'ಗಂಧರ್ವ ಕುವರಿ, ನಾನು ನೈಷ್ಠಿಕ ಬ್ರಹ್ಮಚಾರಿ. ನಾನೆಂದಿಗೂ ಸ್ತ್ರೀಸಂಗ ಮಾಡಿ ಸಂತಾನವನ್ನು ಉತ್ಪಾದಿಸಲಾರೆ. ಆದರೆ ನೀನು ಬೇಡಿದ್ದರಿಂದ ಒಬ್ಬ ಮಾನಸಕುವರನನ್ನು ನಿನಗೆ ಕೊಡುತ್ತೇನೆ' ಎಂದು ಹೇಳಿ ತನ್ನ ತಪಃಶ್ಶಕ್ತಿಯಿಂದ ಒಬ್ಬ ಮಾನಸ ಪುತ್ರನನ್ನು ನಿರ್ಮಿಸಿ ಅವಳಿಗೆ ದಯಪಾಲಿಸಿದನು. ಅದರಿಂದ ಸೋಮದೆಯು ತೃಪ್ತಳಾಗಿ ಆ ಮಗುವನ್ನು ಬೆಳೆಸಿ ದೊಡ್ಡದನ್ನಾಗಿ ಮಾಡಿದಳು. ಮುಂದೆ ಅದೇ ಚೂಲಿಯ ಮಾನಸ ಕುಮಾರನೇ ಬ್ರಹ್ಮದತ್ತನೆಂದು ಪ್ರಸಿದ್ಧನಾದನು.

★ ★ ★ ★

## ಪ್ರಮತಿ

ಹಿಂದೊಮ್ಮೆ ಭರತ ಖಂಡದಲ್ಲಿ ಜಾತೀಯ ಗಲಭೆಯು ತನ್ನ ಭೂತಚೇಷ್ಟೆಯನ್ನು ಪ್ರಾರಂಭಿಸಿತ್ತು. ಅಂದಿನ ಮುಖ್ಯ ಜಾತಿಗಳಾದ ಬ್ರಾಹ್ಮಣ ಕ್ಷತ್ರಿಯರಲ್ಲಿ ತೀವ್ರವಾದ ಮನಸ್ತಾಪವು ತಲೆದೋರಿ ಕಿಡಿ ಹೊತ್ತಿ ಕಲಹವು ಕದನದ ಸ್ವರೂಪವನ್ನೇ ತೆಗೆದುಕೊಂಡು ಬಿಟ್ಟಿತು. ಆ ಕಾಲದಲ್ಲಿ ಅಧಿಕಾರದಲ್ಲಿದ್ದ ಕ್ಷತ್ರಿಯರೆಲ್ಲರೂ ಬಹುಕಾಲದಿಂದ ನಡೆದುಬಂದ ಬ್ರಾಹ್ಮಣರ ಬೌದ್ಧಿಕ ಪ್ರತಿಷ್ಠೆ ಮತ್ತು ವಿಶಿಷ್ಟ ಗೌರವಗಳನ್ನು ಸಹಿಸಲಾರದೆ ಅವರ ವಿರುದ್ಧ ಕತ್ತಿಯನ್ನು ಮಸೆಯಹತ್ತಿದರು.

ಎಂದಿನಿಂದಲೂ ಬುದ್ಧಿವಂತರಾದ ಬ್ರಾಹ್ಮಣರು ಕ್ಷತ್ರಿಯ ರಾಜರನ್ನೆಲ್ಲ ತಮ್ಮ ಅಂಕಿತದಲ್ಲಿ ಇರಿಸಿಕೊಂಡು ಇಡೀ ರಾಜ್ಯದ ಶಾಸನದ ಸೂತ್ರಗಳನ್ನೆಲ್ಲ ತಮ್ಮ ಮನಸ್ಸಿಗೆ ಬಂದಂತೆ ಚಾಲನೆ ಮಾಡುತ್ತಿದ್ದರು. ಕೊನೆಗೊಮ್ಮೆ ಆ ಕ್ಷತ್ರಿಯರೆಲ್ಲರೂ ಒಂದಾಗಿ, ಈ ಬ್ರಾಹ್ಮಣ ಜಾತಿಯನ್ನೇ ಅಳಿದುಬಿಡಬೇಕೆಂದು ನಿರ್ಧರಿಸಿ, ಕಂಡ ಕಂಡಲ್ಲೆಲ್ಲ ಬ್ರಾಹ್ಮಣರನ್ನು ತುಂಡರಿಸಹತ್ತಿದರು.

ಅನೇಕ ಋಷಿಮುನಿಗಳ ಆಶ್ರಮದಲ್ಲಿಯ ನಿರಪರಾಧಿ ಸ್ತ್ರೀ ಬಾಲಕರನ್ನು ಕಡಿದು ಪುಣ್ಯಾಶ್ರಮಗಳಿಗೆಲ್ಲ ಬೆಂಕಿ ಹಚ್ಚಿ ಸುಟ್ಟು ಹಾಕಿದರು. ಆಗ ದೇಶದಲ್ಲಿಯ ಬ್ರಾಹ್ಮಣರೆಲ್ಲರೂ ಸಂಭ್ರಾಂತರಾಗಿ ಮುಂದೇನು ಮಾಡಬೇಕೆಂದು ದಿಜ್ಮೂಢರಾಗಿ ನಿಂತರು.

ರಾಜ್ಯ, ಅಧಿಕಾರ, ಸೈನ್ಯ, ಶಸ್ತ್ರಾಸ್ತ್ರಗಳೆಲ್ಲವೂ ಕ್ಷತ್ರಿಯ ರಾಜರ ಕೈಯಲ್ಲಿಯೇ ಇದ್ದುದರಿಂದ ಬಡಪಾಯಿಗಳಾದ ಬ್ರಾಹ್ಮಣರಿಗೆ ಏನೂ ಮಾಡಲಿಕ್ಕೆ ಬಾರದಂತಾಯಿತು. ಊರೂರಿಗೆ ಬ್ರಾಹ್ಮಣರ ಹೆಣಗಳು ಉರುಳಿದವು. ಶಕ್ತಿ ಇದ್ದವರು ಓಡಿ ಹೋಗಿ ಗಿರಿ ದರಿ ಗುಹೆಗಳಲ್ಲಿ ತಲೆ ಮರಿಸಿಕೊಂಡರು.

ಆಗ ಹಲ ಕೆಲವು ಬ್ರಾಹ್ಮಣೋತ್ತಮರು ಅಲಕನಂದಾ ನದಿಯ ದಂಡೆಯ ಮೇಲೆ ತಪಂಗೈಯ್ಯುತ್ತಿರುವ ಪ್ರಮತಿ ಎಂಬ ತರುಣ ತಪಸ್ವಿಯೊಬ್ಬನ ಬಳಿಗೆ ಬಂದು ನಡೆದ ಸಮಾಚಾರವನ್ನೆಲ್ಲ ತಿಳಿಸಿದರು. ಪ್ರಮತಿಯು ಕೈಯಲ್ಲಿಯ ಜಪಮಾಲೆಯನ್ನು ಕೆಳಗಿಟ್ಟು ಬ್ರಾಹ್ಮಣರ ಸಂಘಟನೆಗೆ ಟೊಂಕ ಕಟ್ಟಿದನು.

ಅವನು ಊರೂರಿಗೆ ಹೋಗಿ, ಅಡವಿ ಅಡವಿ ಅಲೆದು, ಎಲ್ಲ ಬ್ರಾಹ್ಮಣರನ್ನೂ ಸಂಘಟನೆ ಮಾಡಿ, ಅವರಲ್ಲಿ ಉತ್ಸಾಹವನ್ನು ತುಂಬಿ ಅವರನ್ನು ಹೋರಾಟಕ್ಕೆ ಅಣಿ ಮಾಡಿದನು. ತಮ್ಮ ಜಾತಿಯ ಅಸ್ತಿತ್ವವನ್ನು ಕಾಯ್ದುಕೊಳ್ಳಲಿಕ್ಕಾಗಿ ದೇಶದ ಎಲ್ಲ ಬ್ರಾಹ್ಮಣ ಯುವಕರೂ ಹರಿದ್ವಾರದ ಬಳಿಯ ಗೆಂಗಾ ತಟಾಕದ ಒಂದು ದೊಡ್ಡ ಮೈದಾನದಲ್ಲಿ ಒಂದುಗೂಡಿದರು.

ಮಂತ್ರಪೂತವಾದ ಅನೇಕ ಶಸ್ತ್ರಾಸ್ತ್ರಗಳಿಂದ ಸುಸಜ್ಜಿತವಾದ ಆ ಪ್ರಚಂಡ ವಿಪ್ರ ಸೇನೆಯನ್ನು ಕಂಡು ಕ್ಷತ್ರಿಯರು ಗಹಗಹಿಸಿ ನಕ್ಕು ಅವರ ಮೇಲೆ ಹಸಿದ ತೋಳಗಳಂತೆ ಎರಗಿದರು.

ಆದರೆ ಪ್ರಮತಿಯು ನುರಿತ ಸೇನಾಪತಿಯಂತೆ ತನ್ನ ವಿಪ್ರಸೇನೆಗೆ ಸಂಕೇತ ಗೈದು ಕ್ಷತ್ರಿಯರಿಗೆ ನುಗ್ಗಿ ಬರಲಿಕ್ಕೆ ಅವಕಾಶವನ್ನು ಕಲ್ಪಿಸಿಕೊಟ್ಟ. ಅನಂತರ ವೀರಾವೇಶದಿಂದ ಕ್ಷತ್ರಿಯ ರಾಜರ ಸೇನಾಪಥಕಗಳು ನುಗ್ಗಿ ಒಳಬಂದಂತೆ ಹಿಂದೆ ಹಿಂದೆ ಸರಿಯುತ್ತ

ಆಯ ಕಟ್ಟಿನ ಸ್ಥಳಕ್ಕೆ ಬಂದ ಕೂಡಲೇ ಪ್ರಮತಿಯ ಎರಡೂ ಬದಿಗಳಿಂದ ಅವರ ಮೇಲೆ ಏರಿ ಹೋರಲಿಕ್ಕೆ ತನ್ನ ಭೂಸುರಸೇನೆಗೆ ಅಣತಿಯಿತ್ತ. ವಿಜಯತಾಂ ಬ್ರಹ್ಮತೇಜಃ, ವರ್ಧತಾಂ ವೇದಮಾರ್ಗಃ' ಎಂದೆನ್ನುತ್ತ ಒಮ್ಮೆಲೆ ಇಕ್ಕೆಲಗಳಿಂದ ಕ್ಷತ್ರಿಯರನ್ನು ವಿಪ್ರವೀರರು ತರಿಯ ಹತ್ತಿದರು. ಪ್ರಮತಿಯ ಕೈಯಲ್ಲಿ ಯುದ್ಧದ ಶಿಕ್ಷಣ ಪಡೆದ ಬ್ರಾಹ್ಮಣ ತರುಣರು ತರಕಾರಿಗಳಂತೆ ಕ್ಷತ್ರಿಯರ ತಲೆಗಳನ್ನು ತರಿದೊಗೆಯಹತ್ತಿದರು. ಎರಡು ಬದಿಗಳಲ್ಲಿ ಸುಸಂಘಟಿತವಾದ ಪ್ರಮತಿಯ ಸೇನೆಯು ಮೃತ್ಯುವಿನ ನಾಲಿಗೆಯಂತೆ ಹರಿತವಾದ ಖಡ್ಗ ಹಿರಿದು ನಿಂತುಕೊಂಡಿದ್ದರೆ ಇನ್ನೊಂದು ಬದಿಗೆ ದೊಡ್ಡ ಗುಡ್ಡ, ಮತ್ತೊಂದು ಬದಿಗೆ ರಭಸದಿಂದ ಹರೆಯುವ ಗಂಗೆಯ ಪ್ರವಾಹ, ಹೀಗಾಗಿ ಮದೋನ್ಮತ್ತರಾದ ಕ್ಷತ್ರಿಯರಿಗೆಲ್ಲ ಮರಣವೇ ಶರಣವಾಯಿತು. ಅನೇಕ ಕ್ಷತ್ರಿಯರು ಗಂಗಾ ಪ್ರವಾಹದಲ್ಲಿ ಜಲಸಮಾಧಿ ಪಡೆದರು. ಅಳಿದುಳಿದವರು ಶರಣು ಬಂದು ಬ್ರಾಹ್ಮಣರ ದಾಸ್ಯವನ್ನು ಒಪ್ಪಿದರು.

ಮುಂದೆ ಪ್ರಮತಿಯು ದೇಶದ ತುಂಬ ಸಂಚರಿಸಿ ಮಲೆತು ನಿಂತ ಕ್ಷತ್ರಿಯರನ್ನೆಲ್ಲ ಮುರಿದು ಮೂಲೆಗೊತ್ತಿ ಅಖಂಡ ಭರತ ಖಂಡದಲ್ಲಿ ಏಕಛತ್ರಾಧಿಪತ್ಯವನ್ನು ಸ್ಥಾಪಿಸಿ ವೈದಿಕ ಸಾಮ್ರಾಜ್ಯಕ್ಕೆ ನಾಂದೀ ಹಾಕಿದ. ಆದರೆ ಆ ಕಾಲದಲ್ಲಿ ಯಾವ ಯೋಗ್ಯ ಬ್ರಾಹ್ಮಣನೂ ತಪಸ್ಸು, ಅರಣ್ಯ, ಆಶ್ರಮಗಳನ್ನು ಬಿಟ್ಟು ರಾಜಧಾನಿಗೆ ಬಂದು ಸಿಂಹಾಸನವನ್ನು ಏರಲಿಕ್ಕೆ ಸಿದ್ಧನಾಗಲಿಲ್ಲ. ಆಗ ನಿರುಪಾಯನಾಗಿ ಪ್ರಮತಿಯು ಒಬ್ಬ ಪದ ಭ್ರಷ್ಟ ಕ್ಷತ್ರಿಯ ರಾಜಕುಮಾರನನ್ನೇ ಪ್ರತಿಷ್ಠಾನದಲ್ಲಿ ಸಿಂಹಾಸನದ ಮೇಲೆ ಕೂಡಿಸಿ ಪಟ್ಟಾಭಿಷೇಕ ಗೈದ. ಬ್ರಹ್ಮದ್ವೇಷವನ್ನು ಎಂದೂ ಮಾಡತಕ್ಕದ್ದಲ್ಲ ಎಂದು ಕರಾರು ಮಾಡಿ ಅವನಿಗೆ ಧರ್ಮಸಾಮ್ರಾಜ್ಯದ ಸರ್ವಾಧಿಕಾರವನ್ನೆಲ್ಲ ಒಪ್ಪಿಸಿದ. ಆ ರಾಜ ಮತ್ತು ಮಂತ್ರಿಗಳೆಲ್ಲರೂ ಅವನನ್ನು ಕೊನೆಗೆ ರಾಜಗುರುವಾಗಿ ಇರಬೇಕೆಂದು ಭಿನ್ನವಿಸಿದರೂ ಪ್ರಮತಿ ಕೇಳಲಿಲ್ಲ. ತಾನು ತಾತ್ಪೂರ್ತಿಕವಾಗಿ ಬ್ರಾಹ್ಮಣ ಜಾತಿಯ ಸಂಕಷ್ಟಪರಿಹಾರಕ್ಕಾಗಿ ಹಿಡಿದ ಸೇನಾಪತಿ ಪದದ ಖಡ್ಗವನ್ನು ಆ ಕ್ಷತ್ರಿಯ ರಾಜನಿಗೆ ಒಪ್ಪಿಸಿ ತಾನು ಮತ್ತೆ ತಪಸ್ಸಿಗಾಗಿ ಅರಣ್ಯಕ್ಕೆ ತೆರಳಿದನು.

ಹಿಮಾಚಲ ಪರ್ವತದ ಅಲಕನಂದೆಯ ತಟಾಕದಲ್ಲಿರುವ ತನ್ನ ಮೊದಲಿನ ಗುಡಿಸಲಿಗೆ ಬಂದು ತಾನು ಇಷ್ಟು ದಿನ ತನ್ನ ತಪಸ್ಸನ್ನು ಬಿಟ್ಟು ರಾಜಸವಾದ ಕ್ಷಾತ್ರವೃತ್ತಿಗೆ

ಇಳಿದಿದ್ದಕ್ಕಾಗಿ ಪ್ರಾಯಶ್ಚಿತ್ತ ಮಾಡಿಕೊಂಡು ತನ್ನ ಪೂರ್ವದ ಬ್ರಾಹ್ಮೀ ತಪಸ್ಸನ್ನು ಪುನಃ ಪ್ರಾರಂಭಿಸಿದನು.

ಆ ಬ್ರಾಹ್ಮಣ ಸೇನಾಪತಿಯ ಈ ತ್ಯಾಗದ ಸವಿನೆನಪಿಗಾಗಿ ಅಂದಿನಿಂದ ಕ್ಷತ್ರಿಯ ರಾಜರು ತಮ್ಮ ರಾಜ್ಯದಲ್ಲಿಯ ಒಳ್ಳೇ ಬುದ್ಧಿವಂತರಾದ ಬ್ರಾಹ್ಮಣರನ್ನು ಮಂತ್ರಿಗಳೆಂದೂ, ತಪಸ್ವಿ ಬ್ರಾಹ್ಮಣರನ್ನು ತಮ್ಮ ಕುಲಗುರುಗಳೆಂದೂ ನಿಯಮಿಸಿಕೊಳ್ಳತೊಡಗಿದರು.

ಮತ್ತು ಪ್ರಮತಿಯು ಅವರಿಗೆ ಕೊಟ್ಟ ಬ್ರಹ್ಮಶಾಸನವನ್ನು ನೆನೆದು ಕ್ಷತ್ರಿಯರು ಮುಂದೆ ಎಂದೂ ಇತಿಹಾಸದಲ್ಲಿ ಬ್ರಾಹ್ಮಣರ ವಿರುದ್ಧ ತಮ್ಮ ಖಡ್ಗವನ್ನು ಎತ್ತಲಿಲ್ಲ.



## ಮಹರ್ಷಿ ಬಾಲಧಿ

ಮಹಾತಪಸ್ವಿಯಾದ ಬಾಲಧಿಯು ಮದುವೆಯಾದ ಬಳಿಕ ಘೋರ ತಪಸ್ಸನ್ನು ಕೈಕೊಂಡನು. ಅವನ ಉಗ್ರವಾದ ತಪೋನುಷ್ಠಾನಕ್ಕೆ ಮೆಚ್ಚಿ ದೇವತೆಗಳು ಪ್ರಸನ್ನರಾಗಿ ಅವನಿಗೆ ಏನು ಬೇಕು ಎಂದು ಕೇಳಿದರು. ಅದಕ್ಕೆ ಪುತ್ರವ್ಯಾಮೋಹದಿಂದ ಒಡಗೂಡಿದ ಬಾಲಧಿ ಮುನಿಯು ತನಗೊಬ್ಬ ಅಜರಾಮರನಾದ ಮಗನು ಹುಟ್ಟಬೇಕು. ಹುಟ್ಟಿದ ಮಗನು ಎಂದೂ ಸಾಯದಂತೆ ವರ ಕೊಡಬೇಕು ಎಂದು ಕೇಳಿಕೊಂಡನು. ಅದಕ್ಕೆ ದೇವತೆಗಳು ಹುಟ್ಟಿದವನಿಗೆ ಸಾವು ಬರಲೇಬೇಕು. ಸಾಯದಿರುವದು ಸೃಷ್ಟಿಯ ನಿಯಮಕ್ಕೆ ವಿರುದ್ಧ. ಆದುದರಿಂದ ಅಮರತ್ವ ವರವನ್ನು ಕೊಡಲಿಕ್ಕಾಗುವುದಿಲ್ಲ ಎಂದು ಹೇಳಿದರು. ಅದನ್ನು ಕೇಳಿ ಬಾಲಧಿಯು ತುಸು ವಿಚಾರ ಮಾಡಿ ತನ್ನ ಕಣ್ಣೆದುರಿಗಿರುವ ಒಂದು ದೊಡ್ಡ ಗುಡ್ಡವನ್ನು ತೋರಿಸಿ, ಆ ಬೆಟ್ಟವು ಇರುವವರೆಗೆ ನನ್ನ ಮಗನಿಗೆ ಸಾವು ಬರಬಾರದು ಎಂದು ಬೇಡಿಕೊಂಡನು. ಅದಕ್ಕೆ ದೇವತೆಗಳು ತಥಾಸ್ತು ಎಂದು ವರ ಕೊಟ್ಟರು.

ದೇವತೆಗಳ ಕೃಪೆಯಿಂದ ಬಾಲಧಿಗೆ ಒಬ್ಬ ಮಗನು ಜನಿಸಿದನು. ಅವನಿಗೆ ಪರ್ವತಾಯು ಎಂದರೆ ಪರ್ವತದಂತೆ ಸ್ಥಿರವಾದ ಆಯುಷ್ಯವುಳ್ಳವನೆಂದು ಹೆಸರು

ಬಿದ್ದಿತು. ಆದರೆ ಇದರಿಂದ ಆ ಪರ್ವತಾಯುವು ದೊಡ್ಡವನಾದ ಬಳಿಕ ಮತ್ತನಾಗಿ ಲೋಕಕಂಟಕನಾದ. ಋಷಿ ಮುನಿಗಳಿಗೆ ಇವನ ಉನ್ಮತ್ತ ಚೇಷ್ಟೆಗಳಿಂದ ಬಹಳ ಉಪದ್ರವವಾಗತೊಡಗಿತು.

ಒಮ್ಮೆ ಪರ್ವತಾಯುವು ಧನುಷಾಕ್ಷ ಎಂಬ ಋಷಿಯ ಆಶ್ರಮಕ್ಕೆ ಹೋಗಿ ಅವರಿಗೆ ಅವಮಾನ ಮಾಡಿದ. ಅದರಿಂದ ಕ್ರುದ್ಧರಾದ ಆ ಮಹರ್ಷಿಗಳು ಸತ್ತು ಹೋಗು ಎಂದು ಅವನಿಗೆ ಶಾಪವಿತ್ತರು.

ಆದರೆ ದೇವತೆಗಳ ವರವಿದ್ದುದರಿಂದ ಋಷಿಗಳ ಶಾಪದಿಂದ ಅವನಿಗೇನೂ ಆಗಲಿಲ್ಲ. ಆಗ ವಾಕ್ ಸಿದ್ಧಿ ಹೊಂದಿದ ಧನುಷಾಕ್ಷರಿಗೆ ಆಶ್ಚರ್ಯವಾಯಿತು. ಮತ್ತು ತಮ್ಮ ತಪಃಶಕ್ತಿಯು ಒಮ್ಮೆಲೇ ಇಷ್ಟು ಕ್ಷೀಣವಾದದ್ದಕ್ಕಾಗಿ ವಿಷಾದವೂ ಆಯಿತು.

ಆಗ ಅವರು ತಮ್ಮ ದಿವ್ಯದೃಷ್ಟಿಯಿಂದ ವಿಚಾರಿಸಿ ನೋಡಿದಾಗ ಅವರಿಗೆ ದೇವತಾವರದ ಸಮಾಚಾರವು ತಿಳಿದು ಬಂದಿತು.

ಕೂಡಲೇ ಮಹರ್ಷಿಗಳು ತಮ್ಮ ತಪೋಬಲದಿಂದ ಯಮನ ವಾಹನದಂಥ ಒಂದು ದೊಡ್ಡ ಕೋಣವನ್ನು ನಿರ್ಮಿಸಿದರು. ಅವರ ಆದೇಶದಂತೆ ಆ ಮಹಿಷ ಎದುರಿಗಿನ ಬೆಟ್ಟವನ್ನು ತನ್ನ ಭೀಕರವಾದ ಜೋಡಿ ಕೋಡುಗಳಿಂದ ಗುದ್ದಿ ಹೊಡೆದು ಒಡೆದು ಪುಡಿಪುಡಿ ಮಾಡಿ ಒಗೆಯಿತು. ಬೆಟ್ಟವೆಲ್ಲ ನಷ್ಟವಾದ ಕೂಡಲೇ ಇತ್ತ ಆ ಪರ್ವತಾಯುವೂ ಮರಣ ಹೊಂದಿ ನೆಲಕ್ಕೆ ಬಿದ್ದ.

★ ★ ★ ★

## ಪ್ರಭಾಕರ

ಬ್ರಹ್ಮರ್ಷಿ ಅತ್ರಿಮುನಿಗಳ ವಂಶದಲ್ಲಿ ಪ್ರಭಾಕರ ಮಹರ್ಷಿಯು ಒಳ್ಳೇ ವಾಕ್ ಶುದ್ಧಿಯುಳ್ಳ ತಪೋನಿಧಿಯೆಂದು ಸುಪ್ರಥಿತನಾಗಿದ್ದನು. ಮಹಾ ಮೇಧಾವಿಯಾದ ಈ ತರುಣ ತಪಸ್ವಿಯ ಅಭೂತ ಪೂರ್ವವಾದ ಶಾಪಾನುಗ್ರಹ ಸಾಮರ್ಥ್ಯವನ್ನು ಕಂಡು ಆ ದೇಶದ ದೊರೆ ಭದ್ರಾಶ್ವನು ತುಂಬ ಪ್ರಭಾವಿತನಾಗಿದ್ದ. ಅವನಿಗೆ ರುದ್ರಾ, ಭದ್ರಾ, ಶೂದ್ರಾ, ಮಲದಾ, ಮಹಾ, ಖಲದಾ, ನಲದಾ, ಸುರಸಾ, ಗೋಚಪಲಾ,

ಸ್ತ್ರೀರತ್ನ ಕೂಟಾ ಎಂಬ ಹತ್ತು ಜನ ಹೆಣ್ಣು ಮಕ್ಕಳಿದ್ದರು. ಪ್ರಭಾಕರಮುನಿಯ ಪ್ರಭಾವಕ್ಕೆ ಒಳಗಾದ ಭದ್ರಾಶ್ವ ಮಹಾರಾಜನು ತನ್ನ ಹತ್ತೂ ಕನ್ಯೆಯರನ್ನು ಕೈ ಹಿಡಿದು ತಮ್ಮ ಕುಲವನ್ನೇ ಉದ್ಧರಿಸಬೇಕೆಂದು ಆ ಋಷಿಯನ್ನು ವಿಜ್ಞಾಪಿಸಿದನು. ತಪೋಲುಬ್ಧನಾದ ಅವನಿಗೆ ವಿಷಯ ಸುಖದ ಬಗೆಗೆ ಆಸ್ಥೆ ಇಲ್ಲದಿದ್ದರೂ ಮಹಾರಾಜನ ಆಗ್ರಹಕ್ಕೆ ಮಣಿದು ಅವನು ಆ ಹತ್ತೂ ರಾಜಕುಮಾರಿಯರನ್ನು ಮದುವೆಯಾಗಿ ಗೃಹಸ್ಥ ಜೀವನವನ್ನು ನಡೆಯಿಸಿದನು. ಸಂಸಾರದಲ್ಲಿದ್ದರೂ ಅವನ ಧ್ಯಾನ ಅನುಷ್ಠಾನ ಹಾಗೂ ತಪೋನುಷ್ಠಾನಗಳಿಗೆ ಚ್ಯುತಿ ಬರಲಿಲ್ಲ.

ಒಂದು ದಿನ ಸೂರ್ಯಮಂಡಲಕ್ಕೆ ರಾಹುವಿನ ಮೇಧ ಹತ್ತಿ ಸ್ವಲ್ಪೇ ಸಮಯದಲ್ಲಿ ಗ್ರಹಣ ಹಿಡಿದು ಕತ್ತಲೆ ಕವಿಯಿತು. ಆಗ ಪ್ರಭಾಕರ ಮುನಿಯು ಕೈ ಎತ್ತಿ ಸೂರ್ಯಾಯ ಸ್ವಸ್ತಿ ಎಂದು ನುಡಿದನು. ಸವಿತೃದೇವನಿಗೆ ಅವನು ಮಾಡಿದ ಈ ಸ್ವಸ್ತಿ ವಾಚನದಿಂದ ತತ್‌ಕ್ಷಣದಲ್ಲಿಯೇ ಗ್ರಹಣಬಿಟ್ಟು ರವಿಯು ಮತ್ತೆ ಮೊದಲಿನಂತೆ ಬೆಳಕಿನ ಬೆಟ್ಟವಾಗಿ ಬೆಳಗಹತ್ತಿದನು. ಅವನ ಈ ವಿಲಕ್ಷಣವಾದ ಶಕ್ತಿಯನ್ನು ಕಂಡು ದೇವಮುನಿಗಳೆಲ್ಲರೂ ಅವನನ್ನು ಪ್ರಭಾಕರ ಮುನಿ ಎಂದು ಕರೆದರು. ಈ ಪ್ರಭಾಕರ ಋಷಿಯಿಂದ ಅತ್ರಿವಂಶವು ಬಹಳ ಪ್ರಸಿದ್ಧಿಯನ್ನು ಪಡೆಯಿತು.

★ ★ ★ ★

## ಪೃಷದಶ್ವ

ವಿರೂಪ ಮಹಾರಾಜನ ಮಗನಾದ ಪೃಷದಶ್ವನಿಗೆ ಬಾಲ್ಯದಿಂದಲೇ ಬ್ರಹ್ಮವರ್ಚಸ್ಸನ್ನು ಸಂಪಾದಿಸಬೇಕೆಂಬ ಬಲವಾದ ಬಯಕೆಯಿದ್ದಿತು. ಆದುದರಿಂದ ಅವನು ತನ್ನ ತಂದೆಯಿಂದ ಪ್ರಾಪ್ತವಾದ ರಾಜ್ಯಾಧಿಕಾರವನ್ನು ತ್ಯಾಗ ಮಾಡಿ ಮಹರ್ಷಿ ಅಂಗಿರಸರ ಬಳಿಗೆ ಬಂದು ಅವರಿಂದ ವೇದವೇದಾಂತ ಶಾಸ್ತ್ರಗಳನ್ನೆಲ್ಲ ಅಧ್ಯಯನ ಮಾಡಿದನು. ಮತ್ತು ಅವರಿಂದ ಮಂತ್ರೋಪದೇಶವನ್ನು ಪಡೆದು ಬಹುಕಾಲ ಪರ್ಯಂತರ ಅತ್ಯುಗ್ರವಾದ ತಪಸ್ಸನ್ನು ಅನುಷ್ಠಾನ ಮಾಡಿದನು.

ಈ ನಿರಂತರ ತಪಸ್ಸು ಹಾಗೂ ಬ್ರಹ್ಮರ್ಷಿಗಳ ಸೇವಾಶುಶ್ರೂಷೆಗಳಿಂದ ಕೊನೆಗೆ ಅವನು ಬ್ರಾಹ್ಮಣನಾದನು. ಆದರೂ ಅವನು ತನ್ನ ತಪಸ್ಸನ್ನು ಬಿಡದೇ ಯಾವಜ್ಜನ್ಮ ತಪಶ್ಚರ್ಯೆಯನ್ನು ಮಾಡುತ್ತಲೇ ಇದ್ದುದರಿಂದ ಕಟ್ಟ ಕಡೆಗೆ ಅವನಿಗೆ ಅನೇಕ ಮಂತ್ರಗಳು ಸ್ವಯಂ ಪ್ರತಿಭಾತವಾದವು. ಅಂದಿನಿಂದ ಪೃಷದಶ್ವನೂ ಅಂಗಿರಸಗೋತ್ರದ ಒಬ್ಬ ಸೂಕ್ತದ್ರಷ್ಟಾರನಾದ ಮಂತ್ರದರ್ಶಿ ಮಹರ್ಷಿಯೆಂದು ಪ್ರಖ್ಯಾತನಾದನು. ಇವನ ಮಗನೇ ಉಪನಿಷತ್ತುಗಳಲ್ಲಿ ಉಲ್ಲಿಖಿತನಾದ ರಾಥೀತರ.

★ ★ ★ ★

## ಬಟು

ಸತ್ಕರ್ಮಾನುಷ್ಠಾನದಲ್ಲಿ ಪಟುವಾದ ಬಟು ಎಂಬ ಬ್ರಾಹ್ಮಣನು ಪ್ರತಿದಿನವೂ ಸಂಪೂರ್ಣ ಭಗವದ್ಗೀತೆಯನ್ನು ಅರ್ಥಾನುಸಂಧಾನ ಪೂರ್ವಕವಾಗಿ ಪಾರಾಯಣ ಮಾಡುತ್ತಿದ್ದ. ಅವಸರವಾದಾಗ ಊಟ ಬಿಡುತ್ತಿದ್ದ. ಪ್ರಸಂಗ ಬಂದಾಗ ನಿದ್ದೆ ತೊರೆಯುತ್ತಲಿದ್ದ. ಆದರೆ ಗೀತಾಪಾರಾಯಣವನ್ನು ಮಾತ್ರ ಅವನು ಎಂದೂ ಯಾವ ಕಾಲದಲ್ಲಿಯೂ ಬಿಡುತ್ತಿದ್ದಿಲ್ಲ.

ಹೀಗೆ ಯಾವಜ್ಜನ್ಮ ಗೀತಾಪಾರಾಯಣದಲ್ಲಿಯೇ ಮುಪ್ಪಾದ ಆ ಬಟು ಬ್ರಾಹ್ಮಣ ಕೊನೇ ಗಳಿಗೆಯಲ್ಲಿ ಹದಿನೆಂಟು ಅಧ್ಯಾಯ ಭಗವದ್ಗೀತೆಯನ್ನು ಪಾರಾಯಣ ಮಾಡಿ ಕೊನೆಗೆ ''ಯತ್ರ ಯೋಗೇಶ್ವರಃ ಕೃಷ್ಣಃ..... ಎಂದೆನ್ನುತ್ತಲೇ ಪ್ರಾಣವನ್ನು ಪರಿತ್ಯಾಗ ಮಾಡಿದನು. ಅದರಿಂದವನಿಗೆ ಕೂಡಲೇ ಸದ್ಗತಿಯಾಯಿತು. ಆದರೆ ವೈಕುಂಠ ಲೋಕದಿಂದ ಅವನನ್ನು ಕರೆಯಲಿಕ್ಕೆ ಬಂದ ವಿಷ್ಣುದೂತರು ಅವನ ಅಂತ್ಯಕಾಲದಲ್ಲಿ ನೆರೆದ ಜನರಿಗೆ ಈ ಪುಣ್ಯಾತ್ಮನ ಶರೀರವನ್ನು ಸುಡದೆ ಹಾಗೇ ಬಯಲು ಸ್ಥಳದಲ್ಲಿ ಇರಿಸಲಿಕ್ಕೆ ಹೇಳಿ ಹೋದರು.

ಅದರಂತೆ ಊರ ಜನರೆಲ್ಲರೂ ಆ ಬಟು ಬ್ರಾಹ್ಮಣನ ಶವವನ್ನು ಊರ ಹೊರಗೆ ಒಂದು ಎತ್ತರ ಕಟ್ಟೆಯನ್ನು ಕಟ್ಟಿಸಿ ಅದರ ಮೇಲೆ ಇರಿಸಿದರು. ಅನೇಕ ಹಕ್ಕಿಗಳು ಬಂದು ಆ ದೇಹದಲ್ಲಿಯ ರಕ್ತ ಮಾಂಸವನ್ನೆಲ್ಲ ಹೆಕ್ಕಿ ನೆಕ್ಕಿ ತಿಂದು ಖಾಲಿ ಮಾಡಿಹೋದವು. ಬರೀ ಎಲವಿನ ಗೂಡು ತಲೆಬುರುಡೆ ಮಾತ್ರ ಉಳಿದವು.

ಮುಂದೆ ಮಳೆಗಾಲದಲ್ಲಿ ಮಳೆಯಾಗಿ ಅವನ ತಲೆಬುರುಡೆಯಲ್ಲಿ ನೀರುನಿಂತಿತು. ಒಂದುದಿನ ಒಬ್ಬ ಮಹಾಪಾತಕಿಯಾದ ನೀಚ ಮನುಷ್ಯನು ರಾತ್ರಿ ಅಲ್ಲಿಗೆ ಬಂದು ನೀರಡಿಸಿ ಆ ತಲೆಬುರುಡೆಯಲ್ಲಿಯ ನೀರನ್ನು ಕುಡಿದನು. ಆದರಿಂದ ತಕ್ಷಣ ಅವನ ಪಾಪವೆಲ್ಲ ಪರಿಹಾರವಾಗಿ ಅವನ ಉದ್ಧಾರವಾಗಿ ಹೋಯಿತು. ಇದನ್ನು ತಿಳಿದು ಊರ ಜನರು ಆ ಕಟ್ಟೆಯ ಸುತ್ತಲೂ ಕಾವಲು ಇರಿಸಿ ಬಂದ ಪಾಪಿಗಳಿಗೆಲ್ಲ ಈ ಬ್ರಹ್ಮಕಪಾಲದಲ್ಲಿಯ ಮೂರು ಸವಟು ನೀರು ಹಾಕುತ್ತಿದ್ದರು. ಹೀಗೆ ಗೀತಾ ಪಾರಾಯಣದ ಪುಣ್ಯದಿಂದ ಆ ಬಟು ಬ್ರಾಹ್ಮಣನು ಸತ್ತ ಬಳಿಕ ಅವನ ಶವದ ಮೇಲ್ಭಾಗವು ಕಪಾಲ ತೀರ್ಥವೆಂದು ಹೆಸರಾಗಿ ಅನೇಕ ಜನ ಪಾಪಿಗಳನ್ನೂ ನೀಚರನ್ನೂ ಪಾವನಗೊಳಿಸಿ ಉದ್ಧಾರಮಾಡಿತು.

★ ★ ★ ★

## ದಾಶೂರ

ಮಗಧದೇಶದ ಒಂದು ಬೆಟ್ಟದಲ್ಲಿ ಶರಲೋಮ ಎಂಬ ಮುನಿಯು ದಾಶೂರ ಎಂಬ ತನ್ನ ಮಗನೊಂದಿಗೆ ತಪಸ್ಸನ್ನು ಆಚರಿಸುತ್ತಲಿದ್ದನು. ದಾಶೂರನಾದರೂ ತಂದೆಯಂತೆ ಯೋಗಯಾಗ ವಿದ್ಯೆಗಳಲ್ಲಿ ನಿಷ್ಣಾತನಿದ್ದು ಮಹಾತಪಸ್ವಿಯೂ ಆಗಿದ್ದನು. ಆದರೆ ಅವನಿಗೆ ತನ್ನ ತಂದೆಯ ಬಗೆಗೆ ವಿಲಕ್ಷಣವಾದ ವ್ಯಾಮೋಹವಿದ್ದು ಅವನನ್ನು ಬಿಟ್ಟು ಎಂದೂ ಅಗಲಿರುತಿದ್ದಿಲ್ಲ. ಕೊನೆಗೊಂದು ದಿನ ತಂದೆ ಶರಲೋಮ ಮುನಿಯು ಕೈಲಾಸವಾಸಿಯಾದನು.

ಆಗ ದಾಶೂರನಿಗೆ ಆ ದುಃಖವನ್ನು ಸಹಿಸಲಿಕ್ಕಾಗದೇ ಅವನು ಆಶ್ರಮದಲ್ಲಿ ದುಃಖಿಸಿ ಬಿಕ್ಕಿಸಿ ಅಳುತ್ತ ಕುಳಿತುಬಿಟ್ಟ. ಆಗ ಅಹಿತಾಗ್ನಿಯಾದ ಶರಲೋಮನ ಹೋಮಕುಂಡದಲ್ಲಿಯ ಅಗ್ನಿಯು ಅವನೆದುರು ಪ್ರಕಟನಾಗಿ ಅವನಿಗೆ ಸಮಾಧಾನ ಹೇಳಿ ಶೋಕಮಾಡಬೇಡ ಎಂದು ತಿಳಿಹೇಳಿದನು. ಮತ್ತು ನಿರಂತರ ಭಗವಂತನ ಧ್ಯಾನಮಾಡುತ್ತ ಕುಳಿತರೆ ತಂದೆಯ ಮರಣ ದುಃಖವು ಮರೆತು ಹೋಗುವದೆಂದು ಸೂಚಿಸಿದನು.

ಆದಕ್ಕೆ ದಾಶೂರನು ದುಃಖ ದಗ್ಧನಾದ ತನಗೀಗ ಒಂದೆಡೆ ಕುಳಿತು ಧ್ಯಾನ ಮಾಡಲಿಕ್ಕೇ ಆಗುವುದಿಲ್ಲ ಎಂದು ಹೇಳಲಾಗಿ ಅಗ್ನಿಯು ಅವನಿಗೆ ಒಂದು ವರವಿತ್ತನು. ಆ ವರದ ಬಲದಿಂದ ಅವನಿಗೆ ಒಂದು ಕದಂಬ ಗಿಡದ ಮೇಲೆ ಯೋಗಾಸನವನ್ನು ಹಾಕಿಕೊಂಡು ಸ್ಥಿರಚಿತ್ತದಿಂದ ಧ್ಯಾನ ಮಾಡಲಿಕ್ಕೆ ಸಾಧ್ಯವಾಯಿತು. ಹೀಗೆ ಅವನು ಕದಂಬ ವೃಕ್ಷಾಗ್ರದಲ್ಲಿ ಧ್ಯಾನಾರೂಢವಾಗಿ ಕುಳಿತುಕೊಂಡಾಗ ಕೆಳಗೆ ಅನೇಕ ಅಪ್ಸರೆಯರು ಅವನಿಗೆ ಕಾಣಿಸಿದರು. ಆದರೆ ಆತ್ಮ ಸಮಾಧಿಯನ್ನು ಹೊಂದಬಯಸಿದ ಅವನು ತನ್ನನ್ನು ಕಾಮಿಸಿ ಬಂದು ತನ್ನೆಡೆಗೆ ಕುಡಿನೋಟ ಬೀರುವ ಕಪಟ ಕಾಮಿನಿಯರ ಕುಶಲಾಟಕ್ಕೆ ಮನಸೋಲದೇ ಅದೆಲ್ಲವೂ ಮಾಯಿಕ ಮಿಥ್ಯೆಯೆಂದು ಬಗೆದು ತನ್ನ ಧ್ಯಾನವನ್ನು ಮುಂದುವರಿಸಿದ. ಅದರಿಂದ ಅವನಿಗೆ ಆತ್ಮಬೋಧವಾಗಿ ಅವನು ಕದಂಬ ದಾಶೂರ ಎಂಬ ಹೆಸರಾದ. ಇವನಿಗೆ ವನದೇವತೆಯಿಂದ ಒಬ್ಬ ಮಗ ಜನಿಸಿದ. ಅವನಿಗೆ ದಾಶೂರನು ಆತ್ಮಜ್ಞಾನವನ್ನು ಉಪದೇಶಿಸಿದನು.

★ ★ ★ ★

## ತ್ರಿತ

ಮಹರ್ಷಿ ಗೌತಮರಿಗೆ ಸೂರ್ಯಸಮಾನತೇಜಸ್ವಿಗಳಾದ, ಬ್ರಹ್ಮವಾದಿಗಳಾದ, ಬ್ರಹ್ಮಸಾಕ್ಷಾತ್ಕಾರವನ್ನು ಮಾಡಿಕೊಂಡ ಮೂವರು ಪುತ್ರರಿದ್ದರು. ಏಕತ, ದ್ವಿತ, ತ್ರಿತ ಎಂಬುದಾಗಿ ಅವರ ಹೆಸರು. ಸದಾಕಾಲ ಧರ್ಮನಿರತನಾಗಿದ್ದ ಮಹರ್ಷಿ ಗೌತಮರು ತಮ್ಮ ಮಕ್ಕಳ ನಿಯಮ, ದಮ, ಜಿತೇಂದ್ರಿಯತೆ ಮತ್ತು ತಪಸ್ಸು ಇತ್ಯಾದಿಗಳಿಂದ ಬಹುಸಂತುಷ್ಟರಾಗಿದ್ದರು. ಕಾಲಾಂತರದಲ್ಲಿ ಪೂಜನೀಯರಾದ ಮಹರ್ಷಿ ಗೌತಮರು ಇಹವನ್ನು ತ್ಯಜಿಸಲು, ಅವರ ಪೌರೋಹಿತ್ಯದಲ್ಲಿ ಯಜ್ಞಗಳನ್ನು ಮಾಡುತ್ತಿದ್ದ ರಾಜರು ಗೌತಮರ ಮಕ್ಕಳನ್ನೇ ಆದರಿಸಿ ಸತ್ಕರಿಸತೊಡಗಿದರು. ಆ ಮೂವರು ಋಷಿಗಳಲ್ಲಿಯೂ ತ್ರಿತನು ಕರ್ಮಾನುಷ್ಠಾನಗಳಿಂದಲೂ, ಮತ್ತು ಅಧ್ಯಯನದಿಂದಲೂ ಶ್ರೇಷ್ಠನೆನಿಸಿಕೊಂಡನು. ಗೌತಮರು ಸರ್ವರಿಗೂ ಮಾನ್ಯರಾಗಿದ್ದಂತೆ ತ್ರಿತನೂ

ಸರ್ವರಿಗೂ ಮಾನ್ಯನಾಗಿದ್ದನು. ಒಂದು ಬಾರಿ ಮೂವರು ಸಹೋದರರೂ ಜೊತೆಯಾಗಿ ಯಜ್ಞವೊಂದನ್ನು ಮಾಡಿಸಲು ಹೋದರು. ಯಜಮಾನನಿಂದ ವಿಧಿವತ್ತಾಗಿ ಯಜ್ಞವನ್ನು ಮಾಡಿಸಿ, ಆ ಯಜ್ಞಕರ್ಮದ ಮೂಲಕವಾಗಿ ಅವರು ಅನೇಕ ಗೋವುಗಳನ್ನು ಪಡೆದುಕೊಂಡರು. ಬಳಿಕ ಮೂವರೂ ಪೂರ್ವಾಭಿಮುಖವಾಗಿ ಹೊರಟರು. ಅವರಲ್ಲಿ ಮಹರ್ಷಿ ತ್ರಿತನು ಮುಂದುಗಡೆ ಇದ್ದನು. ಹೀಗೆಯೇ ಪ್ರಯಾಣ ಮಾಡುತ್ತಿದ್ದಾಗ ಹಿಂದಿದ್ದ ಏಕತ ಮತ್ತು ದ್ವಿತರು ತಾವು ಸಂಪಾದಿಸಿದ ಗೋವುಗಳಲ್ಲಿ ತ್ರಿತನಿಗೆ ಪಾಲನ್ನು ನೀಡದೇ ಎಲ್ಲವನ್ನೂ ತಾವೇ ಹೊಡೆದುಕೊಂಡು ಹೋಗಬೇಕೆಂದು ಪರಸ್ಪರ ಮಾತನಾಡಿಕೊಂಡರು.

ರಾತ್ರಿಯ ಸಮಯ ಅವರು ಹೋಗುತ್ತಿದ್ದ ಮಾರ್ಗದಲ್ಲಿಯೇ ಒಂದು ತೋಳವಿದ್ದಿತು. ಅಲ್ಲಿಗೆ ಸ್ವಲ್ಪ ದೂರದಲ್ಲಿಯೇ ಸರಸ್ವತೀ ನದಿಯ ತೀರದಲ್ಲಿ ಒಂದು ದೊಡ್ಡ ಬಾವಿಯೂ ಇತ್ತು. ಮುಂದೆ ಹೋಗುತ್ತಿದ್ದ ತ್ರಿತನು ತನಗೆದುರಾಗಿ ನಿಂತಿರುವ ತೋಳವನ್ನು ನೋಡಿ ಭಯಪಟ್ಟುಕೊಂಡು ಓಡತೊಡಗಿದನು. ಹಾಗೆಯೇ ಓಡಿಹೋಗುತ್ತಿದ್ದಾಗ ಆ ಮಹಾಕೂಪದಲ್ಲಿ ಬಿದ್ದುಬಿಟ್ಟನು. ಬಾವಿಯಲ್ಲಿ ಬಿದ್ದ ಮುನಿಶ್ರೇಷ್ಠನಾದ ತ್ರಿತನು ಆರ್ತನಾದ ಮಾಡಿದನು. ಆತನ ಆರ್ತನಾದವನ್ನು ಕೇಳಿ, ತ್ರಿತನು ಬಾವಿಯಲ್ಲಿ ಬಿದ್ದಿರುವನೆಂಬುದನ್ನು ತಿಳಿದೂ ಸಹ ಸಹೋದರರಾದ ಏಕತ ದ್ವಿತರು, ತೋಳವು ತಮ್ಮನ್ನೂ ಬೆನ್ನಟ್ಟಿಕೊಂಡು ಬರಬಹುದೆಂಬ ಭಯದಿಂದಲೂ, ಅವನೇನಾದರೂ ತಮ್ಮ ಸಹಾಯದಿಂದ ಮೇಲೆದ್ದು ಬಂದರೆ ತಾವು ಹೊಡೆದುಕೊಂಡು ಬರುತ್ತಿರುವ ಗೋಸಮೂಹದಲ್ಲಿ ಅವನಿಗೂ ಪಾಲುಕೊಡಬೇಕಾಗುತ್ತದೆಂಬ ಲೋಭದಿಂದಲೂ ತ್ರಿತನನ್ನು ಮಾತನಾಡಿಸಲೂ ಹೋಗದೇ ಗೋವುಗಳನ್ನು ಹೊಡೆದುಕೊಂಡು ಮುನ್ನಡೆದರು. ಪಶುಲುಬ್ಧರಾದ ಅಣ್ಣಂದಿರಿಂದ ಪರಿತ್ಯಕ್ತನಾದ ಮಹಾತಪಸ್ವಿಯಾದ ತ್ರಿತನು ನೀರಿನಿಂದ ರಹಿತವಾಗಿದ್ದ, ಧೂಳಿನಿಂದ ಮುಚ್ಚಿಹೋಗಿದ್ದ ಆ ಕೂಪದಲ್ಲಿಯೇ ಒದ್ದಾಡುತ್ತಿದ್ದನು. ಆ ಸಮಯದಲ್ಲಿ ತ್ರಿತನು ದೈವಯೋಗದಿಂದ ಜೋತು ಬಿದ್ದಿದ್ದ ಬಳ್ಳಿಯೊಂದನ್ನು ನೋಡಿದನು. ಒಡನೆಯೇ ಆತನು ಧೂಳಿನಿಂದ ಆವೃತವಾಗಿದ್ದ

ಆ ಕೂಪದಲ್ಲಿಯೇ ಕುಳಿತು ನೀರನ್ನು ಸ್ಮರಿಸಿಕೊಂಡನು. ಅನಂತರ ಅಗ್ನಿತ್ರಯಗಳನ್ನು ಸ್ಮರಿಸಿಕೊಂಡನು. ಜೋಲಾಡುತ್ತಿದ್ದ ಆ ಬಳ್ಳಿಯನ್ನೇ ಸೋಮಲತೆಯನ್ನಾಗಿ ಕಲ್ಪಿಸಿಕೊಂಡನು. ತ್ರಿತಮುನಿಯು ಋಗ್ಯಜುಸ್ಸಾಮ ಮಂತ್ರಗಳನ್ನು ಮನಸ್ಸಿನಲ್ಲಿಯೇ ಜಪಿಸಿದನು. ಕೂಪದಲ್ಲಿದ್ದ ಕಲ್ಲುಗಳನ್ನೇ ಅಭಿಷವಕ್ಕೆ ಉಪಯೋಗಿಸುವ ಗ್ರಾವಾಣಗಳನ್ನಾಗಿ ಮಾಡಿಕೊಂಡು ಸೋಮರಸವನ್ನು ಸಿದ್ಧಪಡಿಸಿದನು. ನೀರನ್ನೇ ಆಜ್ಯವನ್ನಾಗಿ ಕಲ್ಪಿಸಿಕೊಂಡು, ದೇವತೆಗಳಿಗೆ ಸೋಮಭಾಗಗಳನ್ನು ಕಲ್ಪಿಸಿದನು. ಅನಂತರ ದೇವತೆಗಳನ್ನು ಆಹ್ವಾನಿಸಿ, ಅವರನ್ನು ಉದ್ದೇಶಿಸಿ ಮನಸ್ಸಂಕಲ್ಪಿತವಾಗಿದ್ದ ಅಗ್ನಿಯಲ್ಲಿ ಹೋಮಮಾಡಿದನು. ವೇದಮಂತ್ರಗಳನ್ನು ಗಟ್ಟಿಯಾಗಿ ಉಚ್ಚರಿಸಿದನು. ಬ್ರಹ್ಮವಾದಿಗಳು ಹೇಳುತ್ತಿದ್ದಂತೆ ವೇದಮಂತ್ರಗಳನ್ನು ಹೇಳಿ ಯಜ್ಞವನ್ನು ವಿಧಿ ವಿಹಿತವಾದ ರೀತಿಯಲ್ಲಿ ಮಾಡಿ, ಸೋಮರಸವನ್ನು ಸಿದ್ಧಗೊಳಿಸಿದನು. ತ್ರಿತನು ಮಾಡಿದ ವೇದಘೋಷವು ಸ್ವರ್ಗವನ್ನೂ ಆವರಿಸಿತು.

ಸುಪ್ರೀತರಾದ ದೇವತೆಗಳು ತ್ರಿತನ ಯಜ್ಞವು ನಡೆಯುತ್ತಿದ್ದ ಸ್ಥಳಕ್ಕೆ ಧಾವಿಸಿದರು. ಜಾಜ್ವಲ್ಯಮಾನವಾದ ಕಾಂತಿಯಿಂದ ಕೂಡಿದ್ದ ಮಹಾತ್ಮನಾದ ತ್ರಿತನನ್ನು ಕಂಡು 'ಯಜ್ಞದ ಹವಿರ್ಭಾಗವನ್ನು ಪಡೆದುಕೊಳ್ಳಲು ಬಂದಿದ್ದೇವೆ' ಎಂದು ಹೇಳಿದರು. ತ್ರಿತನು ತನ್ನ ದುರವಸ್ಥೆಯನ್ನು ಹೇಳಿ, ದೇವತೆಗಳಿಗೆ ಯಥಾವಿಧಿಯಾಗಿ ಮಂತ್ರಯುಕ್ತವಾದ ಭಾಗಗಳನ್ನು ಸಮರ್ಪಿಸಿದನು. ದೇವತೆಗಳೂ ಪರಮಪ್ರಿಯರಾಗಿ, ತ್ರಿತನ ಮನೋವಾಂಛಿತವಾದ ಎಲ್ಲ ವರಗಳನ್ನೂ ದಯಪಾಲಿಸಿದರು. ದೇವತೆಗಳನ್ನು ಕುರಿತು ಈ ವರಗಳನ್ನು ಕೇಳಿಕೊಂಡನು - ''ದೇವತೆಗಳೇ, ನನ್ನನ್ನು ಈ ಕೂಪದಿಂದ ಉದ್ಧರಿಸಿರಿ. ಈ ಕೂಪದಲ್ಲಿ ಯಾರು ಆಚಮನ ಮಾಡುವರೋ! ಅವರಿಗೆ ಮಹಾಯಜ್ಞದಲ್ಲಿ ಸೋಮಪಾನವನ್ನು ಮಾಡಿದವರಿಗೆ ಪ್ರಾಪ್ತವಾಗುವ ಸದ್ಗತಿಯು ಲಭಿಸಲಿ''.

ತ್ರಿತಮುನಿಯು ಹೀಗೆಂದು ಹೇಳುತ್ತಿದ್ದಂತೆಯೇ ಅಲೆಗಳಿಂದ ಕೂಡಿದ ಸರಸ್ವತೀ ನದಿಯು ಆ ಕೂಪದಲ್ಲಿ ಆವಿರ್ಭವಿಸಿ ಮೇಲಕ್ಕೆ ಉಕ್ಕಿತು. ಸರಸ್ವತೀ ನದಿಯ ಪ್ರವಾಹದಿಂದ ಮೇಲಕ್ಕೆತ್ತಲ್ಪಟ್ಟ ತ್ರಿತಮಹರ್ಷಿಯು ದೇವತೆಗಳಿಗೆ ಅಭಿಮುಖವಾಗಿ

ನಿಂತು ಅವರನ್ನು ಯಥೋಚಿತವಾದ ಪೂಜೆಗಳಿಂದ ಸತ್ಕರಿಸಿದನು. ಸುಪ್ರೀತರಾದ ದೇವತೆಗಳು ಹಾಗೂ ತ್ರಿತನು ತಮ್ಮ ತಮ್ಮ ಸ್ಥಾನಗಳನ್ನು ಸೇರಿಕೊಂಡರು.

ಆದರೆ ತನ್ನ ಅಣ್ಣಂದಿರು ಮಾಡಿದ್ದ ದ್ರೋಹವನ್ನು ತ್ರಿತನು ಮರೆತಿರಲಿಲ್ಲ. ಪರಮಕ್ರುದ್ಧನಾಗಿದ್ದ ತ್ರಿತಮಹರ್ಷಿಯು ಏಕತ-ದ್ವಿತರಿದ್ದಲ್ಲಿಗೆ ಹೋಗಿ ಅವರಿಗೆ ಶಾಪವನ್ನು ಕೊಟ್ಟನು. ''ಮೂರು ಜನರೂ ಸಂಪಾದಿಸಿದ ಪಶುಗಳನ್ನು ನೀವಿಬ್ಬರೇ ಹಂಚಿಕೊಳ್ಳಬೇಕೆಂಬ ದುರಾಸೆಯಿಂದ ನನ್ನನ್ನು ಕೂಪದಲ್ಲಿಯೇ ಬಿಟ್ಟು ಪಶುಗಳೊಡನೆ ಪಲಾಯನ ಮಾಡಿರುವಿರಿ. ಈ ಪಾಪಕರ್ಮಕ್ಕಾಗಿ ನೀವು ಕೊರೆದಾಡೆಗಳನ್ನು ಹೊಂದಿರುವ ಭಯಂಕರವಾದ ತೋಳಗಳಾಗಿ ಎಲ್ಲೆಡೆಯೂ ಸಂಚರಿಸುತ್ತಿರಿ. ನಿಮ್ಮ ಸಂತತಿಯಲ್ಲಿ ಗೋಲಾಂಗೂಲಗಳು, ಕರಡಿಗಳೂ, ಮತ್ತು ಕಪಿಗಳು ಹುಟ್ಟುತ್ತವೆ''. ತ್ರಿತಮಹರ್ಷಿಯು ಈ ರೀತಿ ಶಪಿಸುತ್ತಿದ್ದಂತೆಯೇ ಏಕತ ಮತ್ತು ದ್ವಿತರು ತೋಳಗಳಾಗಿ ಪರಿವರ್ತನೆ ಹೊಂದಿದರು.

ತ್ರಿತನು ಬಿದ್ದಿದ್ದ ಆ ಕೂಪವು ಮುಂದೆ ತ್ರಿತಕೂಪವೆಂದೇ ಪ್ರಸಿದ್ಧವಾಯಿತು. ಆ ಸ್ಥಳವು ಉದಪಾನತೀರ್ಥವೆಂದೂ, ಆದಿತೀರ್ಥವೆಂದೂ ಹೆಸರನ್ನು ಪಡೆದುಕೊಂಡು ಮಂಗಳಕರವಾದ ತೀರ್ಥಕ್ಷೇತ್ರವಾಯಿತು.

★ ★ ★ ★

## ನವಗ್ರಹಗಳ ಉತ್ಪತ್ತಿ

ತಮೋಮಂಡಲ (ಕತ್ತಲೆರಾಶಿ) ದಿಂದ ರಾಹುವು ನಿರ್ಮಾಣ ಮಾಡಲ್ಪಟ್ಟನು. ಅದಕ್ಕಾಗಿ ಈಗಲೂ ರಾಹುವಿಗೆ ತಮನೆಂಬ ಹೆಸರು ರೂಢಿಯಾಗಿ ಇದ್ದೇ ಇದೆ, ತಮಸ್ತು ರಾಹುಃ-ಸ್ವರ್ಭಾನು-ಸ್ಸೈಂಹಿಕೆಯೋ ಎಂದು ಅಮರದಲ್ಲಿ ಹೇಳಿದೆ. ಈ ತಮ ನಿರ್ಮಾಣಾನಂತರ ಇನ್ನು ಕೆಲವು ನೀರಿನ ಉಂಡೆ (ಅಮ್ಮಯಗೋಳಕ) ಗಳು ಬೇರೆ ಬೇರೆಯಾಗಿ ನಿರ್ಮಿತವಾದುವು. ಇವೇ ಗ್ರಹನಕ್ಷತ್ರ ಮಂಡಲಗಳು. ಈ ರೀತಿ ನಿರ್ಮಿತವಾದ ಸಕಲ ಗ್ರಹತಾರಕಗೋಳಕಗಳೂ ಸಹ ಧ್ರುವಮಂಡಲದ ಜತೆಗೆ ಸೇರಿಸಲ್ಪಟ್ಟವು.

ಈ ಧ್ರುವ ಮಂಡಲಕ್ಕೆ ಉತ್ತಾನಪಾದನನ್ನು ಉತ್ತರಪಕ್ಷ(ಹನು) ವೆಂದೂ (ಕೆನ್ನೆ) ಯಜ್ಞವನ್ನು ಅಧರಪಕ್ಷ (ಬಲಗೆನ್ನೆ) ವೆಂದೂ ಹೇಳುವರು. ಧರ್ಮವು ಶಿರೋಭಾಗದಲ್ಲಿರುವುದು. ಹೃದಯ ಪ್ರದೇಶದಲ್ಲಿ ನಾರಾಯಣನೂ ಪೂರ್ವಪಾದಗಳಲ್ಲಿ ಅಶ್ವಿನೀ ದೇವತೆಗಳೂ, ಪಶ್ಚಿಮಪಾದಗಳಲ್ಲಿ ವರುಣನೂ, ಅರ್ಯಮಾ ದೇವತೆಯೂ ಇರುವರು. ಇವೆರಡೂ ತೊಡೆಯ ಭಾಗಗಳೆಂದು ತಿಳಿಯಬೇಕು. ಸಂವತ್ಸರಕ್ಕೆ ಧ್ರುವ ಮಂಡಲದ ಶಿಶ್ನ (ಜನನೇಂದ್ರಿಯ) ವೆಂದು ಹೇಳುವರು.

ಆ ಧ್ರುವಮಂಡಲದ ಕೆಳಗೆ ಪ್ರತಿದಿನವೂ ಸಪ್ತರ್ಷಿ ಮಂಡಲವು ಕಂಗೊಳಿಸುತ್ತಿರುವುದು. ಮರೀಚಿ-ವಸಿಷ್ಠ-ಆಂಗೀರಸ-ಅತ್ರಿ-ಪುಲಸ್ತ್ಯ-ಪುಲಹ-ಕ್ರತು. ಈ ಏಳು ಋಷಿಗಳ ಗುಂಪಿಗೆ ಸಪ್ತರ್ಷಿ ಮಂಡಲವೆಂದು ಹೆಸರು ಪ್ರಸಿದ್ಧವಾಗಿದೆ. ಇವರಲ್ಲಿ ಎರಡನೆಯವರಾದ ವಸಿಷ್ಠಮಹರ್ಷಿಗಳ ಹೆಂಡತಿ ಪರಮ ಸಾಧ್ವಿಯೆನಿಸಿದ ಅರುಂಧತೀ ದೇವಿಯು. ವಸಿಷ್ಠ ನಕ್ಷತ್ರದ ಹತ್ತಿರವೇ ದೃಶ್ಯಾದೃಶ್ಯವಾಗಿ ಕಾಣುತ್ತಿರುತ್ತಾಳೆ.

ಈ ಅರುಂಧತೀ ನಕ್ಷತ್ರದ ಕೆಳಗಡೆ ನಕ್ಷತ್ರ ಚಕ್ರವು ಕಾಣುತ್ತದೆ. ನಕ್ಷತ್ರ ಚಕ್ರದ ಕೆಳಗೆ ಶನೈಶ್ಚರ ಗ್ರಹವಿದೆ. ಅದರ ಕೆಳಗೆ ಗುರು. ಅದರ ಕೆಳಗೆ ಅಂಗಾರಕ. ಅದರ ಕೆಳಗೆ ಸೂರ್ಯ. ಅದರ ಕೆಳಗೆ ಶುಕ್ರ. ಅದರ ಕೆಳಗಡೆ ಬುಧ. ಅದರ ಕೆಳಗೆ ಚಂದ್ರ. ಈ ಜ್ಯೋತಿಶ್ಚಕ್ರಗಳು ಪೂರ್ವದಿಂದ ದಕ್ಷಿಣದ ಕಡೆಗೆ ಸುತ್ತುತ್ತಿರುತ್ತವೆ. ಸಕಲ ಗ್ರಹಗಳೂ ಪೂರ್ವ ದಿಗ್ಗತ್ತಿಯಾಗಿಯೂ, ಸಮಾನ ವೇಗದಿಂದಲೂ ಸಂಚರಿಸತಕ್ಕ ಶಕ್ತಿಯುಳ್ಳವುಗಳು. ಈ ರೀತಿ ವೇಗವಾಗಿ ಸುತ್ತುವ ಕಾಲದಲ್ಲಿ ಒಂದರ ಸಮೀಪಕ್ಕೆ ಮತ್ತೊಂದು ಬಂದುಬಿಟ್ಟರೆ ಆದಿ ಆ ಆಸನ್ನಗ್ರಹಗಳು ಮಂದಗತಿಯಾಗಿ ಬಿಡುತ್ತವೆ.

## ಚಂದ್ರನ ಉತ್ಪತ್ತಿ

ಮಹಾತ್ಮನಾದ ಅತ್ರಿ ಋಷಿಯಿಂದ ಹತ್ತು ದಿಕ್ಕುಗಳಿಂದಲೂ ಮಹಾವಿಷ್ಣುವು ಜಿಂಕೆಯ ಗುರುತನ್ನು ಧರಿಸಿ ಮಗನಾಗಿ ಹುಟ್ಟಿ ಬಂದುದರಿಂದ ಶಶಾಂಕನೆಂದು ಒಂದು ಹೆಸರಾಯಿತು. ಧರ್ಮನೆಂಬ ಹೆಸರಿನ ಒಬ್ಬ ವಸುವಿನ ಹೆಂಡತಿ

ದಾಕ್ಷಾಯಣಿ ಎಂಬಾಕೆಯು ವಸುಗಳ ಮಧ್ಯದಲ್ಲಿ ಒಬ್ಬ ಧರ್ಮಜ್ಞನಾದ ಮಗನನ್ನು ಜನ್ಮಕ್ಕೆ ತಂದಳು. ಅವನಿಗೆ ನಿಶಾಕರನೆಂದು ಹೆಸರಾಯಿತು. ಅಮೃತಮಥನ ಕಾಲದಲ್ಲಿ ಮಹಾಲಕ್ಷ್ಮೀ ಹುಟ್ಟಿದೊಡನೆ ಸೋಮನೆಂಬ ಮಹಾತ್ಮನು ಹುಟ್ಟಿದನು. ಅಮೃತಾಂಶೂದ್ಭವನಾದ್ದರಿಂದಲೇ ಚಂದ್ರನಿಗೆ ಅಮೃತ ಕಿರಣನೆಂಬ ಹೆಸರೂ ಸಹ ಬಂದಿದೆ. ಈ ರೀತಿ ಚಂದ್ರನ ಜನ್ಮವು ಮೂರು ವಿಧವಾಗಿದೆಯೆಂದು ಹೇಳಿದ್ದಾರೆ.

### ಅಂಗಾರಕ (ಮಂಗಳ-ಕುಜ) ಉತ್ಪತ್ತಿ

ಪೂರ್ವದಲ್ಲಿ ಮಹಾಬಲ ಪರಾಕ್ರಮಶಾಲಿಯಾದ ಹಿರಣ್ಯಾಕ್ಷನೆಂಬ ರಾಕ್ಷಸನಿದ್ದನು. ಆತನಿಗೆ ವಿಕೇಶಿಯೆಂಬ ಮಗಳೊಬ್ಬಳಿದ್ದಳು. ಅವಳು ಮಹಾ ತಪಸ್ಸಿನಿಂದ ದೇವರನ್ನು ಮೆಚ್ಚಿಸಿ ಕೇಶಾನಾಮಕ ಪರಮ ಸುಂದರಿಯನ್ನು ಪಡೆದಳು. ಆ ಚಲುವೆಯ ಚಲುವಿಕೆಗೆ ಪರಮೇಶ್ವರನೇ ಮೋಹಿತನಾಗಿ ಹೋದನು. ಬಳಿಕ ಆ ಸ್ಥಾಣುವು ಅವಳೊಡನೆ ಸಂಭೋಗ ಮಾಡಬೇಕೆಂದು ಪ್ರಯತ್ನ ಮಾಡಿದನು. ಯಜ್ಞೇಶ್ವರನಿಗೆ ಈ ವೃತ್ತಾಂತ ತಿಳಿದು ಇವರಿಬ್ಬರ ಸಂಭೋಗದಿಂದ ಇನ್ನೊಬ್ಬ ಅಗ್ನಿಪುರುಷನು ಉತ್ಪನ್ನನಾದರೆ ತನ್ನ ಪ್ರಾಶಸ್ತ್ಯವು ಕಮ್ಮಿಯಾಗಿ ಹೋಗುವುದೆಂಬ ಸಂದೇಹದಿಂದ ಅವರ ಸಂಭೋಗಕ್ಕೆ ವಿಘ್ನವನ್ನುಂಟುಮಾಡಬೇಕೆಂಬ ಆಲೋಚನೆಯಿಂದ ಕೂಡಿದವನಾಗಿ ಅವರಿಬ್ಬರೂ ಸಂಭೋಗ ಮಾಡುವ ಸ್ಥಳಕ್ಕೆ ಮುಂಚಿತವಾಗಿ ಹೋಗಿ ಅಲ್ಲಿ ಮರೆಯಾಗಿ ಅವಿತು ಕೊಂಡನು. ಬೆಂಕಿಯು ಅವಿತುಕೊಂಡರೆ ಅದರ ಧಗೆ ಗೊತ್ತಾಗುವುದಿಲ್ಲವೇ? ಸಂಭೋಗ ಮಾಡಲಾರಂಭಮಾಡಿದೊಡನೆಯೇ ಈಶ್ವರನ ಕಣ್ಣಿಗೆ ಅಗ್ನಿಯು ಗೋಚರನಾದನು. ಬೆಂಕಿಯನ್ನು ಕಂಡೊಡನೆಯೇ ಈಶ್ವರನಿಗೆ ಮಹಾಕೋಪ ಬಂದಿತು. ಆ ಕೋಪದಿಂದ ವಿಪರೀತ ಆಯಾಸವುಂಟಾಗಿ ಮುಖದಲ್ಲಿ ವಿಪರೀತ ಬೆವರುಂಟಾಯಿತು. ಆ ರೀತಿ ಬೆವರು ಹುಟ್ಟಿ ಕೆಳಕ್ಕೆ ಹರಿಯಲಾರಂಭಿಸಿದಾಗ ಆ ಬೆವರನ್ನು ಅವಳು ನುಂಗಿಬಿಟ್ಟಳು. ಆ ಕೂಡಲೇ ಅವಳು ಗರ್ಭವತಿಯಾಗಿ ಮಹಾ ತೇಜಶ್ಶಾಲಿಯಾದ ಬಾಲಕನನ್ನು ಗರ್ಭದಲ್ಲಿ ಧರಿಸಿದಳು. ಆದರೆ ಆ ತೇಜಃ ಪಿಂಡವನ್ನು ಅವಳು ಗರ್ಭದಲ್ಲಿ ಧರಿಸಲು ಶಕ್ತಳಾಗಲಿಲ್ಲ. ಆಗ ಆ ಗರ್ಭವನ್ನು

ಭೂಮಿಯಲ್ಲಿ ವಿಸರ್ಜಿಸಿಬಿಟ್ಟಳು. ಆ ಗರ್ಭವು ಬೆಂಕಿಯ ಉಂಡೆಯಂತೆ ಧಗಧಗನೆ ಹೊಳೆಯುತ್ತಿತ್ತು. ಆ ಉರಿಯುವ ಕೊಳ್ಳಿಯಂತಿದ್ದ ಆ ಗರ್ಭವನ್ನು ಧರಾ (ಭೂಮಿ) ದೇವಿಯು ತನ್ನ ಗರ್ಭದಲ್ಲಿ ಮುಚ್ಚಿ ಕಾಪಾಡಿದಳು. ಅದರಿಂದ ಉತ್ಪತ್ತಿಯಾದ ಗಂಡುಮಗುವಿಗೆ ಕಶ್ಯಪರು ಜಾತಕರ್ಮಾದಿ ಸಕಲ ಸಂಸ್ಕಾರಗಳನ್ನೂ ಮಾಡಿದರು. ಆ ಗರ್ಭವು ಹುಟ್ಟಿದಾಗಲೂ ಬೆಳೆದಾಗಲೂ ಅಂಗಾರ (ಕೆಂಡ) ದಂತೆಯೇ ಹೊಳೆಹೊಳೆಯುತ್ತಿದ್ದುದರಿಂದ ಅದಕ್ಕೆ ಅಂಗಾರಕನೆಂಬ ಹೆಸರೇ ಪ್ರಸಿದ್ಧಿಯಾಯಿತು. ಇದೇ ಅಂಗಾರಕನ ಕಥೆ.

## ಬುಧನ ಚರಿತ್ರೆ

ಕಶ್ಯಪಋಷಿಗಳಿಗೆ ತ್ರಿಲೋಕ ಪ್ರಸಿದ್ಧಳಾದ ದನುವೆಂಬ ಹೆಂಡತಿ ಇದ್ದಳು. ಆಕೆಗೆ ರಜನೆಂಬ ಮಗನಿದ್ದನು. ಆ ರಜನು ಪ್ರಾಯಸಮರ್ಥನಾದಾಗ ವರುಣನ ಮಗಳಾದ ವಾರುಣೀ ಎಂಬ ಕನ್ಯೆಯನ್ನು ನೋಡಿ ಅವಳ ಅಪರಿಮಿತ ಸೌಂದರ್ಯಕ್ಕೆ ಮೋಹಿತನಾಗಿ ಆಕೆಯನ್ನು ಮದುವೆ ಮಾಡಿಕೊಳ್ಳಬೇಕೆಂದು ಆಶೆಪಟ್ಟನು. ಆಗ ವಾರುಣಿಯು ರಜನ ತಪಸ್ಸು-ತೇಜಸ್ಸು ಬಲ ವೀರ್ಯಗಳನ್ನು ಶುಲ್ಕವಾಗಿ ನನಗೆ ಕೊಟ್ಟರೆ ಅವನನ್ನು ಮದುವೆ ಮಾಡಿಕೊಳ್ಳುವುದಾಗಿ ತಿಳಿಸಿದಳು. ಅದರಂತೆ ರಜನು ವಾರುಣಿಗೆ ಎಲ್ಲವನ್ನೂ ಕೊಟ್ಟುಬಿಟ್ಟನು. ಆ ಕೂಡಲೇ ಆ ವಾರುಣಿಯು ಅವುಗಳೆಲ್ಲವನ್ನೂ ತೆಗೆದುಕೊಂಡು ತಂದೆಯ ಮನೆಗೆ (ನೀರಿನಲ್ಲಿ ಅಡಗಿ) ಹೊರಟುಹೋದಳು. ಈ ಸಂಗತಿಯು ದನುವಿನ ಮಗನಾದ ಈ ದಾನವನಿಗೆ ತಿಳಿಯದೆ ಉಗ್ರವಾದ ತಪಸ್ಸು ಮಾಡಲಾಗಿ ಆಕೆಯಿರುವ ಜಾಗವು ಗೊತ್ತಾಯಿತು. ಆಗ ದಾನವನು ನೀರಿನಲ್ಲಿ ಅಡಗಿಕೊಂಡಿದ್ದ ಆಕೆಯನ್ನು ಹೊಂದಬೇಕೆಂದು ಉದಕದೊಳಕ್ಕೆ ಪ್ರವೇಶಿಸಿದನು. ಮತ್ತು ಆಕೆಯನ್ನು ಸ್ಪರ್ಶಮಾಡಿದನು. ಆ ಕೂಡಲೇ ಆ ದಾನವನು ಕರಗಿ ನೀರಾಗಿ ಹೋದನು. ಈ ರೀತಿ ವಾರುಣಿಯು ತಾನೂ ಜಲಮಯಳಾಗಿ ದಾನವನನ್ನು ಜಲಮಯನನ್ನಾಗಿ ಮಾಡಿದುದನ್ನು ತಿಳಿದು ಚಂದ್ರನು ಪುತ್ರಾರ್ಥಿಯಾಗಿ ಆ ಜಲವನ್ನು ಚೆನ್ನಾಗಿ ಕಡೆದನು. ಈ ರೀತಿ ಜಲಮಥನವನ್ನು ಚಂದ್ರನು ಮಾಡುತ್ತಿರಲಾಗಿ ಸಾಕ್ಷಾನ್ಮಹಾವಿಷ್ಣುವೇ ಆ ಜಲದ

ತೇಜಸ್ಸಿನಲ್ಲಿ ಪ್ರವೇಶ ಮಾಡಿದನು. ಆಗ ಒಂದು ಗಂಡು ಮಗುವು ಆ ತೇಜಸ್ಸಿನಿಂದ ಉತ್ಪನ್ನವಾಯಿತು. ಅದೇ ಬುಧಗ್ರಹವು. ಆಗ ಆ ಮಗುವನ್ನು ಗುರುಪತ್ನಿಯಾದ ತಾರೆಯು ಕಾಪಾಡಿದಳು. ಚಂದ್ರಪತ್ನಿಯಾದ ದಾಕ್ಷಾಯಣಿಯು ಮಹಾ ತೇಜಸ್ವಿಯಾದ ಆ ಬಾಲಕನನ್ನು ಕಾಪಾಡಲು ಅಸಮರ್ಥಳಾದ್ದರಿಂದ ಗುರುಪತ್ನಿಯು ತಾನು ಕಾಪಾಡಿದಳು. ಈ ರೀತಿಯಾಗಿ ಬುಧನು ಉತ್ಪತ್ತಿಯಾದನು.

### ಬೃಹಸ್ಪತಿಗ್ರಹದ ಚರಿತ್ರೆ

ಮರೀಚಿ ಬ್ರಹ್ಮನಿಗೆ ಸುರೂಪಾ ಎಂಬ ಮಗಳಿದ್ದಳು. ಆಕೆಯನ್ನು ಆಂಗೀರಸ ಋಷಿಗಳು ಮದುವೆಯಾದರು. ರೂಪ ಯೌವನ ಶಾಲಿನಿಯಾದ ಆ ಸುರೂಪಾಸಾಧ್ವಿಯ ಹೊಟ್ಟೆಯಲ್ಲಿ ಆಂಗಿರಸರಿಂದ ಹುಟ್ಟಿದ ಮಗನೇ ಬೃಹಸ್ಪತಿಯು. ಈತನು ತನ್ನ ವಿದ್ಯಾಪ್ರತಿಭೆಯಿಂದ ದೇವತೆಗಳಿಗೂ ಗುರುವಾದ ಸಂಗತಿ ಲೋಕ ಪ್ರಸಿದ್ಧವಾಗಿಯೇ ಇದೆ. ಈ ಬೃಹದ್ವಾಕ್ಕುಳ್ಳ ಮಹಾಬುದ್ಧಿಶಾಲಿಯಾದ ವೇದ ವೇದಾಂಗ ಪಾರಂಗತನಾದ ಗುರುವಿನ ಸಂಗತಿಯೇ ಇದು.

### ಶುಕ್ರಗ್ರಹದ ವೃತ್ತಾಂತ

ಹಿರಣ್ಯಕಶ್ಯಪನಿಗೆ (ಕಶಿಪು) ಉಷಾ ಎಂಬ ಮಗಳಿದ್ದಳು. ಸರ್ವಲೋಕೈಕ ಸುಂದರಿಯಾದ ಆ ವಿಶಾಲಾಕ್ಷಿಯು ಭೃಗು ಮಹರ್ಷಿಗಳನ್ನು ಲಗ್ನವಾಗಿ ಅವರಿಂದ ಮಹಾಪ್ರಖ್ಯಾತನಾದ ಶುಕ್ರನನ್ನು ಮಗನನ್ನಾಗಿ ಪಡೆದಳು. ಆ ಮಹಾಯೋಗಿಯಾದ ಶುಕ್ರನು ಕುಬೇರನ ಭಂಡಾರಕ್ಕೆ ನುಗ್ಗಿ ಅವನಲ್ಲಿದ್ದ ಹಣವನ್ನೆಲ್ಲಾ ಅಪಹರಿಸಿಬಿಟ್ಟನು. ತನ್ನ ಹಣವನ್ನೆಲ್ಲವನ್ನೂ ಕಳೆದುಕೊಂಡ ಕುಬೇರನು ಚಿಂತಾಕ್ರಾಂತನಾಗಿ ಈಶ್ವರನನ್ನು ಮೊರೆಹೊಕ್ಕನು. ಶರಣಾಗತವತ್ಸಲನಾದ ಮಹಾದೇವನು ಶುಕ್ರನು ಮಾಡಿದ ಈ ಕೆಲಸಕ್ಕೆ ಬಹಳವಾಗಿ ಕೋಪಿಸಿಕೊಂಡು ಶುಕ್ರನನ್ನು ಸಂಹರಿಸಿಯೇ ಬಿಡಬೇಕೆಂದು ನಿರ್ಧರಿಸಿದನು. ಆಗ ಈ ವೃತ್ತಾಂತವನ್ನು ತಿಳಿದ ಯೋಗಾಚಾರ್ಯನಾದ ಶುಕ್ರಾಚಾರ್ಯನು ತನ್ನ ಯೋಗಬಲದಿಂದ ಈಶ್ವರನ ಹೊಟ್ಟೆಯಲ್ಲಿ ಹೊಕ್ಕನು. ಆ ರೀತಿ ಹೊಟ್ಟೆಯಲ್ಲೇ ಕುಳಿತು ಜಗನ್ಮಾತೆಯಾದ ಪಾರ್ವತಿಯನ್ನು ತನ್ನನ್ನು

ಕಾಪಾಡುವಂತೆ ಪ್ರಾರ್ಥಿಸಿಕೊಂಡನು. ಆ ಲೋಕಮಾತೆಯು ಅವನ ಮೊರೆಯನ್ನು ಕೇಳಿ ಅವನನ್ನು ಬದುಕಿಸಿಕೊಡಬೇಕೆಂದು ಪರಮೇಶ್ವರನನ್ನು ಪ್ರಾರ್ಥಿಸಿದಳು. ಆಗ ಹೆಂಡತಿಯ ಮಾತನ್ನು ಮನ್ನಿಸಿ ಪರಮೇಶ್ವರನು ಆ ಶುಕ್ರನನ್ನು ತನ್ನ ಶಿಶ್ನ (ಪ್ರಧಾನೇಂದ್ರಿಯ) ದಿಂದ ಈಚೆಗೆ ಬಿಟ್ಟನು. ಶಿಶ್ನದಿಂದ ಹೊರಕ್ಕೆ ಬರುವ ವೀರ್ಯಕ್ಕೆ ಅಂದಿನಿಂದ ಶುಕ್ರವೆಂದು ಹೆಸರಾಯಿತು. (ಶುಕ್ರಂ-ತೇಜೋ-ರೇತಸೀಚ ಬೀಜ-ವೀರ್ಯ-ಇಂದ್ರಿಯ ಇವೆಲ್ಲಾ ಒಂದೇ ಪದಗಳು). ಆಗ ಪರಮೇಶ್ವರನು ಶುಕ್ರನ ಮೇಲಿನ ಪ್ರೇಮದಿಂದ ಧನೇಶ (ಕುಬೇರ) ನೊಡನೆ ಶುಕ್ರನಿಗೂ ಧನೇಶತ್ವದಲ್ಲಿ ಭಾಗವನ್ನು ಕೊಟ್ಟನು. ಮತ್ತು ಕುಬೇರನಿಗೂ ಶುಕ್ರನಿಗೂ ಸ್ನೇಹ ಮಾಡಿಸಿದನು.

### ಶನೈಶ್ಚರನ ಚರಿತ್ರೆ

ಬ್ರಹ್ಮನಿಗೆ ತ್ವಷ್ಟ ಬ್ರಹ್ಮನೆಂಬ ಮಾನಸ ಪುತ್ರನೊಬ್ಬನಿದ್ದನು. ಅವನಿಗೆ ತ್ರಿಲೋಕ ಸುಂದರಿಯಾದ ಸಂಜ್ಞೆಯೆಂಬ ಮಗಳಿದ್ದಳು. ಆ ಮಗಳನ್ನು ತ್ವಷ್ಟವು ಸೂರ್ಯನಿಗೆ ಮದುವೆ ಮಾಡಿಕೊಟ್ಟನು. ತೇಜಶ್ಶಾಲಿಯಾದ ಸೂರ್ಯನು ಆಕೆಯ ಹೊಟ್ಟೆಯಲ್ಲಿ ವೈವಸ್ವತಮನುವನ್ನೂ ಯಮನನ್ನೂ ತ್ರಿಲೋಕಪಾವನೆಯೆನಿಸಿದ ಯಮುನಾ ದೇವಿಯನ್ನೂ ಪಡೆದನು. ಈ ರೀತಿ ಎರಡು ಗಂಡು ಮಕ್ಕಳನ್ನೂ ಒಬ್ಬಳು ಹೆಣ್ಣು ಮಗಳನ್ನೂ ಪಡೆದ ಬಳಿಕ ತನ್ನ ಗಂಡನ ಮಹಾ ತೇಜಸ್ಸನ್ನು ಸಹಿಸಿಕೊಂಡು ಅವನ ಜತೆಯಲ್ಲಿರಲು ಸಹಿಸಲಾರದೆ ಸಂಜ್ಞಾದೇವಿಯು ತನ್ನ ಛಾಯೆ (ನೆರಳು)ಯನ್ನು ಕರೆದು ಈ ಮಾತನ್ನು ಹೇಳಿದಳು. ಎಲೈ ಛಾಯೆಯೇ! ನೀನು ನನ್ನಂತೆಯೇ ರೂಪವನ್ನು ಧರಿಸಿ ಕೊಂಚವೂ ವಿಕಾರವನ್ನು ತೋರ್ಪಡಿಸಿಕೊಳ್ಳದೆ ಸೂರ್ಯನ ಜತೆಯಲ್ಲಿ ಸಂಸಾರ ಮಾಡಿಕೊಂಡು ನನ್ನಿಬ್ಬರು ಗಂಡು ಮಕ್ಕಳನ್ನೂ ಒಬ್ಬ ಹೆಣ್ಣು ಮಗಳನ್ನೂ ಕಾಪಾಡಿಕೊಂಡಿರು. ನಾನು ನನ್ನ ತಂದೆಯ ಮನೆಗೆ ಹೋಗುತ್ತೇನೆಂದು ಹೇಳಿ ತ್ವಷ್ಟ ಬ್ರಹ್ಮನ ಮನೆಗೆ ಹೊರಟುಹೋದಳು. ಮಗಳು ಏಕಾಏಕಿ ಬಂದದ್ದನ್ನು ನೋಡಿ ತಂದೆಯು ಅವಳನ್ನು ತನ್ನ ಮನೆಗೆ ಬಂದುದಕ್ಕಾಗಿ ಆಕ್ಷೇಪಿಸಿ ಹೊರಟು ಹೋಗೆಂದು ಅಟ್ಟಿಬಿಟ್ಟನು. ಆಗ ಅವಳು ತಂದೆಯಿಂದ

ತಿರಸ್ಕೃತಳಾಗಿ ಗಂಡನ ಮ... ಪುನಃ ಹೋಗುವುದಕ್ಕೆ ಮುಖವಿಲ್ಲದೆ ಉತ್ತರ ಕುರುದೇಶಕ್ಕೆ ಹೋಗಿ ಅಲ್ಲಿ ಹೆಣ್ಣು ಕುದುರೆಯ ರೂಪವನ್ನು ಧರಿಸಿ ಹುಲ್ಲುಗಾವಲುಗಳನ್ನು ಹುಡುಕಿ ಹುಡುಕಿ ಹೊಟ್ಟೆ ತುಂಬಿಸಿಕೊಂಡು ಸಂಚರಿಸಲಾರಂಭಿಸಿದಳು. ಇತ್ತ ಕಡೆ ಸೂರ್ಯನು ಛಾಯೆಯ ಸ್ವರೂಪವನ್ನು ಕಂಡುಹಿಡಿಯಲಾರದೆ ಇವಳು ಸಂಜ್ಞಾದೇವಿಯೆಂದೇ ತಿಳಿದುಕೊಂಡು ಅವಳ ಜತೆಯಲ್ಲಿ ಸಂಸಾರ ಮಾಡಿಕೊಂಡಿದ್ದನು. ಛಾಯಾದೇವಿಯ ಹೊಟ್ಟೆಯಲ್ಲಿ ಸೂರ್ಯನಿಂದ ಸಾವರ್ಣ ಮತ್ತು ಶನೈಶ್ಚರನೆಂಬ ಇಬ್ಬರು ಗಂಡುಮಕ್ಕಳು ಹುಟ್ಟಿದರು.

ಛಾಯಾದೇವಿಯು ತನ್ನ ಹೊಟ್ಟೆಯಲ್ಲಿ ಇಬ್ಬರು ಗಂಡು ಮಕ್ಕಳಾದ ಮೇಲೆ ಅವರ ವಿಷಯದಲ್ಲಿ ಎಷ್ಟು ಪ್ರೇಮವನ್ನು ತೋರಿಸುತ್ತಿದ್ದಳೋ ಅಷ್ಟುಮಟ್ಟಿನ ಪ್ರೇಮವನ್ನು ಸಂಜ್ಞಾದೇವಿಯ ಮಕ್ಕಳ ವಿಷಯದಲ್ಲಿ ತೋರಿಸುತ್ತಿರಲಿಲ್ಲ.

ಒಂದುದಿನ ಯಮನು ತನ್ನನ್ನು ಸರಿಯಾಗಿ ಉಪಚರಿಸಲಿಲ್ಲವೆಂಬ ಕೋಪದಿಂದ ಛಾಯೆಯನ್ನು ಬಹಳವಾಗಿ ಬೈದುಬಿಟ್ಟನು. ಛಾಯೆಗೆ ಯಮನ ಮೇಲೆ ಸಿಟ್ಟುಬಂದು ನಿನ್ನ ಕಾಲುಗಳು ಬಿದ್ದುಹೋಗಲೆಂದು ಶಾಪಕೊಟ್ಟುಬಿಟ್ಟಳು.

ಯಮನು ಛಾಯೆಯು ಮಾಡಿದ ಈ ಕೆಲಸವನ್ನು ತನ್ನ ತಂದೆಯಾದ ಸೂರ್ಯನಿಗೆ ತಿಳಿಸಿದನು. ಆಗ ಸೂರ್ಯನು ಯಮನನ್ನು ಕುರಿತು ಈ ಮಾತನ್ನು ಹೇಳಿದನು. ಕ್ರಿಮಿ (ಹುಳು) ಗಳು ನಿನ್ನ ಮಾಂಸವನ್ನು ತೆಗೆದುಕೊಂಡು ಭೂಲೋಕಕ್ಕೆ ಹೋಗುತ್ತವೆ. ಕ್ರಮೇಣ ನಿನ್ನ ಶಾಪವು ಕ್ರಿಮಿ ರೂಪದಲ್ಲಿ ಶಾಂತವಾಗಿ ನೀನು ಶಾಪಮುಕ್ತನಾಗುತ್ತೀಯೇ. ಈ ರೀತಿ ಹೇಳಿದ ತಂದೆಯ ಮಾತನ್ನು ಕೇಳಿ ಯಮನು ಮಹಾವಿಷ್ಣುವನ್ನು ಕುರಿತು ಘೋರ ತಪಸ್ಸನ್ನು ಮಾಡಿದನು. ಆ ತಪಸ್ಸಿನಿಂದ ಯಮನು ಬಹುಕ್ಷಿಪ್ರದಲ್ಲಿ ಧರ್ಮರಾಜತ್ವವನ್ನು ಹೊಂದಿದನು.

ಸೂರ್ಯನು ಒಂದುದಿನ ಜ್ಞಾನದೃಷ್ಟಿಯಿಂದ ನೋಡಲಾಗಿ ಪುತ್ರನ ಶಾಪಕಾರಣವು ಗೊತ್ತಾಯಿತು. ಆ ಕೂಡಲೇ ಆ ವೀರನು ಬಹಳ ಕೋಪಗೊಂಡವನಾಗಿ ಛಾಯೆಯನ್ನು ಕುರಿತು ನಿಜಸ್ಥಿತಿಯೇನೆಂದು ಕೇಳಲು

ಅವಳು ಮೊದಲಿನಿಂದ ಕೊನೆಯವರಿಗೆ ನಡೆದುದನ್ನೆಲ್ಲಾ ಸ್ವಲ್ಪವೂ ಬಿಡದೆ ಹೇಳಿಬಿಟ್ಟಳು.

ಛಾಯೆಯ ಮಾತನ್ನು ಕೇಳಿದೊಡನೆಯೇ ಸೂರ್ಯನು ತ್ವಷ್ಟ್ರುಬ್ರಹ್ಮನ ಮನೆಗೆ ಬಂದು ನೋಡಿದನು. ಅಲ್ಲಿ ಸಂಜ್ಞೆಯು ಇರಲಿಲ್ಲ. ಮಹಾಸಾಧ್ವಿಯಾದ ತನ್ನ ಹೆಂಡತಿಯು ಎಲ್ಲೆಂದು ತ್ವಷ್ಟ್ರುವನ್ನು ಕೇಳಲು ಅವನು ಆಕೆಯು ನಿನ್ನ ತೇಜಸ್ಸನ್ನು ತಡೆಯಲಾರದೆ ವಡವಾರೂಪ (ಹೆಣ್ಣು ಕುದುರೆಯರೂಪ) ವನ್ನು ಧರಿಸಿ ಉತ್ತರ ಕುರುದೇಶದಲ್ಲಿ ವಾಸಮಾಡುತ್ತಲಿದ್ದಾಳೆ ಹೀಗೆಂದು ಹೇಳಿದನು. ಮತ್ತು ತ್ವಷ್ಟ್ರುವು, ಜಗತ್ಪತಿಯಾದ ಸೂರ್ಯನು ಹೆಂಡತಿಯ ವಿರಹದಿಂದ ಭ್ರಮೆ ಹೊಂದಿರುವನೆಂದು ತಿಳಿದವನಾಗಿ ಸೂರ್ಯನ ಪ್ರಖರ ಕಿರಣಗಳನ್ನು ಸ್ವಲ್ಪ ಶಾಂತವಾಗುವಂತೆ ಮಾಡಿದನು. ಆಗ ಸೂರ್ಯನು ಶಾಂತಕಿರಣನಾಗಿ ಮನೋಹರನಾಗಿ ಕಂಡನು. ಆಗ ಆ ಪ್ರಖರ ಕಿರಣಗಳನ್ನು ಒಟ್ಟುಗೂಡಿಸಿ ಒಂದು ಚಕ್ರಾಯುಧವನ್ನಾಗಿ ಮಾಡಿ ಪರಮಾತ್ಮನಾದ ಮಹಾವಿಷ್ಣುವಿಗೆ ಸಮರ್ಪಿಸಿದನು. ಆ ಚಕ್ರಕ್ಕೆ ಸುದರ್ಶನವೆಂದು ಹೆಸರಾಯಿತು. ಆಗ ಮನೋಹರ ರೂಪವನ್ನು ಧರಿಸಿದ ಸೂರ್ಯನು ಕುದುರೆಯ ಆಕಾರವನ್ನು ತಾಳಿದನು.

ಈ ರೀತಿ ಗಂಡು ಕುದುರೆಯಾಗಿ ಸೂರ್ಯನು ಉತ್ತರ ಕುರುದೇಶಕ್ಕೆ ಹೋಗಿ ಅಲ್ಲಿ ವಡಬಾ (ಹೆಣ್ಣು ಕುದುರೆ) ರೂಪವನ್ನು ಧರಿಸಿದ್ದ ತನ್ನ ಹೆಂಡತಿಯಾದ ಸಂಜ್ಞೆಯನ್ನು ನೋಡಿದನು. (ವಾಮೀ-ಅಶ್ವಾ-ಬಡಬಾ ಈ ಮೂರು ಪದಗಳಿಗೂ ಹೆಣ್ಣು ಕುದುರೆಯೆಂದು ಹೆಸರು. ವಡಬಾ ಎಂದರೆ ಕಾಡುಗಿಚ್ಚಿಗೂ ಹೆಸರು. ಆದರೆ ಇಲ್ಲಿ ವಡಬಾ ಶಬ್ದಕ್ಕೆ ಹೆಣ್ಣು ಕುದುರೆಯೆಂದೇ ಅರ್ಥ ಮಾಡಿಕೊಳ್ಳಬೇಕು.) ಅಲ್ಲಿ ತನ್ನ ಹೆಂಡತಿಯು ಗರಿಕೆ ಹುಲ್ಲನ್ನು ಮೇಯುತ್ತಾ ವಿಹರಿಸುತ್ತಿದ್ದುದನ್ನು ನೋಡಿ ಮೋಹಗೊಂಡವನಾಗಿ ಬೇಗಬೇಗ ಅದರ ಹತ್ತಿರಕ್ಕೆ ಹೋಗಿ ಸಂಭೋಗ (ರತಿಕ್ರೀಡೆ) ಮಾಡಬೇಕೆಂದು ಆತುರಪಟ್ಟನು. ಈ ರೀತಿ ಬೇಗಬೇಗ ತನ್ನ ಬಳಿಗೆ ಬಂದ ಗಂಡುಕುದುರೆಯನ್ನು ನೋಡಿ ಸಂಜ್ಞೆ (ವಡಬಾ) ಯು ಇವನು ಪರಪುರುಷನೆಂಬ ಶಂಕೆಯಿಂದ ಮೈಥುನಕ್ಕೆ ದಾರಿಗೊಡದೆ ತಂಟೆ ಮಾಡಿತು. ಆಗ

ಪ್ರಕಾಶಕಿರಣನಾದ ಸೂರ್ಯನು ಸಂಜ್ಞೆಯ ಮುಖಭಾಗಕ್ಕೆ ಬಂದು ಅವಳ ಮುಖವನ್ನು ಚೆನ್ನಾಗಿ ಮೂಸಿ ನೋಡಲು ಆ ಸಂಜ್ಞೆ (ಬಡಬೆ)ಯ ಎರಡು ಮೂಗಿನ ಹೊಳ್ಳೆಗಳಲ್ಲೂ ವೀರ್ಯವು ತುಂಬಿಕೊಂಡಿತು. ಆ ಕೂಡಲೇ ಆ ಮೂಗಿನ ಎರಡು ಹೊಳ್ಳೆಗಳಿಂದಲೂ ಇಬ್ಬರು ಮಕ್ಕಳು ಹುಟ್ಟಿದರು. ಆ ಅವಳೀ ಮಕ್ಕಳಿಗೆ ನಾಸತ್ಯರೆಂದೂ ಅಶ್ವಿನೀ (ಹೆಣ್ಣು ಕುದುರೆಯಿಂದ ಹುಟ್ಟಿದವರು) ದೇವತೆಗಳೆಂದೂ ಹೆಸರಾಯಿತು. ಆ ಕುಮಾರರು ಉತ್ಪನ್ನರಾದೊಡನೆ ಆ ಎರಡು ಮೂಗಿನ ಹೊಳ್ಳೆಗಳಲ್ಲಿ ತುಂಬಿಕೊಂಡಿದ್ದ ವೀರ್ಯವು ಭೂಮಿಗೆ ಜಾರಿಬಿದ್ದು ಗಂಡು ಕುದುರೆಯ ಕಾಲಿನಿಂದ ತುಳಿಯಲ್ಪಟ್ಟಿತು. ಆ ಕೂಡಲೇ ಆ ವೀರ್ಯವು ಮಣ್ಣಿನೊಡನೆ ಕಲಿತು ಗಟ್ಟಿಯಾಗಿ ಸೂರ್ಯನಂತೆ ಪ್ರಕಾಶಮಾನವಾದ ಒಂದು ಗಂಡುಮಗುವು ಹುಟ್ಟಿತು. ಆ ಬಳಿಕ ಸೂರ್ಯನು ತನ್ನ ಸ್ವಸ್ವರೂಪವನ್ನು ಧರಿಸಿ ಸಂಜ್ಞಾದೇವಿಯನ್ನು ಸ್ವಸ್ವರೂಪದಿಂದಿರುವಂತೆ ಮಾಡಿ ಅವಳನ್ನು ಜತೆಯಲ್ಲಿ ಕರೆದುಕೊಂಡು ತನ್ನ ಮನೆಯನ್ನು ಸೇರಿಕೊಂಡನು.

ಆ ಅಶ್ವಿನೀ ದೇವತೆಗಳಿಬ್ಬರೂ ನಾಸತ್ಯರೆಂಬ ಹೆಸರಿನಿಂದ ದೇವತೆಗಳ ವೈದ್ಯರಾದರು. ಆ ಬಳಿಕ ಕಾಲಿನ ತುಳಿತದ ವೀರ್ಯದಿಂದ ಹುಟ್ಟಿದ ಮಗನನ್ನು ನೋಡಿ ಸೂರ್ಯನು ಅವನಿಗೆ ರೇವಂತನೆಂದು ನಾಮಕರಣ ಮಾಡಿದನು. ಆಗ ಸೂರ್ಯನು ಆ ಮಗನನ್ನು ನೋಡಿ ಈ ಮಾತನ್ನು ಹೇಳಿದನು. ಎಲೈ ಮಗನೇ ನಾನು ಅಶ್ವವೇಷವನ್ನು ಧರಿಸಿದ ಕಾಲದಲ್ಲಿ ನನ್ನಿಂದ ನೀನು ಉತ್ಪನ್ನನಾದ್ದರಿಂದ ನೀನೂ ನನ್ನಂತೆ ಪ್ರಕಾಶಮಾನನಾಗಿರು. ನೀನು ಇನ್ನು ಮುಂದೆ ಸಕಲ ಅಶ್ವಗಳಿಗೂ ರಾಜನೆನಿಸಿ ಸಕಲ ಅಶ್ವಗಳಿಂದಲೂ ಪೂಜಿಸಲ್ಪಡುತ್ತೀಯೇ. ನೀನು ಸಕಲ ಜಗತ್ಪ್ರಿಯನಾಗಿ ಇರು. ಯಾರು ರೇವಂತನೆಂಬ ನಿನ್ನನ್ನು ಪೂಜಿಸುವರೋ ಅಂಥವರು ಅಭಿವೃದ್ಧಿ ಹೊಂದಲಿ.

## ರಾಹುವಿನ ಜನ್ಮ ಚರಿತ್ರೆ

ಕಶ್ಯಪಬ್ರಹ್ಮನಿಗೆ ಸಿಂಹಿಕೆಯೆಂಬ ಹೆಸರಿನ (ದಾಕ್ಷಾಯಣಿಯೆಂಬ) ಹೆಂಡತಿಯಿದ್ದಳು. ಆಕೆಯು ಹೊತ್ತಲ್ಲದ ಹೊತ್ತಿನಲ್ಲಿ (ಪ್ರದೋಷಕಾಲದಲ್ಲಿ)

ತಪೋನಿಷ್ಠನಾಗಿದ್ದ ಗಂಡನನ್ನು ಕುರಿತು ಈ ರೀತಿ ಪ್ರಾರ್ಥಿಸಿಕೊಂಡಳು. ಭಗವನ್! ನಾನು ಪುತ್ರಕಾಮಳಾಗಿ ನಿನ್ನ ಸಂಗವನ್ನು ಬಯಸುತ್ತೇನೆ. ಹೀಗೆನ್ನಲು ಕಶ್ಯಪನು ಕೋಪಗೊಂಡು ಆಕಾಲದಲ್ಲಿ ನೀನು ನನ್ನ ಸಂಗವನ್ನು ಬಯಸಿದುದರಿಂದ ಇದರಿಂದ ನಿನ್ನ ಹೊಟ್ಟೆಯಲ್ಲಿ ಹುಟ್ಟುವ ಮಗನು ದಿತಿಯ ಮಕ್ಕಳಾದ ದಾನವರಿಗೆ ಸದೃಶನಾಗಿ ಹುಟ್ಟುತ್ತಾನೆಂದು ಹೇಳಿಬಿಟ್ಟನು. ಈ ರೀತಿಯಾದ ವರದಾನದಿಂದ ದಾಕ್ಷಾಯಣಿ (ಸಿಂಹಿಕಿ) ಯ ಹೊಟ್ಟೆಯಲ್ಲಿ ಹುಟ್ಟಿದ ಮಗನೇ ರಾಹು (ಗ್ರಹ)ವು.

## ಕೇತುವಿನ ಜನ್ಮಚರಿತ್ರೆ

ಒಂದಾನೊಂದು ಕಾಲದಲ್ಲಿ ಭೂಮಿಯಲ್ಲಿ ಪ್ರಜೆಗಳು ಬಹಳವಾಗಿ ಹೆಚ್ಚಿಹೋಗಿ ಭೂಭಾರ ಹೆಚ್ಚಾಯಿತೆಂದು ಬ್ರಹ್ಮನಿಗೆ ದೂರುಬರಲಾಗಿ ಪ್ರಜಾನಾಶಕ್ಕೆ ಉಪಾಯವನ್ನು ಯೋಚಿಸುತ್ತಿದ್ದನು. ಈ ಯೋಚನೆಯು ಮನಸ್ಸಿನಲ್ಲಿ ಹುಟ್ಟಿದೊಡನೆಯೇ ಒಂದು ಕನ್ಯೆಯು ಉತ್ಪತ್ತಿಯಾದಳು. ಅವಳಿಗೆ ಮೃತ್ಯುದೇವತೆಯೆಂಬ ಹೆಸರು ಪ್ರಸಿದ್ಧವಾಯಿತು.

ಆ ಮೃತ್ಯುದೇವತೆಯನ್ನು ಕುರಿತು ಬ್ರಹ್ಮನು ಪ್ರಜೆಗಳನ್ನು ಸಂಹಾರ ಮಾಡೆಂದು ಹೇಳಿದನು. ಆ ಮಾತನ್ನು ಕೇಳಿ ಮೃತ್ಯುದೇವತೆಯು ಬಹಳವಾಗಿ ಅಳುವುದಕ್ಕೆ ಆರಂಭ ಮಾಡಿದಳು. ಆಗ ಅವಳ ಕಣ್ಣುಗಳಿಂದ ದುಃಖಾಶ್ರುಗಳು ತಟತಟನೆ ಉದರಿದುವು. ಆ ಕಣ್ಣು ನೀರಿನ ನೂರಾರು ಸಾವಿರಾರು ತೊಟ್ಟುಗಳೆಲ್ಲವೂ ಅಷ್ಟು ವಿಧವಾದ ವಿವಿಧ ವ್ಯಾಧಿಗಳಾಗಿ ಪರಿಣಮಿಸಿದುವು. ಈ ರೀತಿ ನಾನಾ ರೋಗಗಳು ಹುಟ್ಟಿದುದನ್ನು ನೋಡಿ ಆ ಮೃತ್ಯುದೇವತೆಯು ತನ್ನ ಕಣ್ಣೀರನ್ನು ನಿಲ್ಲಿಸಿ ಪುಷ್ಕರಾರಣ್ಯದಲ್ಲೂ ಇನ್ನೂ ಅನೇಕ ಸ್ಥಳಗಳಲ್ಲಿಯೂ ಬಹು ವರ್ಷಕಾಲ ಘೋರವಾದ ತಪಸ್ಸನ್ನು ಮಾಡಿದಳು.

ಆ ತಪಸ್ವಿಯನ್ನು ಕುರಿತು ಪುನಃ ಬ್ರಹ್ಮನು ಎಲೌ ಮಂಗಳಾಂಗಿಯೇ! ನನ್ನ ಮಾತಿನಂತೆ ನೀನು ಪ್ರಜೆಗಳನ್ನು ಸಂಹಾರ ಮಾಡಲೇಬೇಕು. ನನ್ನ ಮಾತು ಅನ್ಯಥಾ ಪರಿಣಮಿಸಕೂಡದೆಂದು ಹೇಳಿದನು. ಮತ್ತು ಬ್ರಹ್ಮನು ಮೃತ್ಯುವನ್ನು ಕುರಿತು ಹೇಳಿದನು- ಎಲೌ ಮಂಗಳಾಂಗಿಯೇ! ನೀನು ಮಾಡಿದ ತಪಸ್ಸಿಗೆ ನಾನು ಮೆಚ್ಚಿ

ಅದಕ್ಕೆ ವರವನ್ನು ಕೊಡಬೇಕಾಗಿದೆ. ಮನುಷ್ಯರು ತಾವು ತಾವು ಮಾಡಿದ ದೋಷಗಳ ದೆಶೆಯಿಂದಲೇ ಪ್ರಪಂಚದಲ್ಲಿ ಸಾಯುತ್ತಾರೆ. ಹಾಗೆ ಅವರ ತಪ್ಪುಗಳಿಂದಲೇ ಅವರು ಸಾಯುತ್ತಿರುವಲ್ಲಿ ನಿನಗೆ ಯಾವ ದೋಷವೂ ಸಂಭವಿಸಲಾರದೆಂದು ತಿಳಿದುಕೋ. ಮನುಷ್ಯರ ಮರಣಕ್ಕೆ ನೀನು ತಪ್ಪಿತಸ್ಥಳಾಗಲಾರೆ ಎನ್ನಲು ಆ ಮೃತ್ಯುವು ಆ ಮಾತನ್ನು ಕೇಳಿ ಬಿಸಿಬಿಸಿಯಾದ ಒಂದು ನಿಟ್ಟುಸಿರನ್ನು ಬಿಟ್ಟಳು. ಆ ಉದ್ಧವಾದ ನಿಟ್ಟುಸಿರು ಕರೀನಾಗರ ಹಾವಿನಂತೆ ಉತ್ಪತ್ತಿಯಾಯಿತು. ಅದರಿಂದಲೇ ಕೇತುವು ಉತ್ಪತ್ತಿಯಾದನು. ಅದೇ ಕೃಷ್ಣಸರ್ಪವೇ ಕೇತುವೆಂದು ಲೋಕದಲ್ಲಿ ಪ್ರಸಿದ್ಧಯಾದನು. ಆ ಕೃಷ್ಣಸರ್ಪದ ಹೆಡೆಯಲ್ಲಿ ಬೆಂಕಿಯು ಉರಿಯುತ್ತಿತ್ತು. ಅದು ಕಾಲಾಗ್ನಿ ರುದ್ರಜ್ವಾಲೆಯಂತೆ ಜ್ವಲಿಸುತ್ತಿತ್ತು. ಆ ಜ್ವಾಲೆಯಿಂದ ಹೊರಟ ಒಂದಾನೊಂದು ಧೂಮವು ಧ್ವಜಪಟದಂತೆ ಕಂಗೊಳಿಸಿತು. ಅದನ್ನೇ ಧೂಮಕೇತುವೆಂದು ಹೇಳುವರು. ಆಗ ಬ್ರಹ್ಮನು ಅದಕ್ಕೆ ಧೂಮಕೇತುವೆಂದು ಹೆಸರನ್ನು ಕೊಟ್ಟು ಮುಂದೆ ಇದೇ ಹೆಸರೇ ಇದಕ್ಕೆ ಪ್ರಸಿದ್ಧಿಯಾಗಲೆಂದು ವರವನ್ನು ಕೊಟ್ಟನು. ಆಗಿನಿಂದಲೂ ಅಂತರಿಕ್ಷದಲ್ಲಿ ಆಗಿಂದಾಗ್ಯೆ ಧೂಮಕೇತುವು (ಬಾಲಚುಕ್ಕೆಯು) ಕಾಣಿಸಿಕೊಂಡು ಜನರ ಶುಭಾಶುಭವನ್ನು ತೋರಿಸುತ್ತಿರುವುದು. ಕ್ಷಾಮಡಾಮರಗಳು ಪ್ರಾಪ್ತವಾದಾಗಲೂ ಲೋಕಕ್ಕೆ ಅರಿಷ್ಟ ಸೂಚನೆಯಾದಾಗಲೂ ಯುದ್ಧಾದಿ ಕಷ್ಟಪರಂಪರೆಗಳು ಪ್ರಾಪ್ತವಾದಾಗಲೂ ಸ್ವರ್ಗದಲ್ಲೂ ಆಕಾಶದಲ್ಲೂ ಈ ಮಹಾತ್ಮನಾದ ಧೂಮಕೇತುವು ಜನರ ಕಣ್ಣಿಗೆ ಕಾಣಿಸಿಕೊಂಡು ಬಹುವಿಧ ಆಕಾರಗಳಿಂದ ನಾನಾತರಹ ಬಾಲಚುಕ್ಕೆಯಂತೆ ತೋರುತ್ತಾ ಮನುಷ್ಯರ ಶುಭಾಶುಭವನ್ನು ತೋರಿಸುತ್ತಿರುವನು.

★ ★ ★ ★

# ಗೋತ್ರಪ್ರವರಣಾಂ ವಿವರಣಮ್

| ಕಶ್ಯಪಗಣಾಃ | |
|---|---|
| **ಗೋತ್ರಂ** | **ಪ್ರವರಾಃ** |
| ಕಶ್ಯಪಾಃ | ಕಾಶ್ಯಪಃ, ಅವತ್ಸಾರಃ, ಅಸಿತಃ |
| ನಿಧ್ರುವಾಃ | ಕಾಶ್ಯಪ, ಅವತ್ಸಾರಃ, ನೈಧ್ರುವಃ |
| ರೇಭಾಃ | ಕಾಶ್ಯಪ, ಅವತ್ಸಾರಃ, ರೈಭ್ಯಃ |
| ಶಂಡಿಲಾಃ | ಕಾಶ್ಯಪಃ, ಅವತ್ಸಾರಃ, ಶಾಂಡಿಲ್ಯ ಅಥವಾ ಕಾಶ್ಯಪಃ, ಅವತ್ಸಾರಃ, ದೇವಲಃ ಅಥವಾ ಕಾಶ್ಯಪಃ, ಅವತ್ಸಾರಃ, ಅಸಿತಃ ಅಥವಾ ಕಾಶ್ಯಪಃ ಅಸಿತಃ, ದೇವಲಃ ಅಥವಾ ದೇವಲಃ ಅಸಿತಃ |
| **ಅತ್ರಿಗಣಾಃ** | |
| ಆತ್ರಯಃ | ಆತ್ರೇಯಃ, ಆರ್ಚನಾಸಃ, ಶ್ಯಾವಾಶ್ವಃ |
| ಗವಿಷ್ಠಿರಾಃ | ಆತ್ರೇಯಃ, ಆರ್ಚನಾನಸಃ, ಗಾವಿಷ್ಠರಃ ಅಥವಾ ಆತ್ರೇಯಃ, ಗಾವಿಷ್ಠರಃ, ಪೌರ್ವಾತಿಥಃ |
| ವಾದ್ಭುತಕಾಃ | ಆತ್ರೇಯಃ, ಆರ್ಚನಾನಸಃ, ವಾದ್ಭುತಕಃ |
| ಮುದ್ಗಲಾಃ | ಆತ್ರೇಯಃ, ಆರ್ಚನಾನಸಃ, ಪೌರ್ವಾತಿಥಃ |
| ಅತಿಥಯಃ | ಆತ್ರೇಯಃ, ಆರ್ಚನಾನಸಃ, ಆತಿಥಃ ಅಥವಾ ಆತ್ರೇಯಃ, ಆರ್ಚನಾನಸಃ, ಗಾವಿಷ್ಠರಃ |
| ವಾಮರಥ್ಯಾಃ | ಆತ್ರೇಯಃ, ಆರ್ಚನಾನಸಃ, ಆತಿಥಃ ಅಥವಾ ಆತ್ರೇಯಃ, ಆರ್ಚನಾನಸಃ, ಗಾವಿಷ್ಠರಃ |
| ಸುಮಂಗಲಾಃ | ಆತ್ರೇಯಃ, ಆರ್ಚನಾನಸಃ, ಆತಿಥಃ ಅಥವಾ ಅತ್ರೀಃ , ಸುಮಂಗಲಃ, ಶ್ಯಾವಾಶ್ವಃ |
| ಬೀಜವಾಪಾಃ | ಆತ್ರೇಯಃ ಆರ್ಚನಾನಸಃ, ಆತಿಥಃ ಅಥವಾ ಆತ್ರೇಯಃ, ಆರ್ಚನಾನಸಃ, ಗಾವಿಷ್ಠರಃ |
| ಧನಂಜಯಾಃ | ಆತ್ರೇಯಃ, ಆರ್ಚನಾನಸಃ, ಧಾನಂಜಯಃ |
| ವಾಲೇಯಾದಯಃ | ಆತ್ರೇಯಃ, ವಾಮರಥ್ಯಃ , ಪೌತ್ರಿಕಃ |

## ಅಂಗಿರೋಗಣೇಷು ಗೌತಮಾಂಗಿರಸಃ

| | |
|---|---|
| ಆಯಾಸ್ಯಾಃ | ಆಂಗಿರಸಃ, ಆಯಾಸ್ಯಃ, ಗೌತಮಃ |
| ಶರದ್ವತಾಃ | ಆಂಗಿರಸಃ, ಗೌತಮಃ, ಶಾರದ್ವತಃ |
| ಕೌಮಂಡಾಃ | ಆಂಗಿರಸಃ, ಔತ(ಚ)ಥ್ಯಃ, ಕಾಕ್ಷೀವತಃ, ಗೌತಮಃ, ಕೌಮಂಡಃ ಅಥವಾ ಆಂಗಿರಸಃ, ಔತಥ್ಯಃ, ಗೌತಮಃ, ಔಶಿಜಃ, ಕಾಕ್ಷೀವತಃ ಅಥವಾ ಆಂಗಿರಸಃ, ಆಯಾಸ್ಯಃ, ಔಶಿಜಃ, ಗೌತಮಃ, ಕಾಕ್ಷೀವತಃ ಅಥವಾ ಆಂಗಿರಸಃ, ಔಶಿಜಃ, ಕಾಕ್ಷೀವತಃ ಅಥವಾ ಆಂಗಿರಸಃ, ಔತಥ್ಯಃ, ಕಾಕ್ಷೀವತಃ ಅಥವಾ ಔತಥ್ಯಃ, ಗೌತಮಃ, ಕೌಮಂಡಃ |
| ದೀರ್ಘತಮಸಃ | ಆಂಗಿರಸಃ ಔತಥ್ಯಃ, ಕಾಕ್ಷೀವತಃ, ಗೌತಮಃ, ದೈರ್ಘತಮಸಃ ಅಥವಾ ಆಂಗಿರಸಃ, ಔತಥ್ಯಃ, ದೈರ್ಘತಮಸಃ |
| ಕರೇಣುಪಾಲಯಃ | ಆಂಗಿರಸಃ, ಗೌತಮಃ, ಕಾರೇಣುಪಾಲಃ |
| ವಾಮದೇವಾಃ | ಆಂಗಿರಸಃ, ವಾಮದೇವ್ಯಃ, ಗೌತಮಃ ಅಥವಾ ಆಂಗಿರಸಃ, ವಾಮದೇವ್ಯಃ, ಬಾರ್ಹದುಕ್ಥಃ |
| ಔಶನಸಾಃ | ಆಂಗಿರಸಃ, ಗೌತಮಃ, ಔಶನಸಃ |
| ರಹೂಗಣಾಃ | ಆಂಗಿರಸಃ, ರಾಹೂಗಣಃ, ಗೌತಮಃ |
| ಸೋಮರಾಜಕಾಃ | ಆಂಗಿರಸಃ, ಸೌಮರಾಜ್ಯಃ, (ಸೋಮರಾಜಕಃ), ಗೌತಮಃ |
| ಬೃಹದುಕ್ಥಾಃ | ಆಂಗಿರಸಃ, ಬಾರ್ಹದುಕ್ಥಃ, ಗೌತಮಃ ಅಥವಾ ಆಂಗಿರಸಃ, ವಾಮದೇವಃ, ಬಾರ್ಹದುಕ್ಥಃ |
| ಉತಥ್ಯಾಃ | ಆಂಗಿರಸಃ, ಔತಥ್ಯಃ, ಗೌತಮಃ |
| ಔಶಿಜಾಃ | ಆಂಗಿರಸಃ, ಔಶಿಜಃ, ಕಾಕ್ಷೀವತಃ ಅಥವಾ ಆಂಗಿರಸಃ, ಆಯಾಸ್ಯಃ, ಔಶಿಜಃ, ಗೌತಮಃ, ಕಾಕ್ಷೀವತಃ |
| ರಾಘುವಾಃ | ಆಂಗಿರಸಃ, ರಾಘುವಃ, ಗೌತಮಃ |

## ಅಂಗಿರೋಗಣೇಷು ಕೇವಲಾಂಗಿರಸಃ

| | |
|---|---|
| ಹರಿತಾಃ | ಆಂಗಿರಸಃ, ಆಂಬರೀಷಃ, ಯೌವನಾಶ್ವಃ ಅಥವಾ ಮಾಂಧಾತಾ, ಆಂಬರೀಷಃ, ಯೌವನಾಶ್ವಃ |
| ಕುತ್ಸಾಃ | ಆಂಗಿರಸಃ, ಮಾಂಧಾತ್ರಃ, ಕೌತ್ಸಃ |
| ಕಣ್ವಾಃ | ಆಂಗಿರಸಃ, ಆಜಮೀಢಃ, ಕಾಣ್ವಃ ಅಥವಾ ಆಂಗಿರಸಃ, ಘೌರಃ, ಕಾಣ್ವಃ |

| | |
|---|---|
| ರಥೀತರಾಃ | ಆಂಗಿರಸಃ, ವೈರೂಪಃ, ರಾಥೀತರಃ ಅಥವಾ ಆಂಗಿರಸಃ, ವೈರೂಪಃ, ಪಾರ್ಷದಶ್ವಃ ಅಥವಾ ಅಷ್ಟಾದಂಷ್ಟ್ರಃ, ವೈರೂಪಃ, ಪಾರ್ಷದಶ್ವಃ |
| ವಿಷ್ಣುವೃದ್ಧಾಃ | ಆಂಗಿರಸಃ, ಪೌರುಕುತ್ಸ್ಯಃ, ತ್ರಾಸದಸ್ಯವಃ |
| ಮುದ್ಗಲಾಃ | ಆಂಗಿರಸಃ, ಭಾರ್ಮ್ಯಾಶ್ವ, ಮೌದ್ಗಲ್ಯಃ ಅಥವಾ ತಾರ್ಕ್ಷ್ಯಃ, ಭಾರ್ಮ್ಯಾಶ್ವಃ, ಮೌದ್ಗಲ್ಯಃ ಅಥವಾ ಆಂಗಿರಸಃ, ತಾರ್ಕ್ಷ್ಯಃ, ಮೌದ್ಗಲ್ಯಃ |

## ವಿಶ್ವಾಮಿತ್ರಗಣಾಃ

| | |
|---|---|
| ಕುಶಿಕಾಃ | ವೈಶ್ವಾಮಿತ್ರ, ದೇವರಾತಃ, ಔದಲಃ |
| ಲೋಹಿತಾಃ | ವೈಶ್ವಾಮಿತ್ರ, ಆಷ್ಟಕಃ, ಲೌಹಿಕಃ ಅಥವಾ ವೈಶ್ವಾಮಿತ್ರಃ, ಮಾಧುಚ್ಛಂದಸಃ, ಅಷ್ಟಕಃ ಅಥವಾ ವಿಶ್ವಾಮಿತ್ರಃ, ಆಷ್ಟಕಃ |
| ರೌಕ್ಷಕಾಃ | ವೈಶ್ವಾಮಿತ್ರಃ, ಗಾಥಿನಃ, ರೈವಣಃ ಅಥವಾ ವೈಶ್ವಾಮಿತ್ರಃ, ರೌಕ್ಷಕಃ, ರೈವಣಃ |
| ಕಾಮಕಾಯನಾಃ | ವೈಶ್ವಾಮಿತ್ರಃ, ದೇವಶ್ರವಸಃ, ದೈವತರಸಃ |
| ಅಜಾಃ | ವೈಶ್ವಾಮಿತ್ರಃ, ಮಧುಚ್ಛಂದಸಃ, ಆಜಃ ಅಥವಾ ವೈಶ್ವಾಮಿತ್ರಃ, ಆಶ್ಮರಥಃ, ವಾಧೂಲಃ |
| ಕತಾಃ | ವೈಶ್ವಾಮಿತ್ರಃ, ಕಾತ್ಯಃ, ಆತ್ಕೀಲಃ |
| ಧನಂಜಯಾಃ | ವೈಶ್ವಾಮಿತ್ರಃ, ಮಾಧುಚ್ಛಂದಸಃ, ಧಾನಂಜಯಃ ಅಥವಾ ವೈಶ್ವಾಮಿತ್ರಃ, ಮಾಧುಚ್ಛಂದಸಃ, ಆಘಮರ್ಷಣಃ |
| ಅಘಮರ್ಷಣಾಃ | ವೈಶ್ವಾಮಿತ್ರಃ, ಆಘಮರ್ಷಣಃ, ಕೌಶಿಕಃ |
| ಪೂರಣಾಃ | ವೈಶ್ವಾಮಿತ್ರಃ, ಪೌರುಣಃ ಅಥವಾ ವೈಶ್ವಾಮಿತ್ರಃ, ದೇವರಾತಃ, ಪೌರಣಃ |
| ಇಂದ್ರಕೌಶಿಕಾಃ | ವೈಶ್ವಾಮಿತ್ರಃ, ಇಂದ್ರಕೌಶಿಕಃ |
| ಆಶ್ಮರಥ್ಯಾಃ | ವೈಶ್ವಾಮಿತ್ರಃ, ಆಶ್ಮರಥ್ಯಃ, ವಾಧುಲಃ |
| ಸಾಹುಲಾಃ | ವೈಶ್ವಾಮಿತ್ರಃ, ಸಾಹುಲಃ, ಮಾಹುಲಃ |
| ಗಾಥಿನಾಃ | ವೈಶ್ವಾಮಿತ್ರಃ, ಗಾಥಿನಃ, ರೈಣವಃ (ವೇಣುವಾಃ) (ರೇಣವಃ) (ಉದರೇಣವಃ) |
| ವೈಣವಾಃ | ವೈಶ್ವಾಮಿತ್ರಃ, ಗಾಥಿನಃ, ವೈಣವಃ |
| ಹಿರಣ್ಯರೇತಸಃ | ವೈಶ್ವಾಮಿತ್ರಃ, ಹೈರಣ್ಯರೇತಸಃ |
| ಸುವರ್ಣರೇತಸಃ | ವೈಶ್ವಾಮಿತ್ರಃ, ಸೌವರ್ಣರೇತಸಃ |
| ಕಪೋತರೇತಸಃ | ವೈಶ್ವಾಮಿತ್ರಃ, ಕಾಪೋತರೇತಸಃ |

| | |
|---|---|
| ಶಾಲಂಕಾಯನಾಃ | ವೈಶ್ವಾಮಿತ್ರಃ, ಶಾಲಂಕಾಯನಃ, ಕೌಶಿಕಃ |
| ಘೃತಕೌಶಿಕಾಃ | ವೈಶ್ವಾಮಿತ್ರಃ, ಘೃತಕೌಶಿಕಃ |
| ಕಥಕಾಃ | ವೈಶ್ವಾಮಿತ್ರಃ, ಕಾಥಕಃ |
| ರೌಹಿಣಾಃ | ವೈಶ್ವಾಮಿತ್ರಃ, ಮಾಧುಚ್ಛಂದಸಃ, ರೌಹಿಣಃ |

## ಭೃಗುಗಣಾಃ

| | |
|---|---|
| ವತ್ಸಾಃ | ಭಾರ್ಗವಃ, ಚ್ಯಾವನಃ, ಆಪ್ನವಾನಃ, ಔರ್ವಃ, ಜಾಮದಗ್ನ್ಯಃ ಅಥವಾ ಭಾರ್ಗವಃ, ಔರ್ವಃ, ಜಾಮದಗ್ನ್ಯಃ ಅಥವಾ ಭಾರ್ಗವಃ, ಚ್ಯಾವನಃ, ಆಪ್ನವಾನಃ |
| ಬಿದಾಃ | ಭಾರ್ಗವಃ, ಚ್ಯಾವನಃ, ಆಪ್ನವಾನಃ, ಔರ್ವಃ, ಬೈದಃ ಅಥವಾ ಭಾರ್ಗವಃ, ಔರ್ವಃ, ಜಾಮದಗ್ನ್ಯಃ |
| ಆರ್ಷ್ಟಿಷೇಣಾಃ | ಭಾರ್ಗವಃ, ಚ್ಯಾವನಃ, ಆಪ್ನವಾನಃ, ಆರ್ಷ್ಟಿಷೇಣಃ, ಆನೂಪಃ ಅಥವಾ ಭಾರ್ಗವಃ, ಆರ್ಷ್ಟಿಷೇಣಃ, ಆನೂಪಃ |
| ವಾತ್ಸ್ಯಾಃ | ಭಾರ್ಗವಃ, ಚ್ಯಾವನಃ, ಆಪ್ನವಾನಃ |
| ವತ್ಸಪುರೋಧಸೌ | ಭಾರ್ಗವಃ, ಚ್ಯಾವನಃ, ಆಪ್ನವಾನಃ, ವಾತ್ಸ್ಯಃ, ಪೌರೋಧಸಃ |
| ವೈಜಮಥಿತೌ | ಭಾರ್ಗವಃ, ಚ್ಯಾವನಃ, ಆಪ್ನವಾನಃ, ವೈಜಃ, ಮಥಿತಃ |
| ಯಾಸ್ಕಾಃ | ಭಾರ್ಗವಃ, ವೈತಹವ್ಯಃ, ಸಾವೇತಸಃ |
| ಮಿತ್ರಯವಃ | ಭಾರ್ಗವಃ, ವಾಧ್ರ್ಯಶ್ವಃ, ದೈವೋದಾಸಃ ಅಥವಾ ಭಾರ್ಗವಃ, ಚ್ಯಾವನಃ, ದೈವೋದಾಸಃ ಅಥವಾ ವಾಧ್ರ್ಯಶ್ವಃ |
| ವೈನ್ಯಾಃ | ಭಾರ್ಗವಃ, ವೈನ್ಯಃ, ಪಾರ್ಥಃ |
| ಶುನಕಾಃ | ಶೌನಕಃ ಅಥವಾ ಗಾರ್ತ್ಸಮದಃ ಅಥವಾ ಭಾರ್ಗವಃ, ಶೌನಹೋತ್ರಃ, ಗಾರ್ತ್ಸಮದಃ |
| ವೇದವಿಶ್ವಜ್ಯೋತಿಷಃ | ಭಾರ್ಗವಃ, ವೇದಃ, ವೈಶ್ವಜ್ಯೋತಿಷಃ |
| ಶಾಠರಮಾಠರಾಹ | ಭಾರ್ಗವಃ, ಶಾಠರಃ, ಮಾಠರಃ |

## ವಸಿಷ್ಠಗಣಾಃ

| | |
|---|---|
| ವಸಿಷ್ಠಾ | ವಾಸಿಷ್ಠ, ಇಂದ್ರಪ್ರಮದಃ, ಆಭರದ್ವಸುಃ ಅಥವಾ ವಾಸಿಷ್ಠಃ |
| ಕುಂಡಿನಾಃ | ವಾಸಿಷ್ಠಃ, ಮೈತ್ರಾವರುಣಃ, ಕೌಂಡಿನ್ಯ |
| ಉಪಮನ್ಯವಃ | ವಾಸಿಷ್ಠಃ, ಇಂದ್ರಪ್ರಮದಃ, ಆಭರದ್ವಸುಃ (ಆಭರದ್ವಸವ್ಯಃ) |

| | |
|---|---|
| ಪರಾಶರಾಃ | ವಾಸಿಷ್ಠ, ಶಾಕ್ತ್ಯ, ಪಾರಾಶರ್ಯಃ |

**ಅಗಸ್ತ್ಯಗಣಾಃ**

| | |
|---|---|
| ಇಧ್ಮವಾಹಃ | ಆಗಸ್ತ್ಯ, ದಾರ್ಢಚ್ಯುತಃ, ಐಧ್ಮವಾಹಃ ಅಥವಾ ಆಗಸ್ತ್ಯ |
| ಸಾಂಭವಾಹಾಃ | ಆಗಸ್ತ್ಯ, ದಾರ್ಢಚ್ಯುತಃ, ಸಾಂಭವಾಹಃ |
| ಸೋಮವಾಹಾಃ | ಆಗಸ್ತ್ಯ, ದಾರ್ಢಚ್ಯುತಃ, ಸೋಮವಾಹಃ |
| ಯಜ್ಞವಾಹಾಃ | ಆಗಸ್ತ್ಯ, ದಾರ್ಢಚ್ಯುತಃ, ಯಜ್ಞವಾಹಃ |
| ದರ್ಭವಾಹಾಃ | ಆಗಸ್ತ್ಯ, ದಾರ್ಢಚ್ಯುತ, ದರ್ಭವಾಹಃ |
| ಸಾರವಾಹಾಃ | ಆಗಸ್ತ್ಯ, ದಾರ್ಢಚ್ಯುತಃ, ಸಾರವಾಹಃ |
| ಅಗಸ್ತಯಃ | ಆಗಸ್ತ್ಯ, ಮಾಹೇಂದ್ರಃ, ಮಾಯೋಭವಃ |
| ಪೂರ್ಣಮಾಸಾಃ | ಆಗಸ್ತ್ಯ, ಪೌರ್ಣಮಾಸಃ, ಪಾರುಣಃ |
| ಹಿಮೋದಕಾಃ | ಆಗಸ್ತ್ಯ, ಹೈಮವರ್ಚಿಃ, ಹೈಮೋದಕಃ |
| ಪಾಣಿಕಾಃ | ಆಗಸ್ತ್ಯ, ಪೈನಾಯಕಃ, ಪಾಣಿಕಃ |

**ದ್ವಿಗೋತ್ರಾಃ**

| | |
|---|---|
| ಶೌಂಗಶೈಶಿರಯಃ | ಆಂಗಿರಸಃ, ಬಾರ್ಹಸ್ಪತ್ಯಃ, ಭಾರದ್ವಾಜಃ, ಶೌಂಗಃ, ಶೈಶಿರಃ ಅಥವಾ ಆಂಗಿರಸಃ, ಬಾರ್ಹಸ್ಪತ್ಯಃ, ಭಾರದ್ವಾಜಃ, ಕಾತ್ಯಃ, ಆತ್ಕೀಲಃ ಅಥವಾ ಆಂಗಿರಸಃ, ಕಾತ್ಯಃ, ಆತ್ಕೀಲಃ ಅಥವಾ ಭಾರದ್ವಾಜಃ, ಕಾತ್ಯಃ, ಆತ್ಕೀಲಃ |
| ಸಂಕೃತಯಃ | ಆಂಗಿರಸಃ, ಗೌರಿವೀತಿಃ, ಸಾಂಕೃತ್ಯಃ ಅಥವಾ ಶಾಕ್ತ್ಯ, ಗೌರಿವೀತಿಃ, ಸಾಂಕೃತ್ಯಃ |
| ಲೌಗಾಕ್ಷಯಃ | ಕಾಶ್ಯಪಃ, ಅವತ್ಸಾರಃ, ವಾಸಿಷ್ಠಃ ಅಥವಾ ಕಾಶ್ಯಪಃ, ಅವತ್ಸಾರಃ, ಅಸಿತಃ |
| ದೇವರಾತಾಃ | ವೈಶ್ವಾಮಿತ್ರಃ, ದೇವರಾತಃ, ಔದಲಃ |
| ಧನಂಜಯಃ | ವಿಶ್ವಾಮಿತ್ರಃ, ಮಾಧುಚ್ಛಂದಸಃ, ಧಾನಂಜಯಃ |
| ಜಾತೂಕರ್ಣ್ಯಾಃ | ವಾಸಿಷ್ಠ, ಆತ್ರೇಯ, ಜಾತೂಕರ್ಣ್ಯಃ |
| ವಾಮರಥ್ಯಾದಯಃ | ಪೂರ್ವಮುಕ್ತಾಃ |
| ಕಪಿಲಾಃ | ಪೂರ್ವೋಕ್ತಋಕ್ಷಾಂತರ್ಗತಾಃ। ಆಂಗಿರಸಃ, ಬಾರ್ಹಸ್ಪತ್ಯಃ, ಭಾರದ್ವಾಜಃ, ವಾಂದನಃ, ಮಾತವಚಸಃ |
| ಕತಾಃ | ವೈಶ್ವಾಮಿತ್ರಃ, ಕಾತ್ಯಃ, ಆತ್ಕೀಲಃ |

ವಿಶ್ವಾಮಿತ್ರಾಂ- ತರ್ಗತಾಃ

ಕ್ಷತ್ರಿಯವೈಶ್ಯೌ ತು ಪುರೋಹಿತಗೋತ್ರಪ್ರವರೌ ಇತಿ ಸರ್ವಸಿದ್ಧಾಂತಃ । ಸ್ವಗೋತ್ರಾಜ್ಞಾನೇ ಉಪನಯನೇ ಯಃ ಆಚಾರ್ಯಃ ತದ್ಗೋತ್ರಪ್ರವರೈರೇವ ವಿವಾಹಾವಿವಾಹೌ, ಕರ್ಮಾಣಿ ಚ ।

ಆಚಾರ್ಯಗೋತ್ರಪ್ರವರಾನಭಿಜ್ಞಸ್ತು ದ್ವಿಜಃ ಸ್ವಯಮ್ ।
ದತ್ತ್ವಾತ್ಮಾನಂ ತು ಕಸ್ಮೈಚಿತ್ತದ್ಗೋತ್ರಪ್ರವರೋ ಭವೇತ್ ।

ಅಥವಾ

ಗೋತ್ರಸ್ಯತ್ವಪರಿಜ್ಞಾನೇ ಕಾಶ್ಯಪಂ ಗೋತ್ರಮುಚ್ಯತೇ ।
ಯಸ್ಮಾದಾಹ ಶ್ರುತಿಃ ಸರ್ವಾಃ ಪ್ರಜಾಃ ಕಶ್ಯಪಸಂಭವಾಃ ॥

★ ★ ★

